# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಆಚಾರ್ಯ, ಶ್ರೀಹರಿ, ಕಮಲಂ ಅರಸು
ಬಿ. ವಿಲ್ಸನ್, ರಾಂಚಂದ್ರ ಕೊಪ್ಪಲು
ಮುಖಪುಟ : ಕಾಶಿಯಲ್ಲಿ 'ಗಂಗೆ'ಗೆ ಸಂಜೆ ಆರತಿ. ಚಿತ್ರ : ಬಿ. ಮೈತ್ರಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ತಿರುವಳ್ಳುವರ್ ಮತ್ತು ಸರ್ವಜ್ಞರು ಬೆಂಗಳೂರು ಮತ್ತು ಚೆನ್ನೈಗಳಲ್ಲಿ ಶಾಂತವಾಗಿ ರಾರಾಜಿಸುತ್ತಿರುವುದರಿಂದ ಕರ್ನಾಟಕ ಮತ್ತು ತಮಿಳುನಾಡುಗಳ ನಡುವೆ ಸಾಮರಸ್ಯ ಸ್ಥಾಪನೆಗೊಳ್ಳುತ್ತದೆಂದು ಎರಡೂ ರಾಜ್ಯಗಳಲ್ಲಿ, ವಿಶೇಷವಾಗಿ ನಮ್ಮ ರಾಜ್ಯದಲ್ಲಿ, ಆಳುವ ಪಕ್ಷಗಳ ನೇತಾರರು, ಸಾಹಿತಿಗಳು ಮತ್ತು ಚಲನಚಿತ್ರ ತಾರೆಯರು ಸಮಾಧಾನದ ಮಾತುಗಳನ್ನಾಡಿರುವುದು ಸ್ವಾಗತಾರ್ಹವಾಗಿದೆ. ಉತ್ತಮ ಬಾಂಧವ್ಯದ ನೈಜ ನಿದರ್ಶನ, ದೂರದರ್ಶಿತ್ವ ಮೊದಲಾದ ಪದಗುಚ್ಛಗಳಿಂದ ಯಡಿಯೂರಪ್ಪ ಮತ್ತು ಕರುಣಾನಿಧಿಯವರ ಮುತ್ಸದ್ದಿತನವನ್ನು ಸ್ವಾಗತಿಸಲಾಗಿದೆ. ಕರುಣಾನಿಧಿಯವರ ಒಬ್ಬ ಮಗಳಿಗೆ ಬೆಂಗಳೂರಿನ ಬಳಿ ಒಂದು ದೊಡ್ಡ ತೋಟದ ಮನೆ ಇದೆಯೆಂಬ ಸಮಾಚಾರವು ಈ ಸಂದರ್ಭದಲ್ಲಿ ಕನ್ನಡಿಗರಿಗೆಲ್ಲಾ ತಿಳಿದು ತಂಪಿನ ಅನುಭವವಾಗಿರಬೇಕು. ಈ ಹಿಂದೆ ತೋಟದ ಒಡತಿಯ ತಂದೆ ಅಲ್ಲಿಗೆ ಎಷ್ಟು ಬಾರಿ ಭೇಟಿನೀಡಿ ವಿರಾಮ ಪಡೆದಿದ್ದರೆಂಬುದು ಪ್ರಕಟವಾಗಿಲ್ಲ. ಅದು ಅಪ್ರಸ್ತುತ ಕೂಡ. ರಾಜಕಾರಣದ ಇಂದಿನ ಬೆಳವಣಿಗೆಯಲ್ಲಿ ತಿರುವಳ್ಳುವರ್ ಮತ್ತು ಸರ್ವಜ್ಞರ ಪ್ರತಿಮೆಗಳು ಎಲ್ಲೋ ಮೂಲೆಯಲ್ಲಿ ಮುಸುಕಿನ ತೆರೆಯಲ್ಲಿ ಹುದುಗಿ ಕುಳಿತಿರುವುದರ ಬದಲು ಇನ್ನು ಮುಂದೆ ಕೆಲವು ಹಕ್ಕಿಗಳಿಗೆ ಆಸರೆ ನೀಡುವ ಸ್ಥಾವರಗಳಾಗಿ ಬದಲಾಗಿರುವುದು ಯಾರಿಗಲ್ಲದಿದ್ದರೂ ಅವನ್ನು ಕೆತ್ತಿದ ಶಿಲ್ಪಿಗಳಿಗೆ ಗೌರವ ನೀಡಿದಂತಾಗಿದೆ. ಒಂದು ಪ್ರಶ್ನೆಯಂತೂ ಯಕ್ಷಪ್ರಶ್ನೆಯಾಗಿ ಉಳಿದಿದೆ. ಈಗ ನೀಡಲಾಗಿರುವ ಹೇಳಿಕೆಗಳೆಲ್ಲಾ ನಿಜವಾದ ಭಾವನೆಗಳ ಅಭಿವ್ಯಕ್ತಿಯಾಗಿದ್ದರೆ, ಈವರೆಗೆ ಪ್ರತಿಮೆಗಳ ಅನಾವರಣವನ್ನು ಇದೇ ಸಾಹಿತಿ ಸಂತರು ವಿರೋಧಿಸಿದ್ದುದೇಕೆ ? ನಮ್ಮ ಹಿರಿಯ ''ಕನ್ನಡ ಕಾರ್ಯಕರ್ತ'' ಡಾ|| ಎಂ. ಚಿದಾನಂದಮೂರ್ತಿಯವರು ಅಂದು ಸಂಶೋಧನಾ ಲೇಖನ ಬರೆದು ತಿರುವಳ್ಳುವರ್-ಸರ್ವಜ್ಞರ ನಡುವಿನ ಸಾಮ್ಯವನ್ನು ಗುರುತಿಸಿರಲಿಲ್ಲವೇಕೆ ? ಯಡಿಯೂರಪ್ಪನವರ ಮುಂದಾಳತ್ವದಲ್ಲಿ ಮತ್ತು ಮುಂದಾಲೋಚನೆಯ ಹಿನ್ನೆಲೆಯಲ್ಲಿ ಇದು ನಡೆಯಲಿದ್ದುದರಿಂದ ಈಗ ಸಂಶೋಧನಾ ಲೇಖನ ಬರೆಯಲು ಸರಿಯಾದ ಸಮಯವೆಂದು ಮಾನ್ಯ ಡಾ|| ಮೂರ್ತಿಯವರಿಗೆ ಅರಿವಾಗಿದ್ದಿರಬೇಕು. ಏನೇ ಇರಲಿ, ಪ್ರತಿಮೆಗಳ ಅವಾಂತರ ಸಂಸ್ಕೃತಿಯನ್ನು ಅತಿಶಯವಾಗಿ ಆದರಿಸದ 'ಹೊಸತು' ಸಹ ತಿರುವಳ್ಳುವರ್ ಮತ್ತು ಸರ್ವಜ್ಞರ ಧಾಂ-ಧೂಂ ಅನಾವರಣವನ್ನು ವಿರೋಧಿಸುವುದಿಲ್ಲ. ಆದರೆ ಇದರಿಂದ ಏನೋ ಮಹತ್ಸಾಧನೆ ಆಯಿತೆಂಬ ಉತ್ಸಾಹವನ್ನು ಆವೇಶದಿಂದ ಸ್ವಾಗತಿಸಲು ಅಳುಕನ್ನು ವ್ಯಕ್ತಪಡಿಸಿದರೆ ಯಾರೂ ತಪ್ಪಾಗಿ ತಿಳಿಯುವುದಿಲ್ಲವೆಂಬ ಭರವಸೆಯನ್ನಿಟ್ಟುಕೊಳ್ಳುತ್ತದೆ. ನಾಳೆ ನಮ್ಮೆರಡು ರಾಜ್ಯಗಳ ನಡುವೆ ಯಾವುದೇ ಭಿನ್ನಾಭಿಪ್ರಾಯ ಉಂಟಾದರೆ ಈ ಎರಡು ಪ್ರತಿಮೆಗಳಿಗೆ ಸರ್ಕಾರಗಳು ರಕ್ಷಣೆ ಒದಗಿಸಬೇಕಾದ ಸನ್ನಿವೇಶ ನಿರ್ಮಾಣವಾಗದಿರಲೆಂದು 'ಹೊಸತು' ಆಶಿಸುತ್ತದೆ.

''ಅವಾಂತರ ಸಂಸ್ಕೃತಿ'' ಎಂದಾಗ ಅನಗತ್ಯವಾಗಿ ರಾಜ್ಯದ ಬೊಕ್ಕಸದಿಂದ ಲಕ್ಷಗಟ್ಟಲೆ ಹಣವನ್ನು ದುಂದುವೆಚ್ಚ ಮಾಡಿದ್ದು ಕೂಡ ಸೇರಿಕೊಳ್ಳುತ್ತದೆ. ಸರ್ವಜ್ಞ ಮೂರ್ತಿಯ ಅನಾವರಣಕ್ಕೆ ವಿಮಾನದಲ್ಲಿ ಹಾರಿದವರು ಹಲವರು, ವೋಲ್ವೊ ಬಸ್ಸುಗಳಲ್ಲಿ ತೆರಳಿದವರು ನೂರಾರು ಮಂದಿ. ಕೆಲವರಂತೂ ಬಲವಂತದ ಮಾಘಸ್ನಾನ ಮಾಡಬೇಕಾಗಿಬಂದಿತಲ್ಲಾ ಎಂದು ನೊಂದಿದ್ದೂ ಉಂಟು. ಸರ್ವಜ್ಞನ ಲೋಕಜ್ಞಾನಕ್ಕೆ ಅಷ್ಟೇನೂ ಸಮೀಪವಲ್ಲದಂತಹ ಕಾರ್ಯಕ್ರಮ ಇದೆಂದು ಅವರ ನಂಬಿಕೆ ಆಗಿದ್ದುದರಿಂದ ಅವರಿಗೆ ಮುಜುಗರವಾಗಿದ್ದಿರಬೇಕು. ಸುಮಾರು ಎರಡು ಸಾವಿರ ಕನ್ನಡಿಗರು ಮತ್ತು ಕನ್ನಡದ ಕಟ್ಟಾಳುಗಳು ರಾಜ್ಯದ ಪ್ರತಿನಿಧಿಗಳಾಗಿ ಚೆನ್ನೈಗೆ ಹೋದರೆ ಅವರೆಲ್ಲರ ಊಟೋಪಚಾರಕ್ಕೆ ಅಂದಾಜು ಎಷ್ಟು ವೆಚ್ಚವಾಗಿರಬಹುದು ! ರಾಜ್ಯದಲ್ಲಿ ಜಲ ಸಾಕಷ್ಟು ಸುರಿದಿಲ್ಲದ ಆತಂಕದ ವೇಳೆಯಲ್ಲಿ ನಾವು ಜಲಪಾತೋತ್ಸವ ನಡೆಸುವ ವೀರರು ಮತ್ತು ಸರ್ವಜ್ಞನಿಗಾಗಿ ''ಕಿಬ್ಬದಿಯ ಕೀಲು'' ಮುರಿದುಕೊಳ್ಳಲು ಸಿದ್ಧರು. ಮಠಗಳಿಗೆ ಹಣವನ್ನೆರಚುವ ಯಡಿಯೂರಪ್ಪ ಸರ್ಕಾರದ ಕುಯುಕ್ತಿಯಿಂದ ಭಿನ್ನವಾಗಿದ್ದಿದ್ದರೆ ಸರ್ವಜ್ಞನ ಅನಾವರಣವನ್ನು ಇನ್ನೂ ಹೆಚ್ಚು ಹಾರ್ದಿಕವಾಗಿ ಸ್ವಾಗತಿಸಬಹುದಿತ್ತು.

''ಉತ್ತಮ ಬಾಂಧವ್ಯ''ದ ಕತೆಯ ಮುಂದಿನ ಭಾಗದ ಬಗ್ಗೆ ಅಸೂಯೆ ಅನಗತ್ಯ, ಆದರೆ ತಿಳುವಳಿಕೆ ಆರೋಗ್ಯಕರ. ರಾಷ್ಟ್ರದಲ್ಲಿ ದೆಹಲಿ ಕೇಂದ್ರಿತ ರಾಜಕೀಯವು ಈಗಿಗಿಂತ ಬೇರೆಯಾಗಿರಬೇಕೆಂದು ಅದ್ವಾನಿಯವರ ಪಕ್ಷವು ಆಶಿಸುವುದು ಆಕ್ಷೇಪಾರ್ಹವಲ್ಲ. ಆದರೆ ಕರ್ನಾಟಕ - ತಿರುವಳ್ಳುವರ್ – ಸರ್ವಜ್ಞ ಇದಕ್ಕೆ ಏಣಿಯ ಮೆಟ್ಟಿಲುಗಳಾಗಬಾರದು. ಯಡಿಯೂರಪ್ಪನವರ ನಿಜವಾದ ''ದೂರದರ್ಶಿತ್ವ'' ಇರುವುದು ಇದರಲ್ಲಿ, ಅಂದರೆ, ಕರುಣಾನಿಧಿ ಪಕ್ಷವನ್ನು ಬರುವ ವರ್ಷಗಳಲ್ಲಿ ಭಾರತೀಯ ಜನತಾ ಪಕ್ಷದತ್ತ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೨ ಸೆಪ್ಟೆಂಬರ್ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೯೫, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@dataone.in
hosathu@gmail.com
website : www.navakarnataka.com
http://navakarnataka.blogspot.com
http://hosathu.blogspot.com


**ಸಂಪಾದಕೀಯ**

# ಯಶಪಾಲ್ ಸಮಿತಿಯ ವರದಿ

ಶಿಕ್ಷಣವನ್ನು ಕುರಿತಂತೆ ನಮ್ಮಲ್ಲಿ ಹಲವು ವರದಿಗಳು ಬಂದಿವೆ. ಆಯೋಗಗಳು ಲೆಕ್ಕವಿಲ್ಲದಷ್ಟು ಆಗಿಹೋಗಿವೆ. ಇತ್ತೀಚೆಗೆ ''ಜ್ಞಾನ ಆಯೋಗ'' ರಚಿಸಲಾಗಿತ್ತು. ಅದರ ಅಧ್ಯಕ್ಷ ಸ್ಯಾಮ್ ಪಿಟ್ರೋಡಾ. ದೂರಸಂಪರ್ಕ ವಿಭಾಗದಲ್ಲಿ ಸಾಧಿಸಿದ್ದನ್ನೆಲ್ಲಾ ಶಿಕ್ಷಣದ ಕ್ಷೇತ್ರದಲ್ಲೂ ಅವರು ಸಾಧಿಸುತ್ತಾರೆಂದು ಬಗೆದು ಆ ಆಯೋಗವನ್ನು ರಚಿಸಲಾಗಿತ್ತು. ತಾವದರಲ್ಲಿ ಯಶಸ್ವಿಯಾಗುವುದಾಗಿ ಸ್ವತಃ ಪಿಟ್ರೋಡಾ ಸಹ ಬಗೆದಿದ್ದಾರೆ. ಆದರೆ ಆರಂಭದಲ್ಲೇ ಅವರ ಆಯೋಗವು ಬಿಕ್ಕಟ್ಟನ್ನು ಸೃಷ್ಟಿಸಿಕೊಂಡಿತು. ಪಿಟ್ರೋಡಾ ಯಾವ ಪ್ರಜಾಪ್ರಭುತ್ವವಾದಿ ತೀರ್ಮಾನಕ್ಕೂ ಬದ್ಧರಾಗುವುದಿಲ್ಲವೆಂದು ಆಕ್ಷೇಪಿಸಿ ಡಾ॥ ಪಿ. ಎಂ. ಭಾರ್ಗವ ತಮ್ಮ ಉಪಾಧ್ಯಕ್ಷ ಸ್ಥಾನವನ್ನು ತ್ಯಜಿಸಿದರು. ಆಯೋಗವು ವರದಿ ಸಲ್ಲಿಸುವ ಬದಲು ಆಯೋಗದ ಅಧ್ಯಕ್ಷರು ಪ್ರಧಾನಿಗೆ ದೀರ್ಘಪತ್ರ ಬರೆದು ತಮ್ಮ ಶಿಫಾರಸುಗಳನ್ನು ತಿಳಿಸಿದ್ದಾರೆ. ಶಿಫಾರಸುಗಳ ಕೊರತೆಯಿಂದಾಗಿಯೇ ಶಿಕ್ಷಣ ಕ್ಷೇತ್ರವು ಕೊರಗುತ್ತಿದೆಯೆಂಬ ಭ್ರಮೆ ಪಿಟ್ರೋಡಾ ಅವರನ್ನು ಆವರಿಸಿದೆ. ಅದರಿಂದಾಗಿ ಅವರ ''ವರದಿ''ಯು ನಿರರ್ಥಕವಾಗಿ ಪರಿಣಮಿಸುವುದು ಅನಿವಾರ್ಯ. ನಂತರ ಬಂದದ್ದು ಯಶಪಾಲ್ ಆಯೋಗ. ಡಾ॥ ಯಶಪಾಲ್ ಒಬ್ಬ ಭೌತಶಾಸ್ತ್ರ ತಜ್ಞರು, ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಮಾಜಿ ಅಧ್ಯಕ್ಷರು, ಉನ್ನತ ಶಿಕ್ಷಣ ವ್ಯವಸ್ಥೆಯ ಆಳವಾದ ಪರಿಚಯ ಇರುವವರು. ಡಾ॥ ಡಿ. ಎಸ್. ಕೊಠಾರಿ ನೇತೃತ್ವದ ಆಯೋಗದ ೧೯೬೬ರ ವರದಿಯ ನಂತರದಲ್ಲಿ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ಯಶಪಾಲ್ ಆಯೋಗದ ವರದಿಯಷ್ಟು ಖಚಿತವಾದ್ದು, ನಿರ್ದಿಷ್ಟವಾದ್ದು, ಬೇರೊಂದಿಲ್ಲವೆನ್ನಬಹುದು. ಕೊಠಾರಿ ಆಯೋಗವು ಸಮಗ್ರ ಶಿಕ್ಷಣದ ನೀತಿಯನ್ನು ಪ್ರತಿಪಾದಿಸಿತ್ತು; ಅದರಲ್ಲಿ ಉನ್ನತ ಶಿಕ್ಷಣವೂ ಸೇರಿತ್ತು. ಯಶಪಾಲ್ ಆಯೋಗವು ಉನ್ನತ ಶಿಕ್ಷಣಕ್ಕೆ ಮಾತ್ರ ಸೀಮಿತವಾದದ್ದು. ೧೯೮೬ರ ನೂತನ ಶಿಕ್ಷಣ ನೀತಿಯು ಇಡಿಯಾಗಿ ಶಿಕ್ಷಣ ಕ್ಷೇತ್ರದ ಪರಾಮರ್ಶೆ ನಡೆಸಲು ಯತ್ನಿಸಿತಾದರೂ ವಿಶೇಷವಾಗಿ ಉನ್ನತ ಶಿಕ್ಷಣ ವ್ಯವಸ್ಥೆಯ ವಿಸ್ತರಣೆಗೆ ಗಂಭೀರವಾದ ಸಲಹೆಗಳನ್ನೇನೂ ನೀಡಿರಲಿಲ್ಲ. ಹೀಗಾಗಿ ಯಶಪಾಲ್ ವರದಿಯು ಬಹಳ ಪ್ರಮುಖವಾದ ಸ್ಥಾನವನ್ನು ಪಡೆಯುತ್ತದೆ. ಸರ್ವಾಂಗೀಣವಾಗಿ ಉನ್ನತ ಶಿಕ್ಷಣ ವ್ಯವಸ್ಥೆಯ ಎಲ್ಲ ಆಯಾಮಗಳನ್ನು ಗುರುತಿಸಿ ದೂರದೃಷ್ಟಿಯ ಬದಲಾವಣೆಗಳನ್ನು ಮತ್ತು ಅವನ್ನು ಕಾರ್ಯಗತಗೊಳಿಸಲು ಅಗತ್ಯವಾದ ಮೂಲಭೂತ ಕ್ರಮಗಳನ್ನು ಸೂಚಿಸುವುದು ಯಶಪಾಲ್ ವರದಿಯ ವೈಶಿಷ್ಟ್ಯ. ಇಷ್ಟು ಪ್ರಾಯೋಗಿಕವಾದ, ಪ್ರಗತಿಪರತೆಯ, ವೈಜ್ಞಾನಿಕ ಶೈಕ್ಷಣಿಕ ಪದ್ಧತಿಯ ಶಿಕ್ಷಣ ನೀತಿಯನ್ನು ಉನ್ನತ ಶಿಕ್ಷಣದ ಸಂದರ್ಭದಲ್ಲಿ ಪ್ರತಿಪಾದಿಸಿದ್ದೇ ವಿರಳವಾದ್ದರಿಂದ ಯಶಪಾಲ್ ವರದಿಯು ತಜ್ಞರೆಲ್ಲರ ಗಮನವನ್ನು ಸೆಳೆಯುತ್ತದೆಂದು ನಿರೀಕ್ಷಿಸಬಹುದಾಗಿದೆ. ಆದರೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವರದಿಯನ್ನು ಎಷ್ಟು ಗೌರವಿಸುತ್ತಾರೆಂಬುದು ತಿಳಿಯದು. ಇಂದಿನ ಖಾಸಗೀಕರಣದ ಅಮಲಿನಲ್ಲಿ ಯಶಪಾಲ್ ವರದಿಯು ಮನಮೋಹನ ಸಿಂಗರಿಗಾಗಲಿ ಕಪಿಲ್ ಸಿಬಲ್‌ಗಾಗಲಿ ಪ್ರಿಯವಾಗುತ್ತದೆಂದು ನಿರೀಕ್ಷಿಸುವುದು ಕಷ್ಟಸಾಧ್ಯ. ಸರ್ಕಾರದ ಮೇಲೆ ಒತ್ತಡ ತರುವುದು ಶಿಕ್ಷಣಾಸಕ್ತರ ಕರ್ತವ್ಯ.

ಯಶಪಾಲ್ ಆಯೋಗವು ವಿಶ್ಲೇಷಣಾತ್ಮಕ ವರದಿಯನ್ನು ಸಲ್ಲಿಸುವುದಲ್ಲದೆ ಅಧ್ಯಕ್ಷ ಯಶಪಾಲ್ ಅವರು ಪ್ರಧಾನಿಯವರಿಗೆ ಪತ್ರವೊಂದನ್ನು ಸಲ್ಲಿಸಿ ತಮ್ಮ ಸೂಚನೆಗಳನ್ನು ವಿಮರ್ಶಾತ್ಮಕವಾಗಿ ನೋಡುವುದರ ಜೊತೆಗೆ ಭವಿಷ್ಯದ ಅಗತ್ಯಗಳ ಸಂದರ್ಭಕ್ಕೆ ಪೂರಕವಾದವೆಂದು ಪರಿಗಣಿಸಬೇಕೆಂದು ವಿನಂತಿಸಿಕೊಂಡಿದ್ದಾರೆ. ವಿಶ್ವವಿದ್ಯಾನಿಲಯಗಳು ಜ್ಞಾನವನ್ನು ತುಣುಕುಗಳಾಗಿ ಪ್ರತ್ಯೇಕಿಸಿ ಅಭಿವೃದ್ಧಿ ಸಾಧಿಸಬಹುದೆಂಬ ತಪ್ಪುಕಲ್ಪನೆ ಹೊಂದಿವೆಯೆಂದು ಹೇಳುವ ಯಶಪಾಲ್ ಒಂದೊಂದೇ ಶಿಸ್ತಿಗೆ ಮೀಸಲಾದ ವಿಶ್ವವಿದ್ಯಾಲಯಗಳ ರಚನೆಯು ಅನುಪಯುಕ್ತ ಮತ್ತು ಅಪೂರ್ಣವೆಂದು ತಿಳಿಸಿದ್ದಾರೆ. ತಂತ್ರಜ್ಞಾನ, ಕೃಷಿ, ಕಾನೂನು, ವೈದ್ಯಕೀಯ (ಮತ್ತು ಸಂಸ್ಕೃತ ?), ಹೀಗೆ ಪ್ರತಿಯೊಂದು ಶಿಸ್ತನ್ನೂ ಬೇರೆ ಶಿಸ್ತುಗಳಿಂದ ದೂರಮಾಡುವುದು ಅಂತರ ಸಂವಹನದ ಸಂಪೂರ್ಣ ಅಭಾವವನ್ನು ಸೃಷ್ಟಿಸುತ್ತದೆಂಬ ಆತಂಕವು ವರದಿಯಲ್ಲಿ ವ್ಯಕ್ತವಾಗಿದೆ. ಹೀಗೇ ಸಾಗಿದರೆ ನಾಳೆ ಸಾಹಿತ್ಯ, ಇತಿಹಾಸ, ವಾಣಿಜ್ಯ, ವಿಜ್ಞಾನ, ಸಮಾಜಶಾಸ್ತ್ರ ಇವುಗಳಿಗೇ ಸೀಮಿತವಾದ ಹೊಸ ವಿಶ್ವವಿದ್ಯಾನಿಲಯಗಳ ರಚನೆಯಾಗಿಬಿಡಬಹುದು. ಇದು ವಿನಾಶಕಾರಿ ಹಾದಿ. ಸೃಜನಶೀಲತೆಗೆ, ಬಹುಶಿಸ್ತೀಯ ಸಂಶೋಧನೆಗಳಿಗೆ ಮತ್ತು ಸಾಮಾಜಿಕ ಅಗತ್ಯಗಳ ಪೂರೈಕೆಗೆ ಇದು ಅಡ್ಡಿಯುಂಟುಮಾಡುತ್ತದೆ. ಉನ್ನತ ಶಿಕ್ಷಣದ ಹೆಸರಿನಲ್ಲಿ ಪದವಿ ಮತ್ತು ಸ್ನಾತಕೋತ್ತರ ವಿಭಾಗಗಳನ್ನು ಸಂಪೂರ್ಣವಾಗಿ ಬೇರ್ಪಡಿಸಿರುವುದು ವಿಶ್ವವಿದ್ಯಾನಿಲಯದ ಅಧ್ಯಾಪಕರನ್ನು ಯುವವಿದ್ಯಾರ್ಥಿಗಳಿಂದ ದೂರಮಾಡಿದೆ. ಒಬ್ಬ ಮೇಧಾವಿ ವಿಜ್ಞಾನಿಗೆ ಹೊಸ ವಿಷಯಗಳ ಬಗೆಗೆ ಆಸಕ್ತಿ ಹೆಚ್ಚುವುದು ಪದವಿ ಮಟ್ಟದ ವಿದ್ಯಾರ್ಥಿಗಳು ಪ್ರಶ್ನಿಸುವುದು ಮತ್ತು ಪ್ರತಿಕ್ರಿಯಿಸುವುದು ಹೆಚ್ಚಾದಾಗ. ಅಂತಹ ಸನ್ನಿವೇಶದ ಮರುಸೃಷ್ಟಿಗೆ ಆದ್ಯತೆ ನೀಡಬೇಕೆಂದು ಯಶಪಾಲ್ ಸೂಚಿಸಿದ್ದಾರೆ. ವಿದೇಶಿ ವಿಶ್ವವಿದ್ಯಾನಿಲಯಗಳನ್ನು ತಂದುಬಿಟ್ಟರೆ ಎಲ್ಲಾ ನೆಟ್ಟಗಾಗುತ್ತದೆಂದು ಭ್ರಮಿಸುವ ಕಪಿಲ್ ಸಿಬಲ್ ಅಂಥವರಿಗೆ ಯಶಪಾಲ್ ಕಿವಿಮಾತು ಪ್ರಸ್ತುತವೆನಿಸುತ್ತದೆ. ಹೆಸರೇ ಇಲ್ಲದ ಯಾವುದೋ ವಿದೇಶಿ ವಿಶ್ವವಿದ್ಯಾನಿಲಯವು ಭಾರತದಲ್ಲಿ ಸ್ಥಾಪನೆಗೊಳ್ಳುವುದು ವ್ಯರ್ಥ. ಅದಕ್ಕೆ ಬದಲಾಗಿ, ಖ್ಯಾತ ವಿದೇಶಿ ವಿಶ್ವವಿದ್ಯಾನಿಲಯಗಳ ಅಧ್ಯಾಪಕ - ಸಂಶೋಧಕರನ್ನು ಆಗಾಗ್ಗೆ ಬರಮಾಡಿಕೊಂಡು ನಮ್ಮ ಅಧ್ಯಾಪಕ - ಸಂಶೋಧಕರು ಅವರೊಟ್ಟಿಗೆ ಕೆಲಸಮಾಡುವಂತೆ ಯೋಜಿಸುವುದು ಸೂಕ್ತ. ಖಾಸಗಿಯಾದುದೆಲ್ಲ ಶ್ರೇಷ್ಠವೆಂಬ ಮೌಢ್ಯವನ್ನು ಬದಿಗಿಟ್ಟು ಸಾರ್ವಜನಿಕ ವಿದ್ಯಾಸಂಸ್ಥೆಗಳನ್ನು ಸರ್ಕಾರವು ಬೆಳೆಸುವುದು ದೇಶದ ಎಲ್ಲ ವರ್ಗಗಳ ವಿದ್ಯಾರ್ಥಿಗಳಿಗೆ ಒಳ್ಳೆಯದೆಂದು ಯಶಪಾಲ್ ವರದಿಯು ಒತ್ತುಕೊಟ್ಟು ಹೇಳಿದೆ. ಹಾಗೆ ಮಾಡುವಾಗ ಖೋಟಾ ಖಾಸಗಿ ವಿದ್ಯಾಸಂಸ್ಥೆಗಳ ವ್ಯಾಪಾರೀಕರಣ, ಕಳಪೆ ಗುಣಮಟ್ಟ, ಕಾನೂನುಬಾಹಿರವಾದ ವಿಸ್ತರಣೆ ಮುಂತಾದ ಪಿಡುಗುಗಳತ್ತ ವರದಿಯು ಗಮನ ಸೆಳೆಯುತ್ತದೆ. ಆಡಳಿತಾತ್ಮಕವಾಗಿ ಉನ್ನತ ಶಿಕ್ಷಣ ಕ್ಷೇತ್ರಗಳ ಎಲ್ಲ ಶಿಸ್ತುಗಳ ಉಸ್ತುವಾರಿಯನ್ನೂ ಒಂದು ಸಂಸ್ಥೆಗೆ ವಹಿಸಿ ಅದರಲ್ಲಿ ಎಲ್ಲರಿಗೂ ಪ್ರಾತಿನಿಧ್ಯ ಕಲ್ಪಿಸುವುದು ಅವಶ್ಯಕವೆಂದು ಯಶಪಾಲ್ ಸೂಚಿಸಿದ್ದಾರೆ. ವಿಶ್ವವಿದ್ಯಾನಿಲಯಗಳ ಸ್ವಾಯತ್ತತೆಗೆ ಧಕ್ಕೆ ಬಾರದಂತೆ ವರ್ತಿಸುವುದು ಈ ಸಂಸ್ಥೆಯ ಕರ್ತವ್ಯ. ಉಪಕುಲಪತಿಗಳ ನೇಮಕಾತಿಯಲ್ಲಿ ತರಬೇಕಾದ ಬದಲಾವಣೆಗಳತ್ತ ಸಹ ಸಮಿತಿಯು ದೃಷ್ಟಿ ಹರಿಸಿದೆ. ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ

ಕಾಲೇಜುಗಳಲ್ಲಿ ಹೆಚ್ಚಿನ ಮುಕ್ತತೆ, ಪ್ರಜಾಪ್ರಭುತ್ವವಾದಿ ಚಿಂತನೆಗೆ ಪ್ರೋತ್ಸಾಹ, ಬಹುಮುಖಿ ಚಿಂತನೆಗೆ ಅಡ್ಡಿಬರುವ ಎಲ್ಲ ಸಂಗತಿಗಳ ನಿವಾರಣೆ, ಶಿಕ್ಷಕರ ತರಬೇತಿ, ವಿಶ್ವವಿದ್ಯಾನಿಲಯ ಮತ್ತು ಉತ್ಪಾದನಾ ಸಂಸ್ಥೆಗಳ ಅಂತಸ್ಸಂಬಂಧ, ಬಹುಶಿಸ್ತೀಯ ಅಧ್ಯಯನ ಮಾದರಿ, ಅಣಬೆಗಳಂತೆ ತಲೆಯೆತ್ತುವ ಖಾಸಗಿ ವಿಶ್ವವಿದ್ಯಾನಿಲಯಗಳು, ಹಣಕಾಸಿನ ಜವಾಬ್ದಾರಿಯನ್ನು ಸರ್ಕಾರವು ಹೊರಬೇಕಾದ ಸಂದರ್ಭಗಳು, ವಿದ್ಯಾರ್ಥಿಗಳ ಸೌಲಭ್ಯಗಳನ್ನು ಹಿಗ್ಗಿಸುವಿಕೆ, ವಿದ್ಯಾರ್ಥಿನಿಯರನ್ನು ಹೆಚ್ಚಿಸಿಕೊಳ್ಳಬೇಕಾದ ಅವಶ್ಯಕತೆ, ಇಡೀ ಶಿಕ್ಷಣ ಪ್ರಕ್ರಿಯೆಯಲ್ಲಿ ಶಿಕ್ಷಕರ ಪಾತ್ರ, ಮುಂತಾದ ಅತ್ಯಂತ ಪ್ರಮುಖ ವಿಷಯಗಳನ್ನು ಜನಪರವಾದ ನಿಟ್ಟಿನಲ್ಲಿ ವಿಶ್ಲೇಷಿಸಿರುವ ಯಶಪಾಲ್ ಆಯೋಗದ ವರದಿಯು ಉನ್ನತ ಶಿಕ್ಷಣ ಕ್ಷೇತ್ರದ ಕಾರ್ಯಪಟುತ್ವಕ್ಕೆ ಚಾಲನೆ ನೀಡಬೇಕಾಗಿದೆ. ಅದಕ್ಕಾಗಿ ವಿದ್ಯಾರ್ಥಿಗಳು, ಪೋಷಕರು, ಅಧ್ಯಾಪಕರು ಹಾಗೂ ಅಧ್ಯಾಪಕ ಸಂಘಗಳು ಮತ್ತು ಔದ್ಯಮಿಕ ಸಂಸ್ಥೆಗಳು ಕಾರ್ಯಪ್ರವೃತ್ತವಾಗಬೇಕಾಗಿದೆ. ಇಂತಹ ಘನವಾದ ವರದಿಯ ಬಗ್ಗೆ ಕಪಿಲ್ ಸಿಬಲ್ ಅಷ್ಟಾಗಿ ಆಸಕ್ತಿ ತೋರದಿರುವುದಕ್ಕೆ ಅವರ ಮಾನಸಿಕ ದೌರ್ಬಲ್ಯ ಮತ್ತು ಸೈದ್ಧಾಂತಿಕ ಹಟಮಾರಿತನ ಕಾರಣವಿರಬಹುದು. ಅವರನ್ನು ಜನಪರವಾದ ಹಾದಿಯಲ್ಲಿ ಮುನ್ನಡೆಯುವಂತೆ ಮಾಡುವುದು ಪ್ರಧಾನಿ ಮನಮೋಹನ ಸಿಂಗ್‌ರ ಕರ್ತವ್ಯವೂ ಆಗಿದೆ. ಸಿಬಲ್ ಮತ್ತು ಸಿಂಗ್ ಶಿಕ್ಷಣ ಕ್ಷೇತ್ರವನ್ನು ಇನ್ನೂ ಹೆಚ್ಚು ಅಶಿಸ್ತು, ಅಕ್ರಮ ಮತ್ತು ಅನ್ಯಾಯಗಳ ಆಗರವನ್ನಾಗಿ ಮಾಡಿದರೆ ಅದು ಅವರ ಕರ್ತವ್ಯಲೋಪವಾಗುತ್ತದೆ. ನಮ್ಮ ದೇಶದ ನಾಗರಿಕ ಸಮಾಜ, ದುಡಿಯುವ ಜನ, ಶ್ರದ್ಧಾವಂತ ಅಧ್ಯಾಪಕ ವರ್ಗ ಮತ್ತು ನಿಷ್ಠಾವಂತ ವಿದ್ಯಾರ್ಥಿವರ್ಗ ಅದನ್ನು ಆಗಗೊಡಕೂಡದು. ನಮ್ಮ ದೇಶದ ಭವಿಷ್ಯಕ್ಕೆ ಶಿಕ್ಷಣವನ್ನು ಮಹತ್ಸಾಧನವನ್ನಾಗಿ ಮಾಡಿಕೊಳ್ಳುವ ಪರ್ವಕಾಲ ಬಂದಿದೆ, ಯಶಪಾಲ್ ವರದಿ ಹಾದಿಯನ್ನು ತೋರಿಸಿದೆ. ಇಂದು ಅವಕಾಶ ಕಳೆದುಕೊಂಡರೆ ನಾಳೆ ಶಿಕ್ಷಣ ಕ್ಷೇತ್ರವನ್ನು ಧೂರ್ತರೇ ಆಕ್ರಮಿಸಿ ಬಹುಸಂಖ್ಯಾತ ಶಿಕ್ಷಣಾರ್ಥಿಗಳನ್ನು ಉಪೇಕ್ಷಿಸಿಬಿಡುತ್ತಾರೆ, ಉನ್ನತ ಶಿಕ್ಷಣವನ್ನು ಹರಾಜಿಗಿಡುತ್ತಾರೆ, ದುಡಿಯುವ ಜನರ ಮಕ್ಕಳನ್ನು ವಿಶ್ವವಿದ್ಯಾನಿಲಯಗಳಿಗೆ ಪ್ರವೇಶಿಸದಂತೆ ನಿರ್ಬಂಧಿಸುತ್ತಾರೆ. ಅದು ದೇಶಕ್ಕೆ ಒಳ್ಳೆಯದಲ್ಲ, ಪ್ರಜೆಗಳಿಗೆ ಹಿತವಲ್ಲ.

## ಕ್ಯೂಬಾಕ್ಕೆ ೫೦ ತುಂಬಿತು – ಭಾರತಕ್ಕೆ ೬೨

೧೯೫೩ರ ಜುಲೈ ೨೬ರಂದು ಕ್ಯೂಬಾದ ಶಸ್ತ್ರಾಗಾರವಾಗಿದ್ದ ಮೋನ್‌ಕ್ಯಾಡಾ ಅರಮನೆಯ ಮೇಲೆ ಫಿಡೆಲ್ ಕ್ಯಾಸ್ಟ್ರೋ ನಾಯಕತ್ವದಲ್ಲಿ ಧಾಳಿ ನಡೆದ ಮೂರು ವರ್ಷಗಳ ನಂತರ ಅಮೆರಿಕಾದ ಭಂಟನಾಗಿದ್ದ ಬಟಿಸ್ಟಾನ ಸರ್ಕಾರ ಪತನವಾಗಿ ಕ್ಯಾಸ್ಟ್ರೋ ಅಧ್ಯಕ್ಷತೆಯಲ್ಲಿ ಹೊಸ ಸಮಾಜವಾದಿ ಕ್ಯೂಬಾದ ಉದಯವಾಯಿತು. ಆ ಯುವರಾಷ್ಟ್ರಕ್ಕೆ ೫೦ ತುಂಬಿದ್ದು ಹರ್ಷ ಮತ್ತು ವಿಜಯದ ಸಂಕೇತ. ೧೯೧೭ರ ಬೋಲ್ಶೆವಿಕ್ ಕ್ರಾಂತಿಯು ಯಶಸ್ವಿಯಾದ ತರುವಾಯದಲ್ಲಿ ಒಂದು ದಿನ ಲೆನಿನ್ ಹೇಳಿದ್ದರಂತೆ, ''ನಾವು ಪ್ಯಾರಿಸ್ ಕಮ್ಯೂನಿನ ದಾಖಲೆಯನ್ನು ಮುರಿದಿದ್ದೇವೆ, ಅದಕ್ಕಿಂತಲೂ ಒಂದು ದಿನ ಹೆಚ್ಚಾಗಿ ಬಾಳಿದ್ದೇವೆ'' ಎಂದು. ಇಂದಿನ ಅತ್ಯಂತ ದೊಡ್ಡ ಭಯೋತ್ಪಾದಕ ಶಕ್ತಿಯಾದ ಅಮೆರಿಕಾ ಇರುವಾಗ ೫೦ ವರ್ಷದ ಬಾಳ್ವೆಯು ಕೇವಲ ಒಂದು ದಾಖಲೆಯಲ್ಲ, ಅದು ಜನಶಕ್ತಿಯ ಉಜ್ವಲ ಪ್ರತೀಕ. ಅಧ್ಯಕ್ಷ ಕ್ಯಾಸ್ಟ್ರೋ ಹತ್ಯೆಗಾಗಿ ಸಂಚುಗಳನ್ನು ಮಾಡುತ್ತಲೇ ಇದ್ದು ಈವರೆಗೆ ವಿಫಲವಾಗಿರುವ ಅಮೆರಿಕಾ ಒಂದರ್ಥದಲ್ಲಿ ಕ್ಯೂಬಾದ ಬಗ್ಗೆ ನಿತ್ಯೋತ್ಸವದ ಹುರುಪಿನಲ್ಲಿಯೇ ಸಾಗಿಬಂದಿದೆ. ನಾಳೆ ಕ್ಯೂಬಾ ಪತನವಾಗುತ್ತದೆಂಬ ಆಶಯ ಹೊತ್ತು ಅದಕ್ಕಾಗಿ ಷಡ್ಯಂತ್ರಗಳ ರಚನೆ, ದಿಗ್ಬಂಧನಗಳ ಹೇರಿಕೆ, ಅಪಪ್ರಚಾರದ ಬಿರುಸು ಇತ್ಯಾದಿ ನೀಚ ಮಾರ್ಗಗಳು ಒಂದೇ, ಎರಡೇ. ದಕ್ಷಿಣ ಅಮೆರಿಕಾದ ಯಾವ ದೇಶವನ್ನೇ ನೋಡಿದರೂ ಅಲ್ಲಿ ವಾಷಿಂಗ್‌ಟನ್ ಪ್ರಭುಗಳ ಆಕ್ರಮಣ, ಜನನಾಯಕರ ಹತ್ಯೆ, ಸಂಪತ್ತಿನ ಲೂಟಿ ನಡೆದಿದೆ. ಹಲವು ದಶಕಗಳ ಹಿಂದೆ ಮೆಕ್ಸಿಕೋದಿಂದ ಟೆಕ್ಸಾಸ್ ಮುಂತಾದ ರಾಜ್ಯಗಳನ್ನು ಕಿತ್ತುಕೊಂಡ ಮೇಲೆ ಪನಾಮಾ, ನಿಕರಗ್ವಾ, ಕೊಲಂಬಿಯ, ಚಿಲಿ, ಡೊಮಿನಿಕನ್ ಗಣರಾಜ್ಯ, ಜಮೈಕಾ, ಹೈಟಿ ಹೀಗೆ ಯಾವ ರಾಜ್ಯವನ್ನೂ ಬಿಡದೆ ಅಮೆರಿಕಾ ಹಿಂಸೆಯನ್ನು ಹರಿಬಿಟ್ಟಿದೆ. ಕ್ಯೂಬಾವನ್ನು ಒಂಟಿತನಕ್ಕೆ ದೂಡಬೇಕೆಂಬ ಹುನ್ನಾರವು ಮಣ್ಣುಪಾಲಾಗಿ ಈಚೆಗೆ ಸ್ವತಃ ಅಮೆರಿಕಾ ಒಬ್ಬೊಂಟಿಯಾಗಬೇಕಾದ ಪ್ರಸಂಗ ಜರುಗಿತು, ಅಮೆರಿಕಾ ರಾಜ್ಯಗಳ ಸಂಘಟನೆಯ ಸಭೆಯಲ್ಲಿ. ಇಷ್ಟಾಗಿಯೂ ಅಮೆರಿಕಾ ಎಂದರೆ ಪ್ರಜಾಪ್ರಭುತ್ವ, ಮಾನವ ಹಕ್ಕುಗಳ ರಕ್ಷಣೆ ಮುಂತಾದ ಮಿಥ್ಯೆಗಳು ಪ್ರಚಲಿತವಾಗಿವೆ. ಭಾರತದಲ್ಲಂತೂ ಈ ಬಗ್ಗೆ ಅವಿವೇಕದ ಪರಮಾವಧಿಯನ್ನು ತಲುಪಿದ್ದೇವೆಂಬ ನಾಚಿಕೆಯು ನಮ್ಮ ಸ್ವಾತಂತ್ರ್ಯದ ೬೨ನೆಯ ವಾರ್ಷಿಕೋತ್ಸವ ಸಂದರ್ಭದಲ್ಲಿ ನಮ್ಮನ್ನು ಬಾಧಿಸುತ್ತಿದೆ.

ಹತ್ತಾರು ಬಾರಿ ಅಮೆರಿಕಾದಿಂದ ಕೈ ತಿರುಚಿಸಿಕೊಂಡಿದ್ದರೂ ಎಚ್ಚರಿಕೆ ಇಲ್ಲದ ನಮ್ಮ ದೇಶವು ಮುಗ್ಗರಿಸುತ್ತಲೇ ಬಂದಿದೆ. ಅಮೆರಿಕಾದ ಆಣತಿಯನ್ನು ದೈವಾಜ್ಞೆಯೆಂಬಂತೆ ಸ್ವೀಕರಿಸುವ, ಸ್ವಂತದ ಮುಖವಿಲ್ಲದವರು, ದೆಹಲಿಯ ಗದ್ದುಗೆಯಲ್ಲಿರುವುದು ಇದಕ್ಕೆ ಕಾರಣ. ಕ್ಯೂಬಾದ ದಿಟ್ಟವರ್ತನೆ ಮತ್ತು ಭಾರತದ ಅಂಜುಬುರುಕುತನ ಎರಡು ಧ್ರುವಗಳು. ನಿನ್ನೆಯ ವಸಾಹತು ಪರಂಪರೆಯನ್ನು ಮುಂದುವರಿಸಿಕೊಂಡು ಟೊಂಕ ಬಗ್ಗಿಸಿ ನಿಲ್ಲುವ ನಿಸ್ತೇಜ ಭಾರತ ಒಂದು ಕಡೆ, ನಾಳೆಯ ಭವಿಷ್ಯಕ್ಕಾಗಿ ಸೆಣಸಾಟ, ತ್ಯಾಗ, ಬದ್ಧತೆ ಮತ್ತು ಕ್ರಿಯಾಶಾಲಿತ್ವವನ್ನು ಮೈಗೂಡಿಸಿಕೊಂಡಿರುವ ಕ್ಯೂಬಾ ಇನ್ನೊಂದು ಕಡೆ. ವಯಸ್ಸಿನಲ್ಲಿ ನಮ್ಮ ದೇಶಕ್ಕಿಂತಲೂ ಕಿರಿದಾದ ಕ್ಯೂಬಾದಿಂದ ತನ್ನ ೬೨ನೆಯ ಸ್ವಾತಂತ್ರ್ಯೋತ್ಸವದಂದು ಭಾರತವು ಸ್ಫೂರ್ತಿ ಪಡೆಯುವುದು ಉಪಯುಕ್ತವೆನಿಸುತ್ತದೆ. ಆರ್ಥಿಕ ನೀತಿಯನ್ನು ಸೂಕ್ತವಾಗಿ ಬದಲಿಸುವುದು ಅಂತಹ ಒಂದು ಕ್ರಮ.

ಅಮೆರಿಕಾದಿಂದ ಕೊಳ್ಳುವ ಶಸ್ತ್ರಾಸ್ತ್ರ ಇತ್ಯಾದಿಗಳನ್ನು ಹೇಗೆ ಬಳಸುತ್ತೇವೆಂದು ಅವಿರುವೆಡೆಗೆ ಹೋಗಿ ತನಿಖೆ ನಡೆಸಲು ತನಗೆ ಹಕ್ಕಿದೆಯೆಂದು ಅಮೆರಿಕಾ ಹೇಳಿದರೆ, ಅದರಿಂದ ನಮ್ಮ ಸಾರ್ವಭೌಮತ್ವಕ್ಕೆ ಧಕ್ಕೆಯಿಲ್ಲವೆಂದು ವಿದೇಶಾಂಗ ಮಂತ್ರಿ ಕೃಷ್ಣ ಹೇಳುತ್ತಾರೆಂದರೆ ದೇಶವು ತಪ್ಪುದಾರಿಯಲ್ಲಿ ನಡೆಯುತ್ತಿದೆ ಎಂದರ್ಥ. ಈಶಾನ್ಯಗಡಿ ಭಾಗಗಳಿಗೋ, ಪಾಕಿಸ್ತಾನದ ಗಡಿಗೋ ಹೋಗಿ ಅಮೆರಿಕಾದ ಅಧಿಕಾರಿಗಳು ನಮ್ಮ ಶಸ್ತ್ರಾಸ್ತ್ರಗಳನ್ನು ಪರಿಶೀಲಿಸಲು ಬಿಡುವುದು ಉಚಿತವೆ ? ನಾವು ಶಸ್ತ್ರಾಸ್ತ್ರಗಳನ್ನು

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆನ್ನೆಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಆಕರ್ಷಿಸುವುದರಲ್ಲಿ, ಕರುಣಾನಿಧಿ ತಮ್ಮ ಮಗನನ್ನು ಮುಂದಿನ ಮುಖ್ಯಮಂತ್ರಿ ಮಾಡಲೇಬೇಕೆಂದು ನೀಲಿನಕ್ಷೆ ಸಿದ್ಧಪಡಿಸಿರುವಾಗ ಯಡಿಯೂರಪ್ಪನವರು ತಮ್ಮ ಕುಮಾರನನ್ನು ರಾಜ್ಯದ ಎಲ್ಲೆಯನ್ನು ಮೀರಿ ದೆಹಲಿಯಲ್ಲಿ ಬೆಳೆಯಲು ಅಟ್ಟಿದ್ದಾರೆ. ಕರುಣಾನಿಧಿ ಪಕ್ಷವು ೨೦೧೦-೧೧ರ ನಂತರ ಈ ಸತ್ಪುವರನಿಗೆ ದೆಹಲಿಯಲ್ಲಿ ಹರಸಬೇಕೆಂಬ ನಿರೀಕ್ಷೆಯು ಅಪ್ರಾಸಂಗಿಕವಲ್ಲ. ಹೇಗಿದ್ದರೂ ಕರುಣಾನಿಧಿ ಪಕ್ಷಕ್ಕೆ ಯಾವ ಸಿದ್ಧಾಂತದ ಹಂಗೂ ಇಲ್ಲದ್ದರಿಂದ ತನ್ನ ರೊಟ್ಟಿಗೆ ಬೆಣ್ಣೆ ಚೆನ್ನಾಗಿ ಬಳಿದುಕೊಳ್ಳಲು ಯಾರನ್ನು ಯಾವಾಗ ಕೂಡಿಕೊಳ್ಳಬೇಕೆಂಬ ಬಗ್ಗೆ ಬಂಧನಗಳೇನೂ ಇಲ್ಲ. ಸರ್ವಜ್ಞನ ದಯೆಯನ್ನು ಈ ದಿಕ್ಕಿನಲ್ಲಿ ಬಳಸಿಕೊಳ್ಳಬಾರದೆಂದು ಚುನಾವಣಾ ಆಯುಕ್ತರು ನೀತಿಸಂಹಿತೆಯೊಂದನ್ನು ಜಾರಿಗೊಳಿಸಲಾರರಲ್ಲ!

*    *    *

ಕಾರವಾರದ ಬಳಿ ಕೈಗಾದಲ್ಲಿ ಪರಮಾಣು ವಿದ್ಯುತ್ ಸ್ಥಾವರ ನಿರ್ಮಾಣವಾಗುವ ಮುನ್ನ ಶಿವರಾಮ ಕಾರಂತ, ಎಚ್. ಎಸ್. ದೊರೆಸ್ವಾಮಿ ಮೊದಲಾದವರ ನೇತೃತ್ವದಲ್ಲಿ ಭರ್ಜರಿ ಪ್ರತಿಭಟನೆಗಳು ನಡೆದಿದ್ದುವು. ಅದರಿಂದಾಗಿ, ಅಲ್ಪಪ್ರಮಾಣದಲ್ಲೇ ಆದರೂ ಸರಿ, ಕಾಡಿನ ವಿನಾಶವನ್ನು ತಡೆಯಲಾಯಿತು. ಅಂದಿನ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಪ್ರತಿಭಟನಾಕಾರರಿಗೆ ಮಣೆ ಹಾಕಲಿಲ್ಲ; ಆದರೆ ಉಗ್ರವಾಗಿ ದೊಣ್ಣೆಯನ್ನೂ ಬೀಸಲಿಲ್ಲ. ಗಣಿಗಳ ಒಡೆಯರಂತೆ ಶಾಖೋತ್ಪನ್ನ ವಿದ್ಯುತ್ ಸ್ಥಾವರಗಳ ನಿರ್ಮಾಣ ಮಾಡುವ ಕಂಟ್ರಾಕ್ಟರ್‌ಗಳೂ ಯಡಿಯೂರಪ್ಪನವರ ಸರ್ಕಾರದ ಬೆನ್ನೆಲುಬಾದ್ದರಿಂದ ಕಾರವಾರದ ಬಳಿಯ ಹಣಕೋಣದಲ್ಲಿ ಪ್ರತಿಭಟನಾಕಾರರನ್ನು ಹಿಗ್ಗಾಮುಗ್ಗಾ ಥಳಿಸಲಾಗಿದೆ. ಇಂದಿನ ಆಳುವ ಪಕ್ಷವು ಒಂದು ವಿಚಾರದಲ್ಲಿ ಪೂರ್ತಿಯಾಗಿ ನಿಷ್ಪಕ್ಷಪಾತಿ. ತನ್ನ ಅಧಿಕಾರಕ್ಕೆ ಅಡ್ಡಿಯುಂಟುಮಾಡಿ, ಅರಳುವ ಕಮಲಕ್ಕೆ ಸೂರ್ಯಾಸ್ತದ ಭೀತಿ ಹರಡಿದರೆ ಯಾರನ್ನೂ ಬಿಡುವುದಿಲ್ಲ. ತನ್ನ ಪಕ್ಷದ ಮಹಿಳಾ ಕಾರ್ಯಕರ್ತರಿಗೆ ಸಹ ಹಣಕೋಣದಲ್ಲಿ ಪೊಲೀಸರ ಲಾಠಿಯ ರುಚಿ ತೋರಿಸಲು ಗೃಹಮಂತ್ರಿ ಡಾ|| ವಿ. ಎಸ್. ಆಚಾರ್ಯರು ಹಿಂಜರಿಯಲಿಲ್ಲ; ಏಕೆಂದರೆ, ಸ್ಥಾವರ ನಿರ್ಮಾಪಕನಾಗ ಬೇಕಾದ ಮುಂದಾಳು, ಪಕ್ಷದ ಜುಜುಬಿ ಕಾರ್ಯಕರ್ತರಿಗಿಂತಲೂ ಹೆಚ್ಚು ಆದರಣೀಯ! ಕಾಡಿನಲ್ಲಿ ಕಲ್ಲಿದ್ದಲು ಧೂಳು ಸರ್ವನಾಶಕ್ಕೆ ಎಡೆಮಾಡಿಕೊಡುತ್ತದೆಂಬ ಆಕ್ಷೇಪವು ಕಂಟ್ರಾಕ್ಟರರ ಆಸ್ತಿಗಿಂತಲೂ ಮಿಗಿಲಾದುದಲ್ಲದಿರಬಹುದೇನೋ. ಸ್ಥಾವರವನ್ನು ಹಾನಿಯು ಅತಿಯಾಗದಂತೆ ಬೇರೆಲ್ಲೂ ನಿರ್ಮಿಸಲು ಸಾಧ್ಯವೇ ಇಲ್ಲವೇ ಎಂಬುದನ್ನು ತಜ್ಞರು ತಿಳಿಸಿಕೊಡಬೇಕು. ಪರಮಾಣು ಇಂಧನದ ಸ್ಥಾವರವನ್ನು ವಿರೋಧಿಸಿದಾಗ ಕಾಡಿನ ನಾಶ ಮತ್ತು ವಿಕಿರಣ ಸಾಧ್ಯತೆಯ ಅಪಾಯ ಎರಡನ್ನೂ ಮುಂದುಮಾಡಲಾಗಿತ್ತು. ಪೂರ್ತಿ ಸಮರ್ಪಕವಾಗಿ ಇವೆರಡನ್ನೂ ನಿಭಾಯಿಸಲಾಗದಿದ್ದರೂ ಪ್ರತಿಭಟನೆಯ ಕಾವು ಮತ್ತು ಕಾಳಜಿ ಅಂದಿನ ಸರ್ಕಾರಗಳಿಗೆ ಮನವರಿಕೆಯಾದುವು. ಹಣಕೋಣದ ಜನ ಮತ್ತು ಪ್ರತಿಭಟನಾಕಾರರು ಕಾಡನ್ನು ಹಾಗೂ ತಮ್ಮ ಭವಿಷ್ಯವನ್ನು ಉಳಿಸಿಕೊಳ್ಳಲು ಮುಂದೇನು ಮಾಡಬೇಕು? ಸರ್ಕಾರದ ವಕ್ತಾರರು ದಯಮಾಡಿ ತಿಳಿಸಿಕೊಡುವ ಉಪಕಾರ ಮಾಡಬೇಕು.

*    *    *

ಪೂರ್ಣ ಸೂರ್ಯಗ್ರಹಣ ಬಂದುಹೋಯಿತು. ಪಾಟ್ನಾ, ಭೋಪಾಲ್, ಮುಂತಾದೆಡೆಗಳಲ್ಲಿ ಜಮಾಯಿಸಿದ್ದ ಆಸಕ್ತರಿಗೆ ನಿರಾಶೆಯಾಯಿತು. ಕಾಶಿ ಮತ್ತು ಪ್ರಯಾಗಗಳಲ್ಲಿ ಗ್ರಹಣದ ಅದ್ಭುತವು ಅತ್ಯುಚ್ಚ ಅನುಭವ ನೀಡಿತು. ಗ್ರಹಣದ ಘಟನೆಯನ್ನು ವೀಕ್ಷಿಸಲು ಉತ್ಸುಕರಲ್ಲದಿದ್ದ ಜ್ಯೋತಿಷಿಗಳು ಮಾತ್ರ ಇವೆಲ್ಲಕ್ಕೂ ಒಗೊಡದೆ ತಮ್ಮ ಭಕ್ತವೃಂದಕ್ಕೆ ಆಶ್ರಯದಾತರಾಗಿ ಸ್ವಲ್ಪ ಹಣ ಮಾಡಿಕೊಂಡರು. ಬೆಂಗಳೂರಿನ ಹಲವು ದೇವಸ್ಥಾನಗಳ ಮುಂದೆ ಶಾಂತಿಹೋಮದ ಜಾಹಿರಾತು ಫಲಕಗಳಿದ್ದುವು. ಅವು ಗ್ರಹಣವನ್ನು "ಕೇತುಗ್ರಸ್ಥ" ಎಂದು ಬಣ್ಣಿಸಿದ್ದುವು. ಗ್ರಸ್ಥವಲ್ಲ, ಅದು ಗ್ರಸ್ತ, ಎಂಬುದನ್ನೂ ಅರಿಯದ ಖಗೋಳ ಶಾಸ್ತ್ರ ಪಂಡಿತರಿವರು. ಯಾವ ಶಾಂತಿ ಹೋಮವನ್ನೂ ಮಾಡದಿದ್ದವರೆಲ್ಲಾ ಗ್ರಹಣದ ನಂತರ ಏನು ಬಾಧೆಗೊಳಗಾಗಿದ್ದಾರೆ ಮತ್ತು ಹೋಮ ಮಾಡಿ ಪುನೀತರಾದ ಮಹಾತ್ಮರು ಏನೆಲ್ಲಾ ಹೊಸದಾಗಿ ಗಳಿಸಿಕೊಂಡರು? ಇದನ್ನು ತಿಳಿಯಲು ಕ್ಷೇತ್ರಕಾರ್ಯ ಬೇಕಿಲ್ಲ, ಸಂಶೋಧನೆ ಬೇಕಿಲ್ಲ. ಸೂರ್ಯನು ಮತ್ತಾರಿಂದಲೋ "ಗ್ರಸ್ಥನಾಗಿ" ಪೂರ್ಣಗ್ರಹಣಕ್ಕೆ ತುತ್ತಾಗುವುದನ್ನು ಕಾಣಲು ನಮ್ಮ ದೇಶದ ಜನ ಇನ್ನೊಂದು ಶತಮಾನ ಕಾಯಬೇಕು. ಅಷ್ಟರಲ್ಲಿ ಅಜ್ಞಾನಿ ಪಂಡಿತರು ಶಾಂತಿಹೋಮಗಳನ್ನು ನಡೆಸುವ ಉದ್ಯೋಗದಿಂದ ವಿಮುಕ್ತರಾಗಿರುತ್ತಾರೆಂದು ಆಶಿಸೋಣ. ವಿಜ್ಞಾನದ ಚಳುವಳಿಯು ಅದನ್ನು ಆಗುಮಾಡಬಲ್ಲದು.

*    *    *

ಸರ್ವೋಚ್ಚ ನ್ಯಾಯಾಲಯದ ಸರ್ವಜ್ಞತ್ವಕ್ಕೆ ಈಚೆಗೆ ಇನ್ನೊಂದು ದೊಡ್ಡ ಪುರಾವೆ ದೊರೆತಿದೆ. ನ್ಯಾಯಮೂರ್ತಿಗಳು ತಮ್ಮ ಸ್ವಂತ ಆಸ್ತಿಯ ಪೂರ್ಣ ಮಾಹಿತಿಯನ್ನು ಯಾವ ನಿರ್ಬಂಧವೂ ಇಲ್ಲದೆ ಬಹಿರಂಗಗೊಳಿಸಲು ಒಪ್ಪುವ ಮೂಲಕ ಅಲ್ಲ; ಬದಲಾಗಿ ನಮ್ಮ ದೇಶದ ಅತ್ತೆಯರು ತಮ್ಮ ತಮ್ಮ ಸೊಸೆಯಂದಿರನ್ನು ಎಷ್ಟರಮಟ್ಟಿಗೆ ಒದೆಯುವುದು ಅಪರಾಧವೆನಿಸಿಕೊಳ್ಳುವುದಿಲ್ಲ ಎಂಬುದನ್ನು ನಿರ್ದಿಷ್ಟವಾಗಿ ಗೊತ್ತುಪಡಿಸುವ ಮೂಲಕ. ಕಾನೂನಿನ ಯಾವ ಭಾಗದಲ್ಲಿ ಇದನ್ನೆಲ್ಲಾ ಅಡಕಗೊಳಿಸಲಾಗಿದೆಯೋ ಅದು ನಮಗೆ ತಿಳಿದಿಲ್ಲ; ಆದರೆ ಸಂವಿಧಾನದ ಅರ್ಥವು ಇದೇ ಎಂದು ನಿಖರವಾಗಿ ಹೇಳಬಲ್ಲ, ಹೇಳಲು ಬದ್ಧರಾದ, ಸರ್ವೋಚ್ಚ ನ್ಯಾಯಾಲಯದ ವರಿಷ್ಠರಿಗೆ ಇದೆಲ್ಲಾ ತಿಳಿದಿದೆ. ಅವರು ಹೇಳಿದ ಮೇಲೆ ಅದು ಸರಿಯೇ ಇರಬೇಕು. ಆದ್ದರಿಂದ ನಿರ್ಲಜ್ಜೆಯಿಂದ, ನಿರಂಕುಶರಾಗಿ, ವ್ಯಾಘ್ರರೂಪಿ ಅತ್ತೆಯರು ಮೇಕೆಸೊಸೆಗಳನ್ನು ಒದೆಯಲು, ಕಿತ್ತು ತಿನ್ನಲು, ಹಿಂಸಿಸಲು ಕಾನೂನಿನ ಸಮ್ಮತಿ ಇದೆ. ಸೊಸೆಯರೇ ಒದೆಯುವ ಕಾಲ ಬರಲು ಅವರಿಗೆಲ್ಲಾ ಸೊಸೆಯಂದಿರು ಬರುವತನಕ ಕಾಯಬೇಕೆ, ಇಲ್ಲವೆ, ಎಂಬುದನ್ನು ನ್ಯಾಯಮೂರ್ತಿಗಳು ಹೇಳಿಲ್ಲವಾದ್ದರಿಂದ ಬಹುಶಃ ಸಂದರ್ಭೋಚಿತವಾಗಿ ಸೊಸೆಯಂದಿರು ಅತ್ತೆಗಳನ್ನು ಒದೆಯುವ ಶ್ರೇಷ್ಠ ಕಾಯಕದಲ್ಲಿ ನಿರತರಾಗಬಹುದೆಂದು ತೋರುತ್ತದೆ. ನಮ್ಮ ಸಂಸ್ಕೃತಿಯ ಅಪ್ಪಟ ಮೌಲ್ಯಗಳು ಅಡಗಿರುವುದು ಇಂತಹ ಒದೆತಗಳ ಮಹಾಪೂರದಲ್ಲಿ ಎಂದು ಭಾವಿಸಬೇಕೆ? ಮಹಿಳೆಯರ ಹಕ್ಕುಗಳ ಪರವಾಗಿ ನಿಲ್ಲುವವರೆಲ್ಲಾ ಸರ್ವೋಚ್ಚ ನ್ಯಾಯಾಲಯದ ಈ ಒದೆಯುವ ಪ್ರಕರಣದ ಸುಭಾಷಿತವನ್ನು ಅರಣ್ಯನೀತಿ ಎಂದು ಬಣ್ಣಿಸಿದರೆ ಅದು ನ್ಯಾಯಾಲಯದ ಶ್ರೇಷ್ಠತೆಗೆ ಕಪ್ಪುಚುಕ್ಕೆ ಇಟ್ಟಂತೆ ಎಂದು ಭಾವಿಸಲಾಗುತ್ತದೇನೋ ತಿಳಿಯದಾಗಿದೆ. ಅತ್ತೆಯರ ಸಂಘವೇನಾದರೂ ಇದ್ದರೆ ಅದು ನ್ಯಾಯಾಲಯದ ಮಾನವೀಯತೆಯನ್ನು ಕೊಂಡಾಡಲು ಒಂದು ಹೂ ಗುಚ್ಛವನ್ನು ಪ್ರತೀಕವಾಗಿ ಕಳಿಸಲು ಅಡ್ಡಿ ಇರಲಾರದು.

*    *    *

ಪೂರ್ಣ ಸೂರ್ಯಗ್ರಹಣ ವೀಕ್ಷಿಸಲು ಕಾಶಿಗೆ ಹೋದಾಗ ಇನ್ನೊಂದು ಸಾಧಾರಣ ಗ್ರಹಣವನ್ನು ನೋಡುವ ಅವಕಾಶ ಲಭ್ಯವಿತ್ತು. ಅಲ್ಲಿಯ ಡಾ|| ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯಕ್ಕೆ ಹಿಡಿದಿದ್ದ (ಮತ್ತು ಆಗಾಗ್ಗೆ ಹಿಡಿಯುತ್ತಲೇ ಇರುವ) ಗ್ರಹಣ ಅದು. ಹಿಂದೊಮ್ಮೆ ಅದೇ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಳನ ಜರುಗಿದ್ದಾಗ ಅಲ್ಲಿಯ ಉಪಕುಲಪತಿಗಳು ಉದ್ಘಾಟನಾ ಸಮಾರಂಭಕ್ಕೆ ಕಾಶಿ ಮಹಾರಾಜನ ಜೊತೆ ಕುಳಿತಿದ್ದರು. ಮಹಾರಾಜನ ತಲೆಗೆ ಎಂಥದೋ ಕಿರೀಟವಿತ್ತು ಮತ್ತು ಉಪಕುಲಪತಿಗಳ ತಲೆಗೆ ಸುಸಂಸ್ಕೃತ ಸಂಸ್ಕೃತ ವಿದ್ಯಾರ್ಥಿಗಳು ಕಲ್ಲು ಹೊಡೆದಿದ್ದುದರಿಂದ ದೊಡ್ಡ ಬ್ಯಾಂಡೇಜ್ ರೂಪದ ಕಿರೀಟವಿತ್ತು. ಈಗಿನ ಉಪಕುಲಪತಿ ಡಾ|| ಕುಟುಂಬ ಶಾಸ್ತ್ರಿಯವರಿಗೆ ಅಂತಹ ಪ್ರಮಾದವೇನೂ ಸಂಭವಿಸಿಲ್ಲ. ವಿಶ್ವವಿದ್ಯಾನಿಲಯದ ಸಿಬ್ಬಂದಿವರ್ಗ ಎರಡು ವಾರಗಳಿಂದಲೂ ಸಂಪೂರ್ಣ ಮುಷ್ಕರದಲ್ಲಿ ಮುಳುಗಿದ್ದುದರಿಂದ ಆಡಳಿತ ಕಚೇರಿಯಿಂದ ಯಾವ ಮಾಹಿತಿಯನ್ನೂ ದೊರಕಿಸಿಕೊಡಲು ತಾವು ಅಸಮರ್ಥರೆಂದು ಮಾನ್ಯ ಶಾಸ್ತ್ರಿಯವರು ನಿವೇದಿಸಿಕೊಂಡರು. ಸಂಸ್ಕೃತ ವಿಶ್ವವಿದ್ಯಾನಿಲಯದಲ್ಲಿ ಏನೆಲ್ಲಾ ಪಠ್ಯಗಳಿವೆ ಎಂಬುದನ್ನು ತಿಳಿಯಲು ತೊಡಕುಂಟಾಯಿತೇನೋ ನಿಜ, ಆದರೆ ಪ್ರಮುಖ ಲಕ್ಷಣಗಳೇನಿವೆ ಎಂಬುದನ್ನು ಅರಿಯಲು ಅಡ್ಡಿಯಾಗಲಿಲ್ಲ. ಅಲ್ಲಿಯೂ ಯಥಾಪ್ರಕಾರ ಮೀಮಾಂಸೆ, ವೇದಾಂತ, ವ್ಯಾಕರಣ, ಜ್ಯೋತಿಷ್ಯ ಇತ್ಯಾದಿ ಎಲ್ಲವನ್ನೂ ಹೇಳಿಕೊಡುತ್ತಾರೆ. ಬನಾರಸ್ ಹಿಂದು ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದಲ್ಲೂ ಇವನ್ನು ಕಲಿಯಲು ಸೌಲಭ್ಯಗಳಿವೆ. ಹಾಗೆ ನೋಡಿದರೆ, ಮಾಳವೀಯರು ಸ್ಥಾಪಿಸಿದ ಈ ವಿಶ್ವವಿದ್ಯಾಲಯದಲ್ಲಿ ನಮ್ಮ ರಾಜ್ಯದ ವಿಶ್ವವಿದ್ಯಾನಿಲಯಗಳ ಸಂಸ್ಕೃತ ವಿಭಾಗಗಳಲ್ಲಿ ಸೇರಿಲ್ಲದ ಎಷ್ಟೋ ಹೆಚ್ಚು ಪಠ್ಯ ವಿಷಯಗಳಿವೆ. ಈ ವಿಶ್ವವಿದ್ಯಾಲಯಕ್ಕೂ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯಕ್ಕೂ ಇರುವ ಮೂಲಭೂತ ವ್ಯತ್ಯಾಸವೆಂದರೆ ಬೆಂಚು-ಕುರ್ಚಿಗಳ ಜಾಗದಲ್ಲಿ ಮೆತ್ತನೆಯ ಹಾಸು-ದಿಂಬುಗಳು ಇರುವುದು. ಒರಗಿ ಕೂತು ಪಾಠ ಹೇಳಿದರೆ ಸ್ವಾಸ್ಥ್ಯ ಇಮ್ಮಡಿಯಾಗಬಹುದೇನೋ! ನಮ್ಮ ರಾಜ್ಯದಲ್ಲಿ ಅ-ಆ-ಇ-ಈ ಹೇಳಿಕೊಡುವುದರಿಂದ ವಿದ್ವತ್ ಹಂತದವರೆಗೆ ಪರಿಣತಿ ನೀಡುವಂತಹ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಯೋಜನೆ ಇದೆ. ನಮ್ಮ ಕನ್ನಡ-ಉರ್ದು-ಇಂಗ್ಲಿಷ್

ಪ್ರಾಥಮಿಕ ಶಾಲೆಗಳನ್ನೂ ವಿಶ್ವವಿದ್ಯಾಲಯದಲ್ಲಿ ಸೇರ್ಪಡೆಗೊಳಿಸಲು ತರ್ಕಬದ್ಧವಾದ ಒತ್ತಾಯವನ್ನು ತರಲು ಈಗಲೇ ಆರಂಭಿಸಬಹುದು. ವೈದಿಕ ಕರ್ಮ ಕಾಂಡ ನಿಪುಣರಾಗಿ ಅದನ್ನು ವಿಶ್ವವಿದ್ಯಾಲಯಗಳಲ್ಲಿ ಒಂದು ಪಠ್ಯ ವಿಷಯ ವನ್ನಾಗಿ ಸೇರಿಸಿದ್ದ ಮಾನ್ಯ ಮುರಳಿ ಮನೋಹರ ಜೋಶಿ ಇತ್ತೀಚೆಗೆ ಬೆಂಗಳೂರಿಗೆ ಆಗಮಿಸಿದ್ದರು. ಉದ್ದೇಶ : ಶಿಕ್ಷಣ ಕ್ಷೇತ್ರದ ಆಯಾಮಗಳ ವಿಸ್ತರಣೆಯ ಅಗತ್ಯ ಮತ್ತು ವಿಧಾನಗಳನ್ನು ಆರ್.ಎಸ್.ಎಸ್. ಕಾರ್ಯಕರ್ತರಿಗೆ ತಿಳಿಸಿಕೊಡುವುದು. ನಮ್ಮ ರಾಜ್ಯದ ಪ್ರಾಥಮಿಕ ಮತ್ತು ಉನ್ನತ ಶಿಕ್ಷಣ ಸಚಿವ ರಿಬ್ಬರೂ ಜೋಶಿ ಕಾರ್ಯಸೂಚಿಯನ್ನು ಅನುಷ್ಠಾನಕ್ಕೆ ತರಲು ಮುಂದಾಗಬಹುದೇನೋ ಕಾದು ನೋಡಬೇಕು. ಪ್ರಾಥಮಿಕ ಶಿಕ್ಷಣ ಸಚಿವರು ಸದ್ಯಕ್ಕಂತೂ ಪ್ರಾಥಮಿಕ ಶಾಲಾಹಂತದಲ್ಲಿ ಕನ್ನಡ ಮಾಧ್ಯಮದ ಅವಶ್ಯಕತೆಯ ಬಗ್ಗೆ ಕಾನೂನು ಸಮರವನ್ನು ಮೌಲ್ಯಯುತ ನೆಲೆಯಲ್ಲಿ ನಿಂತು ನಡೆಸುತ್ತಿದ್ದಾರೆ. ಅವರಿಗೆ ಅಭಿನಂದನೆಗಳನ್ನು ಹೇಳುತ್ತಾ ಅವರ ಹೋರಾಟಕ್ಕೆ ಯಶಸ್ಸು ಕೋರೋಣ.

ಈ ಸಂಬಂಧದಲ್ಲಿ ಇನ್ನೊಂದು ಜ್ಞಾನೋದಯ ಸಾಧ್ಯವಾಯಿತು. ವಿದೇಶದಲ್ಲಿ ನೆಲೆಸಿ ಭಾರತೀಯ ಸಂಸ್ಕೃತಿಯನ್ನು ರಕ್ಷಿಸುತ್ತಿರುವ ಮಹಿಳಾ ಮೇಧಾವಿಯೊಬ್ಬರು ಕರ್ನಾಟಕದಲ್ಲಿ ಸಂಸ್ಕೃತ ವಿಶ್ವವಿದ್ಯಾಲಯವು (ಅದನ್ನು ವಿದ್ಯಾ-ಲಯ ಎಂದು ಆಕೆ ಅರ್ಥೈಸಿಕೊಂಡಿದ್ದಾರೆಂಬ ಅನುಮಾನ ಬಲವಾಗಿದೆ) ಬರಲಿರುವುದು ಎಂತಹ ಸೌಭಾಗ್ಯವೆಂದು ಪುಲಕಿತಗೊಂಡು ಇಂಗ್ಲಿಷ್ ಪತ್ರಿಕೆಯೊಂದರಲ್ಲಿ ''ಬೋಧಪ್ರದ''ವಾದ ಲೇಖನವೊಂದನ್ನು ಬರೆಯುವ ಕೃಪೆ ತೋರಿದರು. ಅವರ ಮಕ್ಕಳನ್ನಂತೂ ಸಂಸ್ಕೃತ ವಿಶ್ವವಿದ್ಯಾಲಯಕ್ಕೆ ಕಳಿಸುವ ಸದಿಚ್ಛೆ ಅವರಿಗಿಲ್ಲ, ಅವರ ವಾದದಲ್ಲಿ ಇಂಗ್ಲಿಷ್‌ನ ''ಜರಂಟಾಲಜಿ'' ಎಂಬ ಪದವನ್ನು ಬಳಸಿ, ಅದರ ವ್ಯಾಖ್ಯಾನ ಮಾಡುತ್ತಾ ಜರಾನಿವಾರಣೆಯೆಂಬ ಕೌಶಲ್ಯವು ಪುರಾತನ ಕಾಲದಲ್ಲೇ ಇತ್ತೆಂದು ಪ್ರತಿಪಾದಿಸಿದ ಈ ಪ್ರಗಲ್ಭ ವಿದುಷಿಯನ್ನು ಮುಂಬರಲಿರುವ ಸಂಸ್ಕೃತ ವಿಶ್ವವಿದ್ಯಾಲಯದ ''ಜರಾನಿವಾರಣೆ'' ವಿಭಾಗದ ಮುಖ್ಯಸ್ಥೆಯನ್ನಾಗಿ ನೇಮಿಸಬಹುದು. ಆಗ ವಿಶ್ವವಿದ್ಯಾಲಯದ ಭವಿಷ್ಯವು ನೆಟ್ಟಗಾಗುತ್ತದೆ!

* * *

ಆಗಸ್ಟ್ ೧೭ರಂದು ರಾಜ್ಯಗಳ ಮುಖ್ಯಮಂತ್ರಿಗಳ ಸಭೆಯೊಂದನ್ನುದ್ದೇಶಿಸಿ ಪ್ರಧಾನಿ ಮತ್ತು ಗೃಹಮಂತ್ರಿ ಮಾತನಾಡಿದರು. ಸಚಿವ ಪಿ. ಚಿದಂಬರಂ ತೀವ್ರಗಾಮಿಗಳೆನ್ನಲಾದ ನಕ್ಸಲೀಯರ ಬಗ್ಗೆ ಎಚ್ಚರಿಕೆ ನೀಡಿ ಅವರ ನಿಗ್ರಹಕ್ಕಾಗಿ ಮೂರು ವಿಧಾನಗಳನ್ನು ಸರ್ಕಾರವು ಅನುಸರಿಸುವುದಾಗಿ ತಿಳಿಸಿದರು. ಅವು ಯಾವುವೆಂದರೆ (ಅ) ಪೊಲೀಸ್ ಬಣದ ಹೆಚ್ಚಿನ ಬಳಕೆ, (ಆ) ಕಾಲಾನುಕ್ರಮದಲ್ಲಿ ಕೆಲವು ಷರತ್ತುಗಳನ್ನು ವಿಧಿಸಿ ನಕ್ಸಲೀಯರೊಂದಿಗೆ ಮಾತುಕತೆ, ಮತ್ತು (ಇ) ನಕ್ಸಲ್ ''ಪೀಡಿತ'' ಪ್ರದೇಶಗಳಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು. ಇವನ್ನೆಲ್ಲಾ ಒಟ್ಟಿಗೆ ಏಕಕಾಲದಲ್ಲಿ, ಸಮಪ್ರಮಾಣದಲ್ಲಿ, ಕಾರ್ಯಗತ ಗೊಳಿಸುವುದು ಅವರ ಉದ್ದೇಶವಲ್ಲ; ಅವನ್ನು ಅದೇ ಕ್ರಮದಲ್ಲಿ (ಚಿದಂಬರಂ ಮಾತುಗಳಲ್ಲಿ ''ಇನ್ ದಟ್ ಆರ್ಡರ್'') ಬಳಸುತ್ತಾರಂತೆ. ಅಂದರೆ, ಮೊದಲು ದಂಡಪ್ರಯೋಗ, ಆಮೇಲೆ ಸಾಮ ಚಾತುರ್ಯ, ಕಡೆಗೆ ರೊಟ್ಟಿ ಚೂರು ಎಸೆಯುವ ಚಮತ್ಕಾರ. ಅಭಿವೃದ್ಧಿ ಕಾರ್ಯಕ್ರಮವು ಆದ್ಯತೆಯ ಪಟ್ಟಿಯಲ್ಲಿ ಕಡೆಯದು. ಪ್ರಭುತ್ವದ ಲಕ್ಷಣವನ್ನು ಸಾರಲು ಚಿದಂಬರಂಗಿಂತಲೂ ಹೆಚ್ಚು ಸಮರ್ಥರು ಇನ್ನಾರಿದ್ದಾರೆ!

* * *

ಪ್ರಭುತ್ವದ ಆಯ್ಕೆಯಲ್ಲಿ ಎಂತೆಂತಹ ವಿಪರ್ಯಾಸಗಳಿವೆ! ಅದನ್ನು ಮಹಾರಾಷ್ಟ್ರ ಸರ್ಕಾರವು ನಿದರ್ಶನ ಸಹಿತ ನಮ್ಮ ಮುಂದಿಟ್ಟಿದೆ.

ಜುಲೈ ಕಡೆಯ ವಾರದಲ್ಲಿ ಥಾಣಾ ಜಿಲ್ಲೆಯ ಮ್ಯಾಜಿಸ್ಟ್ರೇಟರ ಎದುರು ಆರೋಪಿ ರಾಜ್ ಠಾಕ್ರೆಯನ್ನು ಹಾಜರುಪಡಿಸಬೇಕಿತ್ತು. ಈತ ಬಾಳ ಠಾಕ್ರೆಯ ಬಂಧು, ಈಗ ಎದುರಾಳಿ. ಬಿಹಾರಿಗಳ ಮೇಲೆ ಹಲ್ಲೆ ನಡೆಸಿದ್ದ ಅಪರಾಧಕ್ಕಾಗಿ ರಾಜ್ ವಿಚಾರಣೆಗೆ ಗುರಿಯಾಗಿದ್ದಾನೆ. ಜಾಮೀನಿನ ಮೇಲೆ ಜೈಲಿನಿಂದ ಹೊರಗುಳಿದಿರುವ ರಾಜ್ ನಿಗದಿತವಾದ ದಿನದಂದು ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಹಾಜರಾದ. ಕೋರ್ಟಿಗೆ ಯಾರ ಜೊತೆ ಈ ಮಹಾನುಭಾವ ಬಂದ ಗೊತ್ತಿದೆಯೆ? ಅವನ ಮೇಲಿನ ಆರೋಪವನ್ನು ಸಾಧಿಸಬೇಕಾದ, ಸಾಧಿಸಲು ಸರ್ಕಾರದಿಂದ ನೇಮಕಗೊಂಡ, ಪಬ್ಲಿಕ್ ಪ್ರಾಸಿಕ್ಯೂಟರ್ ಜೊತೆ!! ಇಬ್ಬರೂ ಒಂದೇ ಕಾರಿನಲ್ಲಿ ಮೆರವಣಿಗೆಯಲ್ಲಿ ಕೋರ್ಟಿಗೆ ಬಂದರು. ಇದಲ್ಲವೆ ಪ್ರಭುತ್ವದ ಔದಾರ್ಯ! ಪ್ರಭುತ್ವವು ಆರೋಪಿಗಳೊಡನೆ ಶಾಮೀಲಾಗಿದೆ ಎಂಬುದಕ್ಕೆ ಇದೊಂದು ಚಿಕ್ಕ ಉದಾಹರಣೆ. ಕರ್ನಾಟಕದ ನಾವು ''ಇದೇನು ಮಹಾ'' ಎನ್ನಲಡ್ಡಿಯಿಲ್ಲ ಏಕೆಂದರೆ ಗಣಿವೀರರಾದ ರೆಡ್ಡಿ ಸಹೋದರರು ರಾಜ್ಯದ ನಿಯಂತ್ರಣವನ್ನು ತಮ್ಮ ಕಿಸೆಯಲ್ಲಿಯೇ ಇರಿಸಿಕೊಂಡಿಲ್ಲವೆ? ''ಚಿಂತನಾ ಬೈಠಕ್''ಗಳಲ್ಲಿ ಎಲ್ಲರನ್ನೂ ''ಉಠ್'' ಎಂದು ಹೇಳುವ ಹಕ್ಕು ಇವರದು. ರಾಜ್ ಠಾಕ್ರೆ ಎಂದರೆ, ಅವನ ತಾತ, ಎಂಬ ರಾಜ್ಯ ನಮ್ಮದು.

---

*ಸಂಪಾದಕೀಯ (೫ನೇ ಪುಟದಿಂದ)*

ಕೊಂಡಾದ ಮೇಲೆ ಅವನ್ನು ಎಲ್ಲಿ ಮತ್ತು ಏಕೆ ಬಳಸುತ್ತೇವೆಂಬುದನ್ನು ನಿರ್ಧರಿಸುವವರು ನಾವೋ ಅಥವಾ ಒಬಾಮಾ ವೃಂದದವರೋ? ಚೀಣಾದೊಡನೆ ಭಾರತಕ್ಕೆ ಸಖ್ಯ ಬೇಡವೆಂಬ ಸೂಚನೆ ಅಮೆರಿಕಾದಿಂದ ಬರುತ್ತಿರುವುದು ಈ ತನಿಖೆಯ ಸ್ವರೂಪದಲ್ಲಿ ಎಂಬುದನ್ನು ಮರೆಯಕೂಡದು. ಭಾರತ-ಅಮೆರಿಕಾ ಪರಮಾಣು ಒಪ್ಪಂದದ ವಿಸ್ತರಣೆ ಹಾಗೂ ಅದರ ಹಿಂದಿನ ರಾಜಕೀಯವು ಮತ್ತೆ ಸ್ಪಷ್ಟವಾಗುತ್ತಿದೆ. ವಿದೇಶಾಂಗ ಕಾರ್ಯದರ್ಶಿ ಹಿಲರಿ ಕ್ಲಿಂಟನ್ ಐದು ದಿನಗಳ ಕಾಲ ಭಾರತದಲ್ಲಿ ನೆಲೆಯೂರಿದ್ದು ಯಾವುದೋ ವಿದ್ಯಾರ್ಥಿಗಳನ್ನು ಅಥವಾ ಗುಡಿಸಲವಾಸಿಗಳನ್ನು ಭೇಟಿಯಾಗ ಬೇಕೆಂದಲ್ಲ, ನಿಜವಾದ ಅಘೋಷಿತ ಉದ್ದೇಶ ಬೇರೆಯೇ ಇದೆ. ಅದು ವ್ಯಾಪಾರವನ್ನು ಕುದುರಿಸಿಕೊಳ್ಳುವ ಬಗೆ, ಅಷ್ಟೆ. ಭಾರತದಲ್ಲಿ ಐದಾರು ಪರಮಾಣು ವಿದ್ಯುತ್ ಕೇಂದ್ರಗಳನ್ನು ಅಮೆರಿಕಾದಿಂದ ಕೊಂಡು ಸ್ಥಾಪಿಸಿಕೊಳ್ಳಬೇಕೆಂದು ಹಿಲರಿ ಅಪೇಕ್ಷಿಸಿದ್ದುಂಟು. ಆದರೆ ಕತೆ ಅಲ್ಲಿಗೆ ಮುಗಿಯುವುದಿಲ್ಲ. ಆಕೆಗೆ ಭಾರತದಿಂದ ಪಾರ್ಲಿಮೆಂಟಿನ ಶಾಸನದ ರೂಪದಲ್ಲಿ ಒಂದು ಆಶ್ವಾಸನೆ ಬೇಕು ಮತ್ತು ಶ್ಯಾಮಶರಣ್ ಅದನ್ನು ನೀಡಲು ಸಿದ್ಧವಿದ್ದಾರೆ! ಏನದು ಆಶ್ವಾಸನೆ? ಭಾರತ ಸರ್ಕಾರವು ಅದನ್ನು ಬಹಿರಂಗಪಡಿಸಿಲ್ಲ. ಬಲ್ಲವಲಯಗಳಿಂದ 'ಹೊಸತು'ಗೆ ತಿಳಿಯಬಂದಿರುವಂತೆ ಅಮೆರಿಕಾದ ಕಂಪನಿಗಳಿಗೆ ನಿರ್ಬಾಧಿತ ರಕ್ಷಣೆ ನೀಡಬೇಕೆಂಬುದನ್ನು ಒತ್ತಾಯಿಸಲು ಹಿಲರಿ ಬಂದಿದ್ದರು. ಭೋಪಾಲ್‌ನಲ್ಲಿ ಯೂನಿಯನ್ ಕಾರ್ಬೈಡ್ (ಈಗ ಡಾ ಕೆಮಿಕಲ್ಸ್) ನಡೆಸಿದ ಪಾತಕದಂತೆ ಅಮೆರಿಕಾದ ಪರಮಾಣು ಕೇಂದ್ರವು ಯಾವುದಾದರೂ ಪಾತಕ ನಡೆಸಿದರೆ ಅದಕ್ಕೆ ಜುಲ್ಮಾನೆ ವಿಧಿಸಬಾರದು, ಕಾನೂನು ಕ್ರಮ ಜರುಗಿಸಬಾರದು, ಅವನ್ನು ಅಪರಾಧಿಗಳೆಂದು ಪರಿಗಣಿಸಕೂಡದು. ಅಂದರೆ, ಭಾರತೀಯರ ಜೀವಕ್ಕೆ ಬೆಲೆ ಇಲ್ಲವೆಂದು ಹಿಲರಿ ಹೇಳಿದರೆ ಮನಮೋಹನ ಸಿಂಗ್ ಗೋಣು ಆಡಿಸುತ್ತಾರೆ! ಇದು ಅವರು ಸಾರ್ವಭೌಮತ್ವವನ್ನು ವ್ಯಾಖ್ಯಾನಿಸುವ ಕೀಳು ವಿಧಾನ.

ಇದಕ್ಕೆ ಪರ್ಯಾಯವಾಗಿ ಕ್ಯೂಬಾ ಅನುಸರಿಸುತ್ತಿರುವುದು ಜೋಸೆ ಮಾರ್ತಿಯ ಮಾರ್ಗವನ್ನು. ಆತ ಹೇಳಿದ್ದ, ''ಸ್ವತಂತ್ರವಾಗಿರಲು ಸಂಸ್ಕೃತಿಯೊಂದೇ ಹಾದಿ; ಸಂಸ್ಕೃತಿಯಿಲ್ಲದೆ ಸ್ವಾತಂತ್ರ್ಯ ಸಾಧ್ಯವಿಲ್ಲ'' ಎಂದು. ಅನೇಕ ಅಭಿಪ್ರಾಯಗಳು, ದ್ವಂದ್ವಗಳು, ಇರುವ ಸಂದರ್ಭದಲ್ಲೂ ಕ್ಯೂಬಾ ಮೂಲಭೂತ ವಾಸ್ತವಗಳ ಬಗ್ಗೆ ಒಂದು ಸಮಾನ ನೆಲೆಯನ್ನು ಕಲ್ಪಿಸಲು ಶ್ರಮಿಸುತ್ತಿದೆ; ಮಾನವತೆಯ ಬೇರನ್ನುಳ್ಳ ಸಂಸ್ಕೃತಿಯನ್ನು ವ್ಯಾಪಕವಾಗಿ ತನ್ನ ಪ್ರಜೆಗಳ ನಡುವೆ ನೆಲೆಗೊಳಿಸಲು ಸಮರ್ಥ ಯೋಜನೆಗಳನ್ನು ಅನುಸರಿಸುತ್ತಿದೆ. ಶಿಕ್ಷಣ, ಆರೋಗ್ಯ, ಆಟಪಾಟ, ಕಲೆ ಮುಂತಾದ ಕ್ಷೇತ್ರಗಳಲ್ಲಿ ವಿಶ್ವಮಾನ್ಯತೆ ಪಡೆದಿರುವ ಕ್ಯೂಬಾ ಕೇವಲ ೬೦ ಮೈಲಿಗಳಾಚೆಯಿರುವ ಅಮೆರಿಕಾದ ಹಲ್ಲೆಯನ್ನು ಯಶಸ್ವಿಯಾಗಿ ಎದುರಿಸುವಾಗ ೮,೦೦೦ ಮೈಲಿಗಳ ದೂರದಲ್ಲಿರುವ ಭಾರತವು ಅದೇ ಅಮೆರಿಕಾದ ಹುನ್ನಾರಗಳನ್ನು ಬಯಲಿಗೆಳೆಯದೆ ಕೈ ತಿರುಚಿಸಿಕೊಳ್ಳುತ್ತಾ ಕೂಡುವುದು ಅಕ್ಷಮ್ಯ. ಅಂತರರಾಷ್ಟ್ರೀಯವಾಗಿ, ವಿಶೇಷತಃ ಉತ್ತರ ಮತ್ತು ದಕ್ಷಿಣ ಅಮೆರಿಕಾಗಳ ಹಿನ್ನೆಲೆಯಲ್ಲಿ, ಕ್ಯೂಬಾವನ್ನು ಅಸ್ಪೃಶ್ಯ ದೇಶವನ್ನಾಗಿಸಲು ಹೆಣಗಿ ಸತ್ತುಸುಣ್ಣವಾಗಿರುವ ಅಮೆರಿಕಾಕ್ಕೆ ಡೊಗ್ಗುಸಲಾಮು ಹಾಕುವುದು ಅನಗತ್ಯವೆಂದು ಭಾರತಕ್ಕೆ ಕ್ಯೂಬಾ ಸಂದೇಶವನ್ನು ನೀಡುತ್ತಿದೆ. ಸರ್ಕಾರವು ಆ ಸಂದೇಶವನ್ನು ಸ್ವೀಕರಿಸಿ ಪಾಲಿಸದಿದ್ದರೆ, ಭಾರತದ ಜನತೆಯು ಅದನ್ನು ಆಗುಮಾಡುತ್ತದೆ. ಅದು ನಮ್ಮ ದೇಶದ ಸ್ವಾತಂತ್ರ್ಯೋತ್ಸವ ಸಂದರ್ಭದ ಪ್ರಮಾಣವಚನ ಮತ್ತು ಕ್ಯೂಬಾದ ೫೦ನೆಯ ವರ್ಧಂತಿಯ ಸಂದರ್ಭದ ಅಭಿನಂದನಾ ವಚನ.




**ಮಂ**ಗಳೂರು ವಿಶ್ವವಿದ್ಯಾಲಯ ಕಾಲೇಜಿನ ಹಿರಿಯ ಉಪನ್ಯಾಸಕರಾದ ಶ್ರೀ ಪಟ್ಟಾಭಿರಾಮ ಸೋಮಯಾಜಿ ಇವರ 'ಅಶಿಸ್ತಿನ ನಡವಳಿಕೆ ಬಗ್ಗೆ ಹೊರಿಸಲಾದ ಆಪಾದನೆ'ಗಳ ಕುರಿತಾದ ಪತ್ರ ವ್ಯವಹಾರವು ಪತ್ರಿಕೆಗಳಲ್ಲಿ ಪ್ರಕಟವಾಗಿರುವುದನ್ನು ಗಮನಿಸಿದ್ದೇನೆ. ಈ ಸಂದರ್ಭದಲ್ಲಿ ತಮ್ಮೊಡನೆ ಹಂಚಿಕೊಳ್ಳಬೇಕಾದ ಕೆಲವು ಅಭಿಪ್ರಾಯಗಳಿವೆ ಎಂದು ತೋರಿ ಈ ಪತ್ರ ಬರೆಯುತ್ತಿದ್ದೇನೆ. ಈ ಇಡೀ ಪ್ರಸಂಗದಲ್ಲಿ ಪಟ್ಟಾಭಿರಾಮ ಸೋಮಯಾಜಿ ಅವರು ನಿಮಿತ್ತ ಮಾತ್ರ. ಆದರೆ ಈ ಪ್ರಸಂಗದಿಂದ ಎದ್ದಿರುವ ಪ್ರಶ್ನೆಗಳು ಒಂದು ಪ್ರಜಾತಂತ್ರದ ವ್ಯವಸ್ಥೆಯಲ್ಲಿ ಸಾರ್ವಕಾಲಿಕವಾದವು. ಹಾಗಾಗಿಯೇ ಇದರಲ್ಲಿ ಸಾರ್ವಜನಿಕರ ಮಧ್ಯಪ್ರವೇಶ ಅವಶ್ಯಕವೂ, ಅನಿವಾರ್ಯವೂ ಆಗುತ್ತದೆ.

ತತ್‌ಕ್ಷಣದ ಸಂದರ್ಭಕ್ಕೆ ಬರುವುದಕ್ಕೆ ಮೊದಲು ಕೆಲವು – ಶಿಕ್ಷಣ, ಶಿಕ್ಷಣ ಕ್ಷೇತ್ರ, ಅಲ್ಲಿಯ ಘನತೆ ಗೌರವ, ಅಧ್ಯಾಪಕನೊಬ್ಬನ ಕರ್ತವ್ಯಗಳು – ಇಂಥ ಮೂಲಭೂತ ವಿಷಯಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಲು ಬಯಸುತ್ತೇನೆ.

ನನಗನ್ನಿಸುವ ಮಟ್ಟಿಗೆ ಶಿಕ್ಷಣವೆಂಬುದು ಏಕಕಾಲದಲ್ಲಿ ಮೂರ್ತ, ಅಮೂರ್ತಗಳೆಂಬ ಎರಡೂ ಲಕ್ಷಣಗಳನ್ನು ಮೈಗೂಡಿಸಿಕೊಂಡಿರಬೇಕು. ಮೂರ್ತವೆಂದರೆ ನಾವು ಶಿಕ್ಷಣ ನೀಡುತ್ತಿರುವ ತತ್‌ಕ್ಷಣದ ಸಂದರ್ಭ. ಇಂದ್ರಿಯಗಳೂ, ಬುದ್ಧಿ, ಕಲ್ಪನೆಗಳಿಗೂ ಗೋಚರವಾಗುತ್ತ ಹೋಗುವ ದಿನನಿತ್ಯದ ಸತ್ಯಗಳು. ಇವು ಸಾಮಾಜಿಕ, ರಾಜಕೀಯ, ಆರ್ಥಿಕ ಹೀಗೆ ಹಲವು ಹತ್ತು ರೀತಿಯವಾಗಿರಬಹುದು. ಈ ಮೂರ್ತಗಳನ್ನು ಮೀರಿ, ಅಲ್ಲಗಳೆದು ಅಥವಾ ನಿರ್ಲಕ್ಷಿಸಿ ನಾವು ಶಿಕ್ಷಣವನ್ನು ನೀಡುತ್ತೇವೆ ಎಂಬುದು ಒಂದು ಅಣಕದ ವಿಷಯವಾಗುತ್ತದೆ. ಆದರೆ ಕೇವಲ ಮೂರ್ತಕ್ಕೆ ಮಾತ್ರ ಬದ್ಧವಾಗಿಬಿಟ್ಟರೆ ಅಮೂರ್ತಗಳ ಮರೆವಾಗುತ್ತದೆ. ಅಂದರೆ, ಪ್ರಜಾಪ್ರಭುತ್ವದ ತಳಹದಿಯ ಮೇಲೆ ನಿರ್ಮಿಸಬೇಕೆಂದಿರುವ ನಮ್ಮ ನಾಡು ತನ್ನ ದೃಷ್ಟಿಯಲ್ಲಿಟ್ಟುಕೊಂಡಿರುವ ಮೌಲ್ಯಗಳು ನಮ್ಮ ಕಣ್ತಪ್ಪುತ್ತವೆ. ಈ ಮೌಲ್ಯಗಳೆಂದರೆ, ಅಭಿಪ್ರಾಯ - ವಾಕ್ ಸ್ವಾತಂತ್ರ್ಯಗಳು ಮತ್ತು ಸಹನೆ ಸಮಾನತೆ ಎಂಬ ನಂಬಿಕೆಗಳು, ಇವೆಯೆ. ಇವಿಷ್ಟೂ ನಮ್ಮ ಸಂವಿಧಾನದಲ್ಲಿ ನಾವುಗಳೆಲ್ಲ ಒಪ್ಪಿಕೊಂಡಿರುವ ಮೌಲ್ಯಗಳಾದ ಸ್ವಾತಂತ್ರ್ಯ, ಜಾತ್ಯತೀತತೆ ಮತ್ತು ಸಮಾಜವಾದ ಇವುಗಳಿಗೆ ಪೂರಕವಾಗಿರಬೇಕು ಎಂದು ನಾನು ಹೇಳಲೇಬೇಕಾಗಿಲ್ಲ. ಅಭಿವ್ಯಕ್ತಿ ಮತ್ತು ವಾಕ್ ಸ್ವಾತಂತ್ರ್ಯವೆಂದರೆ ಸ್ವೇಚ್ಛಾ ಪ್ರವೃತ್ತಿಯಲ್ಲ; ಹಿಂಸಾ ಪ್ರಚೋದನೆಯಲ್ಲ; ಸಮುದಾಯವನ್ನು ಒಡೆಯುವ ಯತ್ನಗಳಿಗೆ ಬಳಸುವುದಲ್ಲ.

ಹೀಗೆ ಮೂರ್ತ ವಾಸ್ತವಗಳಿಗೂ, ಅಮೂರ್ತ ಮೌಲ್ಯಗಳಿಗೂ ಎಂದೂ ವಿಮುಖರಾಗದೇ ನಮ್ಮ ಜವಾಬ್ದಾರಿ ಗಳನ್ನು ನಿರ್ವಹಿಸಬೇಕಾದ ಅದ್ಭುತ, ಚೇತೋಹಾರಿ ಹಾಗೂ ಭಯಂಕರ ಸವಾಲುಗಳು ಅಧ್ಯಾಪಕರದ್ದು ಹಾಗೂ ವಿಶ್ವವಿದ್ಯಾಲಯಗಳದ್ದು.

ಇಂಥ ಸವಾಲುಗಳ ಜವಾಬ್ದಾರಿಯನ್ನು ಅಧ್ಯಾಪಕ ನಿರ್ವಹಿಸತಕ್ಕದ್ದು ಹೇಗೆ? ದಿನನಿತ್ಯದ ಪಾಠ ಪ್ರವಚನಗಳನ್ನು ಹೇಳಿ ಪರೀಕ್ಷೆಗಳಿಗೆ ತಯಾರು ಮಾಡಿ ಪದವೀಧರರನ್ನು ಉತ್ಪಾದಿಸುವುದಷ್ಟೆಯೆ? ಹಾಗಾದರೆ ಸರ್ವಾಧಿಕಾರಿ ವ್ಯವಸ್ಥೆಯ ಅಧ್ಯಾಪಕನಿಗೂ, ಪ್ರಜಾಪ್ರಭುತ್ವದಲ್ಲಿನ ಒಬ್ಬ ಅಧ್ಯಾಪಕನಿಗೂ ಇರುವ ವ್ಯತ್ಯಾಸವೇನು? ಪ್ರಜಾಪ್ರಭುತ್ವದಲ್ಲಿ




ಒಬ್ಬ ಸ್ವತಂತ್ರಶೀಲತೆಯ, ಆರೋಗ್ಯಕರ ಬುದ್ಧಿ-ಮನಸ್ಸಿನ, ಮನುಷ್ಯನನ್ನು ಮನುಷ್ಯನನ್ನಾಗಿ ಮಾತ್ರ ಗುರುತಿಸುವ ಮನೋಭಾವ ಬೆಳೆಸಿಕೊಳ್ಳುವ ನಾಗರಿಕನನ್ನು ಸೃಷ್ಟಿಸುವುದೂ ಕೂಡ ಅಧ್ಯಾಪಕನ ಕರ್ತವ್ಯ, ಅವನ ವೃತ್ತಿಧರ್ಮ. ಈ ಎಲ್ಲ ಲಕ್ಷಣಗಳೂ – ಮತ್ತೆ ಹೇಳುವುದಾದರೆ – ಮೇಲೆ ಹೇಳಿದ ಮೌಲ್ಯಗಳಿಗೆ ಪೂರಕವಾಗಿರಬೇಕು. ಒಬ್ಬ ಅಧ್ಯಾಪಕನ ಹಾಗೂ ಒಟ್ಟು ಶಿಕ್ಷಣ ಕ್ಷೇತ್ರದ ಹೊಣೆಗಾರಿಕೆ ಸದ್ಯದ ಸಮಾಜಕ್ಕಷ್ಟೇ ಅಲ್ಲ; ಭವಿಷ್ಯದ, ಇನ್ನೂ ರೂಪುಗೊಳ್ಳಬೇಕಾದ ಸಮಾಜಕ್ಕೆ ಕೂಡ. ಶಿಕ್ಷಣ ಕ್ಷೇತ್ರಕ್ಕೆ, ಶಿಕ್ಷಕನಿಗೆ ಈ ದರ್ಶನ ಶಕ್ತಿ ಇದ್ದೇ ಇರಬೇಕು. ಇದು ಅತ್ಯಾವಶ್ಯಕ. ಹಾಗೂ ಇದು ಅಧ್ಯಾಪಕನೊಬ್ಬನ ವ್ಯಕ್ತಿತ್ವದ ಅವಿಭಾಜ್ಯ ಅಂಗವೂ ಕೂಡ ಹೌದು.

ಸ್ವತಃ ಅಧ್ಯಾಪಕರಾದ ತಮಗೆ ಇವೆಲ್ಲ ತಿಳಿದಿರಲೇಬೇಕಾದ ವಿಷಯಗಳು. ನಾನು ಇವುಗಳ ಬಗ್ಗೆ ತಮಗೆ ಹೆಚ್ಚು ವ್ಯಾಖ್ಯಾನಿಸಬೇಕಿಲ್ಲ. ಆದರೆ ಕೆಲವು ಉದಾಹರಣೆಗಳನ್ನು ಕೊಟ್ಟು – ಸದ್ಯದ ಪಟ್ಟಾಭಿ ಪ್ರಸಂಗಕ್ಕೆ ಸಂಬಂಧವಿರುವುದರಿಂದ – ನನ್ನ ಮಾತುಗಳನ್ನು ಮುಂದುವರೆಸುತ್ತೇನೆ.

ಪಟ್ಟಾಭಿರಾಮ ಸೋಮಯಾಜಿ ಅವರು ಇಂಗ್ಲಿಷ್ ಅಧ್ಯಾಪಕರು; ನಾನೂ ಒಬ್ಬ ಇಂಗ್ಲಿಷ್ ಅಧ್ಯಾಪಕನಾಗಿದ್ದರಿಂದ ನಾನು ಹೇಳುತ್ತಿರುವ ಮಾತುಗಳಿಗೆ ಸ್ವಾನುಭವದ ಲಕ್ಷಣವೂ ಇರುತ್ತದೆ. ನಮ್ಮ ಪಠ್ಯಗಳಲ್ಲಿ ಗಾಂಧೀಜಿ, ಅಂಬೇಡ್ಕರ್, ಟಾಗೋರ್, ಬರ್ಟ್ರಂಡ್ ರಸೆಲ್, ಆರ್ವೆಲ್, ಶೇಕ್ಸ್‌ಪಿಯರ್, ಟಾಲ್‌ಸ್ಟಾಯ್ ಇಂಥ ಲೇಖಕರ ಪಾಠಗಳು ಇರುತ್ತವೆ. ಇವುಗಳು ವೈವಿಧ್ಯಮಯ ವಿಷಯಗಳ ಕುರಿತಾಗಿರುತ್ತವೆ: ಧರ್ಮ, ರಾಜಕೀಯ, ಜಾತಿ, ಅಸಮಾನತೆ, ಹಿಂಸೆ, ಮನುಷ್ಯ ಸಂಬಂಧಗಳಲ್ಲಿನ ಸಂಘರ್ಷಗಳು ಇತ್ಯಾದಿ. ಕೆಲವು ನೇರ ಸಮಾಜಕ್ಕೆ ಹತ್ತಿರವಾದವುಗಳಾದರೆ ಕೆಲವು ಇಡೀ ವಿಶ್ವವನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ರಚಿಸಿದವುಗಳಾಗಿರುತ್ತವೆ. ಆದರೆ ಎಲ್ಲವೂ ಮನುಷ್ಯ ಧರ್ಮ, ಸಮಾನತೆ, ಸ್ವಾತಂತ್ರ್ಯ, ಆದ್ದರಿಂದಲೇ ಪ್ರಶ್ನೆ ಮಾಡುವ, ಕ್ರಿಯಾಶೀಲವಾಗಿ ಟೀಕಿಸುವ ಹಕ್ಕು ಇವುಗಳನ್ನು ನಮಗೆ ಕಲಿಸುತ್ತವೆ. ತಾವು ಪಟ್ಟಾಭಿ ಅವರಿಗೆ ಬರೆದ ಪತ್ರವನ್ನು ನೋಡಿದರೆ ಅಧ್ಯಾಪಕನೊಬ್ಬ ಇಂಥ ಪಾಠಗಳನ್ನು ಮಾಡುವ ಹಾಗೆಯೇ ಇಲ್ಲ. ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪ್ರಜ್ಞೆ, ನಾಗರಿಕ ಹಕ್ಕು, ಕರ್ತವ್ಯಗಳು, ಸಾಮಾಜಿಕ ಸಮಸ್ಯೆಗಳು, ಅವಕ್ಕೆ ಪರಿಹಾರಗಳು ಇವುಗಳ ಕುರಿತಾದ ಕಳಕಳಿ ಇವುಗಳನ್ನೆಲ್ಲ ಅಧ್ಯಾಪಕನೊಬ್ಬ ಚರ್ಚಿಸುವ ಹಾಗೆಯೇ ಇಲ್ಲ. ಹಿಂದೂಧರ್ಮದ ಅವಹೇಳನ ಎಂದು ಪಟ್ಟಾಭಿ ಅವರ ವಿಷಯದಲ್ಲಿ ತಾವು – ಒಂದೂ ನಿರ್ದಿಷ್ಟ ಸಾಕ್ಷಿಯನ್ನು ಕೊಡದೆ – ಆರೋಪ ಹೊರೆಸಿದ್ದೀರಿ. ತಮಗೂ ತಿಳಿದಿರಬಹುದಾದಂತೆ ವಿವೇಕಾನಂದ, ಗಾಂಧೀಜಿ, ಅಂಬೇಡ್ಕರ್ ಅವರು ಹಿಂದೂ ಧರ್ಮದ ಕುರಿತಾಗಿ ಅತ್ಯಂತ ಕಟುವಾದ ಟೀಕೆಗಳನ್ನೂ ಮಾಡಿದ್ದಾರೆ. ಈ ಮಹಾನ್ ವ್ಯಕ್ತಿಗಳು ಮತ್ತು ಧರ್ಮದ ಬಗೆಗಿನ ಅವರ ವಿಚಾರಧಾರೆ ಇವುಗಳ ಕುರಿತಾಗಿ ಸಂದರ್ಭಕ್ಕೆ ತಕ್ಕಹಾಗೆ ಅಧ್ಯಾಪಕನೊಬ್ಬ ತರಗತಿಯಲ್ಲಿ, ವಿಚಾರ ಸಂಕಿರಣಗಳಲ್ಲಿ, ವಿದ್ಯಾರ್ಥಿಗಳೊಂದಿಗಿನ ಸಂವಾದಗಳಲ್ಲಿ ಮಾತನಾಡಿದರೆ ಅವನ ಮೇಲೂ ಈ ಬಗೆಯ ಆರೋಪ ಹೊರೆಸುತ್ತೀರೇನು? ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಇಂಥ ವ್ಯಕ್ತಿಗಳ ಬಗ್ಗೆ ಚರ್ಚಿಸದೇ ಇರಲಿಕ್ಕೆ ಯಾವ ಸಾಹಿತ್ಯ ವಿದ್ಯಾರ್ಥಿಗಾದರೂ ಸಾಧ್ಯವೆ? ಅಥವಾ ಸಮಾಜ ಶಾಸ್ತ್ರ, ಇತಿಹಾಸ, ಭಾರತೀಯ ಸ್ವಾತಂತ್ರ್ಯ ಚಳವಳಿಗಳ ಕುರಿತಾದ ಅಧ್ಯಯನಗಳು ಇವುಗಳಲ್ಲಿ ನಿರತನಾದ ಯಾವ ಅಧ್ಯಾಪಕನಿಗಾದರೂ ಸಾಧ್ಯವೆ? ಹಾಗೆ ಅವರು ಚರ್ಚಿಸಿದರೆ ಅವರು ವಿಶ್ವವಿದ್ಯಾಲಯದ ನಿಯಮಾವಳಿಗಳನ್ನು ಮುರಿದಂತೆಯೆ? ಟಾಗೋರ್ ಅವರ 'ಎಲ್ಲಿ ಮನವು ನಿರ್ಭೀತಿಯಿಂದಿರುವುದೋ' ಪದ್ಯವನ್ನು ಅಧ್ಯಾಪಕನೊಬ್ಬ ಹೇಗೆ ಪಾಠ ಮಾಡಬೇಕು? ಸುತ್ತಲೂ ಭಯ, ಆತಂಕಗಳ

ವಾತಾವರಣ ಸೃಷ್ಟಿಮಾಡಿ ತರಗತಿಯ ಒಳಗೆ ಮಾತ್ರ 'ನಿರ್ಭೀತ ಮನಸ್ಸು'ಗಳನ್ನು ಸೃಷ್ಟಿಸಲು ಸಾಧ್ಯ ಎಂದು ತಾವು ನಂಬಿದ್ದೀರಿ ಎಂದು ನನಗನ್ನಿಸುವುದಿಲ್ಲ. 'ನಿರ್ಭೀತ ಮನಸ್ಸು' ಏನು ಶೂನ್ಯದಲ್ಲಿ ವಿಕಾಸವಾಗುತ್ತದೋ ಅಥವಾ ಶೂನ್ಯದಲ್ಲಿ ಅಭಿವ್ಯಕ್ತಗೊಳ್ಳುತ್ತದೋ ?

ಈಗ ಪಟ್ಟಾಭಿ ಸೋಮಯಾಜಿ ಅವರ ವಿಷಯಕ್ಕೆ ಬರೋಣ. ಸಂದರ್ಭ: ಮಂಗಳೂರಿನಲ್ಲಿ ನಡೆದ ಪಬ್ ದಾಳಿ ಮತ್ತು ಅಲ್ಲಿ ಕೆಲ ಯುವಕರು ಹಿಂದೂ ಸಂಸ್ಕೃತಿ ರಕ್ಷಣೆಯ ಹೆಸರಿನಲ್ಲಿ ಯುವತಿಯರ ಮೇಲೆ ನಡೆಸಿದ ಬರ್ಬರ ಹಲ್ಲೆ. ಈ ಬಗ್ಗೆ ಒಬ್ಬ ಅಧ್ಯಾಪಕ ಮಾತನಾಡುವುದು ತಪ್ಪೆ? ಹಾಗೆ ಮಾತನಾಡಿದರೆ ಅದು ಹಿಂದೂ ಧರ್ಮಕ್ಕೆ ಮಾಡಿದ ಅಪಮಾನವೆ? 'ಯತ್ರ ನಾರ್ಯಸ್ತು ಪೂಜ್ಯಂತೇ' ಎಂಬ ನಂಬಿಕೆಯಲ್ಲಿ ವಿಶ್ವಾಸವಿರುವ ಹಿಂದೂ ಧರ್ಮಕ್ಕೆ ಅವಮಾನ ಮಾಡಿದವರನ್ನು ಖಂಡಿಸಿದರೆ, ಖಂಡಿಸಿದವರು ಆರೋಪಕ್ಕೆ ಗುರಿಯಾಗುತ್ತಾರೆ ಎಂಬುದು ಅತ್ಯಂತ ವಿಲಕ್ಷಣವಾದ ಸಂಗತಿ. ನಿಜವಾದ ಸ್ವತಂತ್ರಶೀಲ, ಸ್ವಾಯತ್ತ, ಘನತೆ ಗೌರವಗಳ ವಿಶ್ವವಿದ್ಯಾಲಯ, ತಾನೆ ಇಂಥ ವಿಷಯದಲ್ಲಿ ಮುಂಚೂಣಿಯಲ್ಲಿ ನಿಂತು ಇಂಥ ಅವಹೇಳನಕಾರಿ ವಿದ್ಯಮಾನಗಳನ್ನು ಖಂಡಿಸಬೇಕು. ಯಾಕೆಂದರೆ ನಮಗೆ ಗೊತ್ತಾದ ಮಟ್ಟಿಗೆ, ಅಲ್ಲಿ ಹಲ್ಲೆಗೊಳಗಾದವರೂ ವಿದ್ಯಾರ್ಥಿಗಳು ಮತ್ತು ಹಲ್ಲೆ ಮಾಡಿದವರೂ ಬಹುಶಃ ವಿದ್ಯಾರ್ಥಿಗಳೇ. ಅಂದರೆ ಈ ವಿಷಯದಲ್ಲಿ ವಿದ್ಯಾರ್ಥಿಗಳಿಗೆ ತಿಳಿವಳಿಕೆ ನೀಡುವುದು ಅಧ್ಯಾಪಕನೊಬ್ಬನ ಕರ್ತವ್ಯವಲ್ಲವೆ? ನಮಗೆ ಒಪ್ಪಿಗೆಯಾಗದ ವಿಷಯದಲ್ಲಿ ನಾವು ವಿರೋಧ ವ್ಯಕ್ತಪಡಿಸಬೇಕಾದ ರೀತಿ, ತೋರಬೇಕಾದ ಶಿಸ್ತು, ಇಂಥವುಗಳ ಕುರಿತಾಗಿ ಯುವಕರಿಗೆ ತಿಳಿಯ ಹೇಳಿದರೆ ಅದು ಅಧ್ಯಾಪಕನ ಅಶಿಸ್ತಾಗುತ್ತದೆಯೆ? ಇಷ್ಟಕ್ಕೂ ಅವರು ನಿರ್ದಿಷ್ಟವಾಗಿ ಏನು ಹೇಳಿದರು ಎಂದು ಪ್ರಾಂಶುಪಾಲರಾಗಲೀ, ತಾವಾಗಲೀ ಹೇಳುವುದಿಲ್ಲ.

ಅವರು ಎನ್.ಡಿ.ಟಿ.ವಿ.ಗೆ ಏನು ಸಂದರ್ಶನ ನೀಡಿ, ಏನು ಹೇಳಿದರು ಎಂದು ಕೂಡ ತಿಳಿಸುವುದಿಲ್ಲ. ಇಷ್ಟಕ್ಕೂ ಆ ದೂರದರ್ಶನ ವಾಹಿನಿಯವರು ಈ ಸಂದರ್ಶನವನ್ನು ಪ್ರಸಾರವೇ ಮಾಡಲಿಲ್ಲ ಎಂಬುದಾದರೂ ತಮ್ಮ ಗಮನಕ್ಕೆ ಬಂದಿದೆಯೆ ?

ಗಾಳಿಯಲ್ಲಿ ತೂರಿಬಿಟ್ಟ ಆಪಾದನೆಗಳಿಗೆ ಶಬ್ದಗಳ ರೂಪ ಕೊಟ್ಟು ಆರೋಪದ ಲೇಪ ಹಚ್ಚಿ ಈಗ ಅವರಿಂದ ವಿವರಣೆ ಕೇಳುತ್ತಿದ್ದೀರಿ, ಅಷ್ಟೆ.

ಕಾಲೇಜಿನ ಎಪ್ಪತ್ತೊಂದು ವಿದ್ಯಾರ್ಥಿಗಳು ಇಡೀ ಕಾಲೇಜನ್ನು ಪ್ರತಿನಿಧಿಸುತ್ತಾರೇನು ? ವಿದ್ಯಾರ್ಥಿಗಳು ನೀಡಿದ ಹೇಳಿಕೆಯಲ್ಲಿ 'ಎಲ್ಲ ವಿದ್ಯಾರ್ಥಿಗಳು' ಎಂದಿದೆ. ಪ್ರಾಂಶುಪಾಲರು '೭೧ ವಿದ್ಯಾರ್ಥಿ'ಗಳು ಎಂದಿದ್ದಾರೆ. ಹಾಗಾದರೆ ಆ ಕಾಲೇಜಿನ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಎಷ್ಟು ?

ಜಿಲ್ಲಾ ಉಸ್ತುವಾರಿ ಮಂತ್ರಿಗಳಾದ ಕೃಷ್ಣ ಪಲೇಮಾರ್ ಅವರು ವಿದ್ಯಾರ್ಥಿಗಳ ಅಹವಾಲು ಹಿಡಿದು ಪ್ರಾಂಶುಪಾಲರನ್ನು ಭೇಟಿಯಾಗಿ ಸೋಮಯಾಜಿ ಅವರ ಮೇಲೆ 'ಕ್ರಮ ಜರುಗಿಸಿ' ಎಂದು ಆದೇಶ ನೀಡಿದ್ದಾರೆ ಎಂದು ತಿಳಿಸಲಾಗಿದೆ. ಮಾನ್ಯ ಸಚಿವರು ಈ ಎಪ್ಪತ್ತೊಂದು ವಿದ್ಯಾರ್ಥಿಗಳನ್ನು ಬಿಟ್ಟು ಕಾಲೇಜಿನ ಮಿಕ್ಕ ವಿದ್ಯಾರ್ಥಿಗಳನ್ನು ಭೇಟಿಯಾದರೆ ? ಈ ಪ್ರಸಂಗದ ಬಗ್ಗೆ ಅವರುಗಳ ನಿಲುವು ಏನು ಎಂದು ಕೇಳಿದರೆ ? ಮಾನ್ಯ ಸಚಿವರು ಕಾಲೇಜಿನ ಪ್ರಾಂಶುಪಾಲರ ಬಳಿ ಹೋಗುವಾಗ, ಆ ಕಚೇರಿಗೆ ತಾವೊಬ್ಬರೇ ಹೋಗುವುದರ ಬದಲು, ತಮ್ಮ ಹಾಗೂ ಪ್ರಾಂಶುಪಾಲರ ಸ್ಥಾನಮಾನಗಳ ಘನತೆ ಗೌರವಗಳ ಬಗ್ಗೆ ನಿರ್ಲಕ್ಷ್ಯ ತೋರಿ ಆ ಎಪ್ಪತ್ತೊಂದು ವಿದ್ಯಾರ್ಥಿಗಳ ದಂಡನ್ನೇ ಕಟ್ಟಿಕೊಂಡು ಹೋಗಿದ್ದನ್ನು ಪ್ರಾಂಶುಪಾಲರು ಸಹಿಸಿದ್ದು ಹೇಗೆ ? ಶಿಕ್ಷಣ ಕ್ಷೇತ್ರದ, ವಿಶ್ವವಿದ್ಯಾಲಯದ ಗೌರವ, ಘನತೆಗಳಿಗೆ ಇದು ಕುಂದು ತರಲಿಲ್ಲವೇ ?

ಕುಲಪತಿಗಳಿಗೆ ನೀಡಿದ ಹೇಳಿಕೆಯಲ್ಲಿ ಪ್ರಾಂಶುಪಾಲರು ಎಪ್ಪತ್ತೊಂದು ವಿದ್ಯಾರ್ಥಿಗಳ ಹೇಳಿಕೆ ಹಾಗೂ ಸಚಿವ ಕೃಷ್ಣ ಪಲೇಮಾರ್ ಅವರ ಆದೇಶ ಇವುಗಳ ಬಗ್ಗೆ ಹೇಳುತ್ತಾರೆ. ಆದರೆ ಪ್ರಾಂಶುಪಾಲರಾಗಲೀ, ತಾವಾಗಲೀ ಕಾಲೇಜಿನ ಮಿಕ್ಕ ವಿದ್ಯಾರ್ಥಿಗಳನ್ನೂ ಭೇಟಿಯಾದ ಹಾಗೆ ಕಾಣುವುದಿಲ್ಲ. ಈ ಮಿಕ್ಕ ವಿದ್ಯಾರ್ಥಿಗಳು ತಮಗೆ ಈ ಎಪ್ಪತ್ತೊಂದು ಮಂದಿ ಬೆದರಿಕೆಗಳು ಹಾಕುತ್ತಿದ್ದಾರೆ ಎಂದು ಪ್ರಾಂಶುಪಾಲರಿಗೆ ದೂರು ನೀಡಿರುವುದು ನಿಜ ತಾನೆ ? ಇಡೀ ಕಾಲೇಜನ್ನು ಗಟ್ಟಿದನಿಯ ಒಂದಷ್ಟು ಜನ ನಿಯಂತ್ರಿಸುವುದಕ್ಕೆ ಮತ್ತು ವಿಶ್ವವಿದ್ಯಾಲಯಕ್ಕೇ ಅದರ ಕರ್ತವ್ಯಗಳನ್ನು ತಿಳಿಸಿಹೇಳಿ ಯಜಮಾನಿಕೆ ಮಾಡುವುದಕ್ಕೆ ಬಿಟ್ಟಿದ್ದೀರೇನು ?

ಪಟ್ಟಾಭಿ ಅವರು ಸಭೆ ಸಮಾರಂಭಗಳಲ್ಲಿ 'ಉದ್ರೇಕಕಾರಿ ಭಾಷಣಗಳು' ಮಾಡುತ್ತಾರೆ ಎಂದರೆ ಅರ್ಥವೇನು? 'ಉದ್ರೇಕಕಾರಿ' ಎಂಬ ಮಾತಿಗೆ ವಿಶ್ವವಿದ್ಯಾಲಯದ ನಿಯಮಾವಳಿಗಳ ಪ್ರಕಾರ ವಿವರಣೆಯೇನು ? ಅದನ್ನು ತಾವು ಸ್ಪಷ್ಟಪಡಿಸಬೇಕು. ಅಂದಿನ ವ್ಯವಸ್ಥೆಗೆ, ಅಧಿಕಾರಸ್ಥ ಜನಗಳಿಗೆ, ಅವರ ಸಿದ್ಧಾಂತಗಳಿಗೆ ಅನುಕೂಲವಲ್ಲದ ಮಾತುಗಳಾಡಿದರೆ ಅಥವಾ ನಿಲುವು ತಾಳಿದರೆ ಅದು 'ಉದ್ರೇಕಕಾರಿ'ಯಾಗುತ್ತದೇನು ?

ನಿಯಮಾವಳಿಗಳನ್ನು ಅರ್ಥೈಸುವುದು, ಅನ್ವಯಿಸುವುದು ಇವುಗಳನ್ನು ಕೂಡ ವಿಶ್ವವಿದ್ಯಾಲಯವು ಅಂದಿನ ವ್ಯವಸ್ಥೆಗೆ, ವಿಶೇಷವಾಗಿ ರಾಜಕೀಯ ವ್ಯವಸ್ಥೆ ಹಾಗೂ ಅದರ ಸಿದ್ಧಾಂತ – ಇವುಗಳಿಗೆ ಅನುಕೂಲಕರವಾಗಿ ತಾನೆ ಅನ್ವಯಿಸುವುದು ?

ಉದಾಹರಣೆಗೆ : ೧೯೭೫-೭೭ರ ತುರ್ತುಸ್ಥಿತಿಯ ಕಾಲದಲ್ಲಿ ವಿಶ್ವವಿದ್ಯಾಲಯದ ಕೆಲವು ಉಪಕುಲಪತಿಗಳು, ಅಧ್ಯಾಪಕರುಗಳು ತುರ್ತು ಪರಿಸ್ಥಿತಿಯಡಿಯಲ್ಲಿ ಶಿಕ್ಷಣ ಕ್ಷೇತ್ರದ ವಾತಾವರಣ ಎಷ್ಟು ತಿಳಿಯಾಗಿದೆ, ಎಷ್ಟು ಶಿಸ್ತಿನಿಂದ ಕೂಡಿದೆ. ವಿದ್ಯಾರ್ಥಿ ಸಂಘಗಳಿಲ್ಲದೆ, ಚಳುವಳಿಗಳಿಲ್ಲದೆ ಎಷ್ಟು ನೆಮ್ಮದಿಯಾಗಿದೆ ಎಂದು ಹಾಡಿ ಹೊಗಳಿದ್ದು ತಮಗೂ ನೆನಪಿರಬೇಕು, ಅಲ್ಲವೆ? ಆಕಾಶವಾಣಿ, ಸರಕಾರಿ ಸಮಾರಂಭಗಳಲ್ಲಿ ಏರ್ಪಡಿಸಿದ ಕವಿ ಸಮ್ಮೇಳನಗಳಲ್ಲಿ ನಮ್ಮ ಪ್ರೊಫೆಸರ್ - ಕವಿಗಳು ತುರ್ತು ಪರಿಸ್ಥಿತಿಯನ್ನು ಹಾಡಿ ಕೊಂಡಾಡಿ ರಚಿಸಿದ ಕವನಗಳನ್ನು ಓದಿದ್ದೂ ನಿಜವಲ್ಲವೆ ? ಇವರ್ಯಾರಿಗೂ ವಿಶ್ವವಿದ್ಯಾಲಯವು ಶಿಸ್ತುಕ್ರಮ ಜರುಗಿಸುವುದಾಗಿ ಆಕ್ಷೇಪಣಾ ಪತ್ರ ನೀಡಲಿಲ್ಲ. ಶಿಕ್ಷಣ ಕ್ಷೇತ್ರದ ಘನತೆ ಗೌರವಗಳಿಗೆ ಆಗ ಚ್ಯುತಿ ಬರಲಿಲ್ಲ ಅಲ್ಲವೆ ?

ಈಗ ತುರ್ತು ಪರಿಸ್ಥಿತಿ ಇಲ್ಲವಾದದ್ದರಿಂದ ವ್ಯವಸ್ಥೆಯ ವಿರುದ್ಧ ಮಾತನಾಡಿದವರ ಮೇಲೆ ನಿಯಮಾವಳಿಗಳನ್ನೂ ಅನುಕೂಲಕ್ಕೆ ತಕ್ಕಹಾಗೆ ತಿರುಚಿ ಕ್ರಮ ಜರುಗಿಸುತ್ತೀರಿ, ಶಿಕ್ಷಣ ಕ್ಷೇತ್ರದ ಘನತೆಗೆ ಊನವಾಗುತ್ತದೆ ಎಂದು ಘೋಷಿಸುತ್ತೀರಿ.

ಇದೇ ಸರ್ಕಾರ ಹೋದ ವರ್ಷದ ಕೊನೆ ಭಾಗದಲ್ಲಿ 'ಭಯೋತ್ಪಾದನಾ ವಿರೋಧಿ ಅಭಿಯಾನ' ಎಂಬ ಕಾರ್ಯಕ್ರಮ ಹಮ್ಮಿಕೊಂಡು ಕರ್ನಾಟಕದಾದ್ಯಂತ ಕಾಲೇಜಿನ ಪ್ರಿನ್ಸಿಪಾಲರುಗಳಿಗೆ ಫತ್ವಾ ಹೊರಡಿಸಿ ಸಾವಿರಾರು ವಿದ್ಯಾರ್ಥಿಗಳ ಮೇಳಗಳನ್ನು ನಡೆಸಿ, ಭೂಮಿಗೆ ಸುಮಾರು ೪೫°ಯಷ್ಟು ಕೈಗಳನ್ನು ಎತ್ತಿ ಹಿಟ್ಲರ್ ಮಾದರಿ ಪ್ರಮಾಣ ವಚನ ತೆಗೆದುಕೊಳ್ಳುವುದಕ್ಕೆ ವಿಶ್ವವಿದ್ಯಾಲಯಗಳು, ಕಾಲೇಜುಗಳು ಚಕಾರವೆತ್ತದೆ ಒಪ್ಪಿದ್ದು ವಿಶ್ವವಿದ್ಯಾಲಯದ ಸ್ವಾಯತ್ತತೆ, ಮೂಲಭೂತ ಮೌಲ್ಯಗಳ ಬಗ್ಗೆ ಗೌರವ ಇವುಗಳನ್ನು ಸೂಚಿಸುವಂತೆ ಇದ್ದುವೆ? ಮತ್ತೆ

'ಹೊಸತು' ಪತ್ರಿಕೆಯನ್ನು ತಪ್ಪದೆ ಓದುತ್ತಿದ್ದು ಅದಕ್ಕೆ ಬೆಂಬಲ ನೀಡುತ್ತಿದ್ದ ಶ್ರೀಮತಿ ಯು. ಎಸ್. ಸಾಕಮ್ಮನವರ ನೆನಪಿನಲ್ಲಿ ಅವರ ಮಕ್ಕಳು ಶ್ರೀ ಯು. ಎಸ್. ಶ್ರೀನಿವಾಸನ್ ಮತ್ತು ಶ್ರೀಮತಿ ಯು. ಎಸ್. ಪಾರ್ವತಿ ಪ್ರತಿವರ್ಷವೂ 'ಹೊಸತು'ವಿನ ಲೇಖಕಿಯರ ಎರಡು ಉತ್ತಮ ಬರಹಗಳಿಗೆ ಬಹುಮಾನ ನೀಡಬೇಕೆಂದು ಒಂದು ಸಾವಿರ ರೂಪಾಯಿಗಳನ್ನು ನೀಡಿದ್ದಾರೆ. ಕಳೆದ ಮೂರು ವರ್ಷಗಳಿಂದ ಬಹುಮಾನಗಳನ್ನು ನೀಡುತ್ತಾ ಬರಲಾಗಿದೆ. ೨೦೦೭-೨೦೦೮ರಲ್ಲಿ ಬಹುಮಾನಗಳನ್ನು ಡಾ|| ಎನ್. ಗಾಯತ್ರಿ (ಜನವರಿ ೨೦೦೮ : ಗನ್ನಿಗೆ ಮಣಿಯದ ಹುಲ್ಲಿನ ಟೋಪಿ) ಮತ್ತು ಶ್ರೀಮತಿ ಜಿ. ಎಸ್. ಸುಶೀಲಾದೇವಿ ಆರ್. ರಾವ್ (ಅಕ್ಟೋಬರ್ ೨೦೦೭ : ನಡೆವುದೊಂದೇ ಭೂಮಿ...) ಅವರಿಗೆ ನೀಡಲಾಗುತ್ತದೆ. ಬಹುಮಾನಿತ ಬರಹಗಳನ್ನು ಆಯ್ದುಕೊಟ್ಟ ತೀರ್ಪುಗಾರರಿಗೆ 'ಹೊಸತು' ಋಣಿಯಾಗಿದೆ.

– ಸಂಪಾದಕ

ತಮಗೇ ತಿಳಿದಿರಬೇಕಾದಂತೆ ಕಾಲೇಜು ಪ್ರಿನ್ಸಿಪಾಲರುಗಳಿಗೆ ಈ ಅಭಿಯಾನದ ಕುರಿತಾಗಿ ಕಳಿಸಿದ ಸುತ್ತೋಲೆಗಳ ಪ್ರತಿಯನ್ನು ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಅಧ್ಯಕ್ಷರಿಗೂ ಕಳಿಸಿದ್ದು ನಿಜ ತಾನೆ? ಘನತೆ, ಗೌರವವಿರುವ ಯಾವನಾದರೂ ಪ್ರಾಂಶುಪಾಲ, ಉಪಕುಲಪತಿ ಸರಕಾರದ ಇಂಥ ಕೋಮುವಾದೀ ಕ್ರಮವನ್ನು ಪ್ರತಿಭಟಿಸಲು ಸಾಧ್ಯವಾಗಲಿಲ್ಲ ಯಾಕೆ? ಸಾಧ್ಯವಾಗದಿದ್ದಷ್ಟೇ ಅಲ್ಲ, ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಪಟ್ಟವರೇ ವೀರಾವೇಶದ ಭಾಷಣಗಳನ್ನು - ಪರೋಕ್ಷವಾಗಿ ಒಂದು ಕೋಮಿನ ವಿರುದ್ಧ - ಮಾಡಿದುದೂ ನಿಜವಲ್ಲವೆ? ಈ ಎಲ್ಲ ಮಾತುಗಳನ್ನು ನಾನು ಶಿಕ್ಷಣ ಸಚಿವರು ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳೂ ಭಾಗವಹಿಸಿದ್ದ 'ಪಬ್ ಸಂಸ್ಕೃತಿ ಮತ್ತು ನಂತರ' ಎಂಬ ವಿಚಾರ ಸಂಕಿರಣದಲ್ಲಿ ವಿದ್ಯಾರ್ಥಿಗಳೆದುರಿಗೆ ಹೇಳಿದ್ದೇನೆ. ಸಚಿವರಾಗಲೀ, ಕುಲಪತಿಗಳಾಗಲೀ ಇದಕ್ಕೆ ಉತ್ತರ ಕೊಡಲಿಲ್ಲ. ಸರಕಾರದ ಶಂಖದಿಂದ ಉದುರಿದ್ದೆಲ್ಲವೂ ತೀರ್ಥವೆಂದು ಸ್ವೀಕರಿಸುವುದು ಸಾಧ್ಯವಿಲ್ಲ ಎಂದು ನಮ್ಮ ಕುಲಪತಿಗಳಿಗೆ, ಪ್ರಾಂಶುಪಾಲರುಗಳಿಗೆ ಹೊಳೆಯುವುದಿಲ್ಲ ಹೇಗೆ ಎಂಬುದು ಅಚ್ಚರಿಯ ವಿಷಯ.

ವಿಶ್ವವಿದ್ಯಾಲಯದ ಸಿದ್ಧಾಂತ ಸಮಾಜದ ಪರವಾಗಿರಬೇಕು. ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳುವ ಅಂತಃಶಕ್ತಿ ಉಳ್ಳದ್ದಾಗಿರಬೇಕು. ಆಳುವ ಪಕ್ಷ, ಅವರ ಸಿದ್ಧಾಂತಗಳು ಇವುಗಳು ಬದಲಾದಂತೆ ವಿ. ವಿ.ಗಳೂ ಅಧ್ಯಾಪಕರುಗಳೂ ಅದಕ್ಕೆ ತಕ್ಕಹಾಗೆ ತಮ್ಮ ವೇಷ, ಬಣ್ಣ ಬದಲಾಯಿಸಿ ಅವರ ತಾಳಕ್ಕೆ ಕುಣಿಯುವುದು ಗೌರವ, ಘನತೆಗಳನ್ನು ತರುವಂಥದಲ್ಲ.

ಪಟ್ಟಾಭಿಯವರ ಉದಾಹರಣೆ ಇಟ್ಟುಕೊಂಡು ಇಡೀ ಶಿಕ್ಷಕ ವೃಂದದ ಬಾಯಿಗಳನ್ನೇ ಮುಚ್ಚಿಸುವ ಯತ್ನ ಈ ಇಡೀ ಪ್ರಸಂಗದಲ್ಲಿ ಢಾಳಾಗಿ ಎದ್ದುಕಾಣುತ್ತದೆ. ಸ್ವಾತಂತ್ರ್ಯವೆಂಬುದು ಎಲ್ಲಿಯೋ ಗಾಳಿಯಲ್ಲಿದೆ, ಶೂನ್ಯದಲ್ಲಿ ಮಾತ್ರವಿದೆ, ಎಲ್ಲೊ ಸಂಬಂಧವಿರದ ಸಂದರ್ಭಗಳಲ್ಲಿ – ವಿಶ್ವವಿದ್ಯಾಲಯಗಳು ಏರ್ಪಡಿಸುವ ಸೆಮಿನಾರುಗಳಲ್ಲಿದೆ, ರಾಜಕೀಯ ಭಾಷಣಗಳಲ್ಲಿದೆ, ಪತ್ರಿಕೆಗಳಲ್ಲಿ ಅವರಿವರ ಲೇಖನಗಳಲ್ಲಿವೆ, ಅಷ್ಟೆ. ಆದರೆ ನೇರ ನಮ್ಮನ್ನು ದಿನನಿತ್ಯ ತಟ್ಟುವ ಸಂದರ್ಭಗಳಲ್ಲಿ ನಿರಾಕರಿಸಲಾಗುತ್ತಿದೆ, ನಿರ್ಬಂಧ ಹೇರಲಾಗುತ್ತಿದೆ. ಭಯ, ಆತಂಕಗಳನ್ನು ಮಾತ್ರ ಸೃಷ್ಟಿಸುವಂತೆ ಎಚ್ಚರವಹಿಸಲಾಗುತ್ತಿದೆ. ಅಧ್ಯಾಪಕರುಗಳು ಯಂತ್ರಗಳ ಹಾಗೆ ಇದ್ದು, ವಿಶ್ವವಿದ್ಯಾಲಯಗಳು ಕಾರ್ಖಾನೆಗಳು ಮಾತ್ರ ಆಗಿರುವಂತೆ ಪರಿಸ್ಥಿತಿ ಸೃಷ್ಟಿಸಲಾಗುತ್ತಿದೆ.

ಅದಕ್ಕೆ ವಿದ್ಯಾವಂತರುಗಳು, ನವಸಮಾಜದ ನಿರ್ಮಾಣದ ಹೊಣೆಹೊತ್ತವರೂ, ದೂರದರ್ಶನ ಶಕ್ತಿವುಳ್ಳವರೂ ಆಗಬೇಕಾಗಿದ್ದ ನಮ್ಮಂಥ ಅಧ್ಯಾಪಕರುಗಳು, ವಿಶ್ವವಿದ್ಯಾಲಯದ ಮುಖ್ಯಸ್ಥರುಗಳು ಕೂಡ ಪ್ರಧಾನ ಪಾತ್ರ ವಹಿಸುತ್ತಿರುವುದು ವಿಷಾದನೀಯವಷ್ಟೇ ಅಲ್ಲ, ಭವಿಷ್ಯದ ದೃಷ್ಟಿಯಿಂದ ಅತ್ಯಂತ ದುರಂತಮಯ.

ಬೆಂಗಳೂರು **ಜಿ. ಕೆ. ಗೋವಿಂದರಾವ್**

*(ಮಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಿಗೆ ೧೫-೦೭-೨೦೦೯ರಂದು ಬರೆದ ಬಹಿರಂಗ ಪತ್ರ. ಇದು ಈಗಾಗಲೇ ಬೇರೆಡೆ ಪ್ರಕಟವಾಗಿದೆ. ಚರ್ಚೆ ಮುಂದುವರಿಯಲೆಂದು ಮತ್ತೆ ಪ್ರಕಟಿಸಲಾಗಿದೆ.)*

– ಸಂಪಾದಕ

**ಆಗಸ್ಟ್ ಸಂಚಿಕೆ**

ಭಾರತದ ಯಾವುದೇ ಪತ್ರಿಕೆ ಹೊರತಂದಿಲ್ಲದಷ್ಟು ಸುಂದರ ಗ್ರಹಣದ ಮುಖಪುಟವನ್ನು ನಮ್ಮ 'ಹೊಸತು' ಆಗಸ್ಟ್ ೨೦೦೯ರ ಸಂಚಿಕೆಯಲ್ಲಿ ಹೊರತಂದಿದೆ. ಇದಕ್ಕಾಗಿ ನನ್ನ ಅಭಿನಂದನೆಗಳು. ಗಂಗೂಬಾಯಿಯವರ ಚಿತ್ರವನ್ನು ಮುಖಪುಟಕ್ಕೆ ಸೇರಿಸಿ ಸುಂದರ ವಿನ್ಯಾಸ ಮಾಡಿದವರೂ ಅಭಿನಂದನಾರ್ಹರು.

ರಾಷ್ಟ್ರದ ಶಿಕ್ಷಣದ ಬಗ್ಗೆ ಸಂಪಾದಕೀಯ ಗಮನಾರ್ಹ. ಭಾರತದ ಸಂವಿಧಾನದಲ್ಲಿ ಎಲ್ಲರಿಗೂ ಉಚಿತ, ಕಡ್ಡಾಯ ಶಿಕ್ಷಣ ನೀಡಬೇಕೆಂಬ ಉಲ್ಲೇಖ ವಿದ್ದರೂ ಅದನ್ನು ಪಾಲಿಸುವಲ್ಲಿ ನಮ್ಮ ಸರ್ಕಾರಗಳು ಯಾವ ಪ್ರಯತ್ನವನ್ನೂ ನಡೆಸದಿರುವುದು ಶೋಚನೀಯ. ಶಿಕ್ಷಣವನ್ನೇ 'ಧಂಧೆ'ಯನ್ನಾಗಿ ಮಾಡಿಕೊಂಡ, ರಾಜಕಾರಣಿಗಳೇ ನಡೆಸುತ್ತಿರುವ, ವಿದ್ಯಾಸಂಸ್ಥೆಗಳು ಉಚಿತ ಶಿಕ್ಷಣ ನೀಡಲು ಸಾಧ್ಯವೇ? ಎಚ್. ಎಸ್. ದೊರೆಸ್ವಾಮಿಯವರ ಲೇಖನ ಗಾಂಧೀಜಿಯ 'ಹಿಂದ್ ಸ್ವರಾಜ್'ನ ಪ್ರಸ್ತುತತೆ ಬಗ್ಗೆ ''ನಮ್ಮ ನಿಜವಾದ ವೈರಿ ಬ್ರಿಟಿಷರಲ್ಲ, ಭೌತಿಕ ಸಂಪತ್ತು ಮತ್ತು ಸೌಲಭ್ಯಗಳು ನಮಗೆ ಹೆಚ್ಚಿನ ಸುಖ ನೀಡಬಲ್ಲವು ಎಂಬ ವಿಚಾರವೇ ನಮ್ಮ ನಿಜವಾದ ಶತ್ರು'' ಎನ್ನುವುದು ಎಂತಹ ಚಿನ್ನದಂತಹ ಮಾತು! ಕಿರಿಯ ಕಲಾವಿದೆ 'ಸ್ವಾತಿ'ಯ ಪರಿಚಯ ಸ್ವಾಗತಾರ್ಹ. ಮುಂದೊಂದು ದಿನ ಈಕೆ ಭಾರತದ ಹೆಮ್ಮೆಯ ಕಲಾವಿದೆಯಾಗಿ ಹೊರಹೊಮ್ಮಲಿ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಮ. ಶ್ರೀ. ಮುರಳಿಕೃಷ್ಣ ಅವರ ಭಾರತದ 'ಎಡರಂಗ ಪ್ರಾಮಾಣಿಕ ಆತ್ಮಾವಲೋಕನಕ್ಕೆ ಸಕಾಲ' ಲೇಖನವು ಎಡ ಮತ್ತು ಪ್ರಜಾಸತ್ತಾತ್ಮಕ ಚಳುವಳಿಗಳಲ್ಲಿ ನಂಬಿಕೆ ಇಟ್ಟವರಿಗೆ ಬಲವಾದ ಏಟಿನಂತೆ ಬಿಸಿ ಮುಟ್ಟಿಸುತ್ತದೆ. ಎಡರಂಗದ ಮುಂಚೂಣಿ ನಾಯಕರು ಅಂತಾರಾಷ್ಟ್ರೀಯ ವಿದ್ಯಮಾನಗಳ ಹಿನ್ನೆಲೆಯಲ್ಲಿ ದೇಶೀಯ ಸಮಸ್ಯೆಗಳನ್ನು ಅರ್ಥೈಸುವಲ್ಲಿ ಸೋತಿರುವುದು ಸ್ಪಷ್ಟ. ಎಡಪಕ್ಷಗಳ ಸರ್ಕಾರವು ಪಶ್ಚಿಮ ಬಂಗಾಳದಲ್ಲಿ ಸತತವಾಗಿ ಅಧಿಕಾರದ ಸ್ಥಾನದಲ್ಲಿದ್ದರೂ ''ನಂದಿಗ್ರಾಮ ವಿವಾದ''ವನ್ನು ಬಗೆಹರಿಸುವ ದಿಸೆಯಲ್ಲಿ ರಾಜ್ಯಸರ್ಕಾರವು ತನ್ನ ಸಿದ್ಧಾಂತದ ಆಧಾರ ಸ್ತಂಭವಾದ ರೈತರು, ಕೂಲಿ ಕಾರ್ಮಿಕರು ಮತ್ತು ಬಡಜನರ ನೋವಿಗೆ ಸ್ಪಂದಿಸದಿದ್ದುದು ಸರಿಯಲ್ಲ.

ಬೆಂಗಳೂರು **ವೀರೇಶ್ ಬಳ್ಳಾರಿ**




**ಬಿಸ್ಮಿಲ್ಲಾ ಖಾನ್ ಮತ್ತು ಗಂಗೂಬಾಯಿ ಹಾನಗಲ್**
**೧೯೯೩**
**ಚಿತ್ರ : ಸಾಗ್ಗೆರೆ ರಾಮಸ್ವಾಮಿ**

# ಶೃಂಗಾರ - ಕರುಣ - ರಸಾಭಿಜ್ಞ

# ಕೆರೆಮನೆ ಶಂಭು ಹೆಗಡೆ



**ಕೆ**ರೆಮನೆ ಎಂಬ ಯಕ್ಷ ಹೂದೋಟದಲ್ಲಿ ಅರಳಿದ ದಿವ್ಯಪುಷ್ಪ ದಿ। ಕೆರೆಮನೆ ಶಂಭು ಹೆಗಡೆಯವರು. ಅವರಷ್ಟೇ ಎತ್ತರಕ್ಕೆ ನಿಲ್ಲಬಲ್ಲಂತಹ ಅಥವಾ ನಿಂತ ಇನ್ನೊಂದು ಪುಷ್ಪರತ್ನ ಅವರ ಅನುಜ ಅಪ್ರತಿಮ ಸ್ತ್ರೀವೇಷಧಾರಿ ದಿ। ಗಜಾನನ ಹೆಗಡೆಯವರು. 'ಯಕ್ಷಗಾನಕ್ಕೊಬ್ಬನೇ ಮಹಾಬಲ' ಎಂಬ ಖ್ಯಾತಿಯ ಹಿರಿಯ ಕಲಾವಿದ ಕೆರೆಮನೆ ಮಹಾಬಲ ಹೆಗಡೆಯವರನ್ನೊಡಗೂಡಿ ಸಾಲಿಗ್ರಾಮ ಮತ್ತು ತಮ್ಮದೇ ಆದ ಇಡಗುಂಜಿ ಮೇಳದಲ್ಲಿ ಕಲಾಕ್ರಾಂತಿಯನ್ನೇ ಎಸಗಿದ ಪ್ರಗಲ್ಭ ಕಲಾವಿದರಿವರು. ಇವರೆಲ್ಲರಿಗೂ ಗುರುವಾಗಿದ್ದ ಮಹಾನ್ ಕಲಾವಿದ ಕೆರೆಮನೆ ಶಿವರಾಮ ಹೆಗಡೆಯವರ ಕಲಾಗರಡಿಯಲ್ಲಿ ಬೆಳೆದು, ಯಕ್ಷಗಾನವೆಂಬ ಬಯಲು ವಿಶ್ವವಿದ್ಯಾಲಯದಲ್ಲಿ ಕಲೋಪಾಸನೆಗೈದು ತಂದೆಗೆ ತಕ್ಕ ಮಗ ಎಂದೆನಿಸಿಕೊಂಡವರು ಕೆರೆಮನೆ ಶಂಭು ಹೆಗಡೆಯವರು. ೧೯೭೦ರ ದಶಕದ ಆದಿಭಾಗ. ನಮ್ಮ ಬಡಗುತಿಟ್ಟಿನ ಪ್ರಸಿದ್ಧ ಕಲಾವಿದರಲ್ಲಿ ಕೆಲವರು ನಿವೃತ್ತರಾಗಿ ಮಿಕ್ಕುಳಿದವರು ನಿಶ್ಶಕ್ತರಾಗಿ ಕಾಲ್ಗೆಜ್ಜೆ ಕಳಚಿಡಲು ಹವಣಿಸುತ್ತಿರುವಾಗ ಅನೇಕ ಯಕ್ಷಗಾನ ಕಲಾಭಿಮಾನಿಗಳು ರಂಗಮಂಚದಿಂದ ವಿಮುಖರಾದರು. ಅವರನ್ನು ರಂಗಭೂಮಿಯೆಡೆಗೆ ಪುನರಪಿ ಧಾವಿಸುವಂತೆಸಗಿದ ಧೀಮಂತ ಕಲಾವಿದತ್ರಯರು ಕೆರೆಮನೆ ಬಂಧುಗಳು. ಬಡಗುತಿಟ್ಟಿನ ಯಕ್ಷಗಾನವೆಂದರೆ ಮೂಗುಮುರಿಯುತ್ತಿದ್ದವರು, ಸಾಲಿಗ್ರಾಮ ಮೇಳದವರು ಡೇರೆಹೊಡೆದಲ್ಲೆಲ್ಲಾ ಹೋಗುವಂತೆಸಗಿದ ಮಾಂತ್ರಿಕರು ಕೆರೆಮನೆ ಬಂಧುಗಳು. ಸಾಲಿಗ್ರಾಮ ಮೇಳದಲ್ಲಿ ರಂಗಸ್ಥಳದ ರಾಜರಾಣಿಯರೆಂದೆನಿಸಿದ ಕೆರೆಮನೆ ಮಹಾಬಲ ಹೆಗಡೆ ಮತ್ತು ಗಜಾನನ ಹೆಗಡೆಯವರನ್ನು ಅನಂತರ ಸೇರಿಕೊಂಡವರು ಶಂಭು ಹೆಗಡೆಯವರು.

ಯಾವುದೋ ಕಾರ್ಯನಿಮಿತ್ತವಾಗಿ ಮಂಗಳೂರಿಗೆ ಹೋದವನು ಉಪಾಹಾರಗೃಹದಲ್ಲಿ ಮಧ್ಯಾಹ್ನದ ಊಟ ಸ್ವೀಕರಿಸುತ್ತಿರುವಾಗ ಹತ್ತಿರದಲ್ಲಿದ್ದ ಮಹನೀಯರಿಬ್ಬರು ಸಾಲಿಗ್ರಾಮ ಮೇಳದ ಯಕ್ಷಗಾನ ಪ್ರದರ್ಶನದ ಬಗ್ಗೆ ಮಾತನಾಡುತ್ತಿದ್ದರು. 'ದುಷ್ಟಬುದ್ಧಿ (ಮಹಾಬಲ ಹೆಗಡೆ) ರಂಗಸ್ಥಳಕ್ಕೆ ಬಂದಾಗ ದುಷ್ಟಬುದ್ಧಿಯ ಅಪ್ಪ ಬಂದ ಹಾಗೆ ಆಗುತ್ತದೆ' ಎಂದು ಒಬ್ಬರ ಉದ್ಗಾರ. ಸಣ್ಣವನಿರುವಾಗಲೇ ಯಕ್ಷಗಾನದ ಬಗ್ಗೆ ಆಸಕ್ತಿ ಇದ್ದವನು ನಾನು ಆಟ ನೋಡಬೇಕೆಂದು ಸಂಕಲ್ಪಿಸಿದೆ. ನಮ್ಮೂರಿಗೆ ಹತ್ತಿರದ ಸ್ಥಳದಲ್ಲಿ ಸಾಲಿಗ್ರಾಮ ಮೇಳದವರು ಬೀಡುಬಿಟ್ಟಿದ್ದರು. ಪ್ರಸಂಗ, ಚಂದ್ರಹಾಸ ಚರಿತ್ರೆ - ಮಾಗಧವಧೆ. ಶಂಭು ಹೆಗಡೆಯವರನ್ನು ಆ ದಿನ ನೋಡಿದುದು ಮದನನ ವೇಷದಲ್ಲಿ. ಚೆಲ್ವು ಚೆಲ್ವಾಟದ ಅಪ್ರಬುದ್ಧ ಯುವಕ ಈ ಮದನ. ದುಂಡಗಿನ ಮುಖ, ಕೇದಗೆ ಮುಂದಲೆಯ ಸುಂದರ ವೇಷ. ಕಾರ್ಯ ವೈಖರಿಯ ಒಂದು ನಿದರ್ಶನ - ರಾಜ್ಯದಲ್ಲಿ ಬಾವಿಗಳನ್ನು ತೋಡುವುದು, ಆಮೇಲೆ ಒಂದೊಂದಾಗಿ ಅವುಗಳನ್ನು ಮುಚ್ಚುವುದು. ನಿರುದ್ಯೋಗ ನಿವಾರಣೆಯ ಒಂದು ಪರಿ. ತಂದೆ ದುಷ್ಟಬುದ್ಧಿ ಬರೆದ ಪತ್ರದಂತೆ ಚಂದ್ರಹಾಸನಿಗೆ ಅದ್ದೂರಿಯ ಸ್ವಾಗತವನ್ನಿತ್ತು, ಅದರಂತೆ ನಡೆಯುತ್ತಾನೆ ಮದನ. ಪ್ರಮಾದವನ್ನರಿತ ದುಷ್ಟಬುದ್ಧಿ ಪತ್ರವನ್ನು ಮಗನಿಂದ ಪುನರಪಿ ಓದಿಸಿ ಅದರಲ್ಲಿರುವ ಸರ್ವಥಾ ಹಿತಂ ಎಂಬ ಶಬ್ದವನ್ನು ಸರ್ವಥಾ + ಅಹಿತಂ = ಸರ್ವಥಾಹಿತಂ (ಸವರ್ಣ ದೀರ್ಘಸಂಧಿ) ಎಂದು ವಿವರಿಸಿ ಮದನನ ಸಂದು ಸಂದುಗಳನ್ನು ಗುದ್ದುವ ರೋಷವನ್ನು ಪ್ರದರ್ಶಿಸುತ್ತಾನೆ. 'ಅಪ್ಪಯ್ಯಾ ! ನಿಮ್ಮ ಸಂಧಿಯ ವಿವರಣೆಯೊಂದಿಗೆ ನನ್ನ ಸಂದುಸಂದುಗಳೆಲ್ಲಾ ಪುಡಿಯಾದುವಲ್ಲಾ' ಎಂದು ರೋದಿಸುತ್ತಾನೆ ಮದನ. ಹುಡುಗು ಬುದ್ಧಿಯ ಚಂದದ ಯುವಕ ಮದನನನ್ನು ಸೃಷ್ಟಿಸಿದುದು ಶಂಭು ಹೆಗಡೆಯವರ ಉತ್ತಮ ರಂಗ ಕೊಡುಗೆಯೆಂದರೆ ತಪ್ಪಾಗಲಾರದು.




ಸಾಲಿಗ್ರಾಮ ಮೇಳದ ಸಮಗ್ರ ಭೀಷ್ಮ ಪ್ರಸಂಗವು ಕುವೆಂಪು ಅವರು ಹೇಳಿದಂತೆ 'ಬೈಗಿನಿಂದ ಬೆಳಗಾಗುವವರೆಗೆ' ಕಲಾಭಿಮಾನಿಗಳನ್ನು ಕುಳಿತುಕೊಂಡಲ್ಲಿಂದ ಕದಲದಂತೆ ಮಾಡಿದ ಘಟನೆಯಾಗಿದೆ. ಬಡಗುತಿಟ್ಟಿನ ಖ್ಯಾತ ಪುರುಷವೇಷಧಾರಿ ಶಿರಿಯಾರ ಮಂಜುನಾಯಕರು ದೇವವ್ರತನಾಗಿ ಎರಡು ಮೂರು ಪದ್ಯಗಳ ಪ್ರಥಮ ಪದ ಪುಂಜಗಳನ್ನು, ಬಲಗೈಯನ್ನು ಮೇಲೆತ್ತಿ ತೋರ್ಬೆರಳನ್ನು ಕುಣಿಸುತ್ತ ಕಂಚಿನ ಕಂಠದಿಂದ ಎತ್ತುಗಡೆ ಮಾಡಿ ಮಳೆಗಾಲದ ಕೋಲ್ಮಿಂಚಿನಂತೆ ಭೀಷಣ ಪ್ರತಿಜ್ಞೆಯನ್ನು ಪೂರೈಸಿ ಗಂಭೀರ ವಾತಾವರಣವನ್ನುಂಟುಮಾಡುತ್ತಾರೆ. ಈ ಗಂಭೀರತೆ ಒಂದೆಡೆಯಾದರೆ, ಕಾಶೀರಾಜನ ಆಸ್ಥಾನವನ್ನು ಬಿರುಗಾಳಿಯಂತೆ ಪ್ರವೇಶಿಸಿದ ಗಂಗಾತರಳನು ಮುಂದೆ ಭೀಷ್ಮ ಅಂಬೆಯರ ಸಂವಾದ, ದುರಂತಗಳಿಗೆ ಕಾರಣೀಭೂತನಾಗುತ್ತಾನೆ. ಈ ಗಂಭೀರತೆ ಮತ್ತು ದುರಂತಗಳ ನಡುವೆ ಬರುವುದು ಸಾಲ್ವ ಅಂಬೆಯರ ಶೃಂಗಾರ ರಸಪೂರಿತ ಭೇಟಿ. ಸಾಲ್ವ ಅಂಬೆಯರಾಗಿ ಅನನ್ಯ ಕಲಾಪ್ರದರ್ಶನ ನೀಡಿದವರು ಕೆರೆಮನೆ ಶಂಭು ಹೆಗಡೆ ಮತ್ತು ಗಜಾನನ ಹೆಗಡೆಯವರು. ಹಿಂದೆ ಬಡಗುತಿಟ್ಟಿನಲ್ಲಿ ಈ ಸಾಲ್ವನದು ರಾಕ್ಷಸ ವೇಷ. ಆದರೆ ಕೆರೆಮನೆ ಶಂಭು ಹೆಗಡೆಯವರ ಸಾಲ್ವನದ್ದು ಸುಂದರ ಕೆಂಪು ಮುಂಡಾಸಿನ ವೇಷ. ಸುರದ್ರೂಪಿ ತರುಣಿ ಅಂಬೆ, ಸುಂದರ ಯುವಕ ಸಾಲ್ವನಲ್ಲಿ ಅನುರಕ್ತಳಾಗುವುದು ಸ್ವಾಭಾವಿಕವೆಂದು ಕಾಣುತ್ತದೆ. ಸೃಜನಶೀಲತೆಗೊಂದು ಉತ್ತಮ ಉದಾಹರಣೆ: ಯುದ್ಧದಲ್ಲಿ ಸೋತ ಸಾಲ್ವನನ್ನು ತಿರಸ್ಕರಿಸಿ ಅಂಬೆಯು ಭೀಷ್ಮನ ರಥವನ್ನೇರುತ್ತಾಳೆ. ಹಸ್ತಿನಾವತಿಯಲ್ಲಿ ಭೀಷ್ಮನಿಂದ ತಿರಸ್ಕೃತಳಾದ ಅಂಬೆಯು ಪುನಃ ಸೌಭ ದೇಶಾಧಿಪತಿಯೆಡೆಗೆ ನಡೆಯುತ್ತಾಳೆ. ಅಂಬೆಯನ್ನು ಕಂಡ ಸಾಲ್ವನು ಚೇಳುಕುಟುಕಿದಂತೆ ವರ್ತಿಸುವುದು ಒಂದು ಉತ್ತಮ ರಸಗವಳ. ಇಲ್ಲಿ ನಾನು ಕಲಿತ ಕೊರಿಯೋಗ್ರಫಿ ಜ್ಞಾನವನ್ನು ಶಂಭು ಹೆಗಡೆಯವರು ಸರಿಯಾಗಿ ವಿನಿಯೋಗಿಸಿಕೊಂಡಿದ್ದಾರೆಂದು ಕಾಣುತ್ತದೆ.

ಸುಭದ್ರಾ ಕಲ್ಯಾಣದ ಶ್ರೀಕೃಷ್ಣನ ವೇಷವು ಶಂಭು ಹೆಗಡೆಯವರಿಗೆ ಕೀರ್ತಿಯನ್ನು ತಂದುಕೊಟ್ಟಿದೆ. ಕವಿ

ಸನ್ಯಾಸಿಯಾಗಿ ಉದ್ಯಾನದಲ್ಲಿರುವ ಅರ್ಜುನನನ್ನು ನೆನೆದು ತನ್ನಷ್ಟಕ್ಕೆ ನೆಗಾಡುತ್ತಾ ಇರುವ ಶ್ರೀಕೃಷ್ಣನು ಅಣ್ಣ ಬಲರಾಮನ ಮುಗ್ಧತೆಯನ್ನು ಕಂಡು ಒಂದೆಡೆ ಕನಿಕರ ಪಟ್ಟರೆ ಮಗದೊಂದೆಡೆ ಬಲರಾಮನ (ಮಹಾಬಲ ಹೆಗಡೆ) ಮುಂದೆ ಭಯಭಕ್ತಿಗಳನ್ನು ಪ್ರದರ್ಶಿಸುತ್ತಾ ಕಪಟನಾಟಕ ಸೂತ್ರಧಾರಿ ಎಂಬುದನ್ನು ಶ್ರುತ ಪಡಿಸುವ ಶಂಭು ಹೆಗಡೆಯವರ ಕಲಾ ಪ್ರೌಢಿಮೆ ಸ್ತುತ್ಯರ್ಹವಾದುದು. ಈ ಮೂರು ವೇಷಗಳು ಸಾಲಿಗ್ರಾಮ ಮೇಳದಲ್ಲಿ ಇರುವಾಗ ಅವರಿಗೆ ತಾರಾಪಟ್ಟವನ್ನು ನೀಡಿದುವು ಎಂದರೆ ಅತಿಶಯೋಕ್ತಿಯಾಗಲಾರದು.



ಮುಂದೆ ತನ್ನ ತಂದೆ ಶಿವರಾಮ ಹೆಗಡೆಯವರು ಪ್ರಾರಂಭಿಸಿದ ಇಡಗುಂಜಿ ಮೇಳವನ್ನು ವಾಣಿಜ್ಯೀಕರಣಗೊಳಿಸಿ ಅರ್ಧ ಚಂದ್ರಾಕೃತಿಯ ರಂಗಮಂಟಪವನ್ನು ಬೆಳಕಿಗೆ ತಂದು ಕಲೋಪಾಸನೆಗೈದುದು ಒಂದು ಇತಿಹಾಸ. ಶಂಭು ಹೆಗಡೆಯವರು ಸಾಲಿಗ್ರಾಮ ಮೇಳದಲ್ಲಿ ತಾನು ನಿರ್ವಹಿಸಿದ ಅನೇಕ ಪೌರಾಣಿಕ ವ್ಯಕ್ತಿಗಳ ಚಿತ್ರಣವನ್ನು ರಂಗದಲ್ಲಿ ಕೈಗೊಂಡು ಕೃತ್ಯಕೃತ್ಯರಾದರು. ಡೇರೆ ಮೇಳವಾಗಿ ಪರಿವರ್ತನೆಗೊಂಡ ಇಡಗುಂಜಿ ಮೇಳದ ಪ್ರಾರಂಭದ ಎರಡು ಮೂರು ವರ್ಷಗಳಲ್ಲಿ ಕೆರೆಮನೆ ಮಹಾಬಲ ಹೆಗಡೆ, ಗಜಾನನ ಹೆಗಡೆ, ಮೂರೂರು ದೇವರು ಹೆಗಡೆ, ವಿಕ್ಟರ್ ಜೋಶಿ ಮುಂತಾದ ಘಟಾನುಘಟಿಗಳಿದ್ದು ಅದು ಗಜಮೇಳವಾಗಿತ್ತು. ಇಡಗುಂಜಿಮೇಳದಲ್ಲಿ ತಾಳ ಮದ್ದಳೆ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿದ್ದ ಶ್ರೀಕೃಷ್ಣ ಸಂಧಾನ ಪ್ರಸಂಗವನ್ನು ರಂಗಕ್ಕೆ ತಂದು ಭೇಷ್ ಎನಿಸಿದವರು ಕೆರೆಮನೆ ಶಂಭು ಹೆಗಡೆಯವರು. ಕೌರವನಿಗೆ ಎತ್ತರದ ಸಿಂಹಾಸನವನ್ನು ಸಿದ್ಧಪಡಿಸಿ, ನರ್ತಕಿಯರಿಂದ ನರ್ತನವನ್ನು ಏರ್ಪಡಿಸಿ ಶ್ರೀಕೃಷ್ಣನನ್ನು ದಂಗುಬಡಿಸುವ ಕಾರ್ಯಕ್ರಮವದು. ಅಹಂಕಾರದ ಮುದ್ದೆಯಾದ ಕೌರವನನ್ನು ಸಿಂಹಾಸನದಿಂದ ಬೀಳುವಂತೆ ಮಾಡಿ 'ಏನಯ್ಯಾ! ಇಂಥಾದೇನಯ್ಯಾ' ಎಂಬ ಪದ್ಯದಲ್ಲಿ ನಮಸ್ಕರಿಸುವ ರೀತಿ ಇದು ಯಾವುದಯ್ಯಾ ಎಂದು ಭೇಡಿಸುವ ರಂಗಕ್ರಮ ಶ್ರೀಕೃಷ್ಣನಾಗಿ ಶಂಭು ಹೆಗಡೆಯವರಿಗೇ ಸಲ್ಲುವಂಥದ್ದು. ಧರ್ಮದ ಪ್ರವೃತ್ತಿ ಅಧರ್ಮದ ನಿವೃತ್ತಿ ಇಲ್ಲದ ಸಂಧಾನದ ಕೌರವನಾಗಿ ಮಹಾಬಲ ಹೆಗಡೆಯವರದ್ದು ಅದ್ವಿತೀಯ ರಂಗ ಕೊಡುಗೆ ಈ ಪ್ರಸಂಗದಲ್ಲಿ ಆಗಿತ್ತು.

ಮೇಳದ ಒಟ್ಟು ಆಗುಹೋಗುಗಳಲ್ಲಿ ಹೆಗಲಿಗೆ ಹೆಗಲು ಕೊಟ್ಟು ದುಡಿಯುತ್ತಿದ್ದ ಅವರ ತಮ್ಮ ಗಜಾನನ ಹೆಗಡೆಯವರು ಅನಾರೋಗ್ಯದ ನಿಮಿತ್ತ ಯುವಕರಾಗಿದ್ದಾಗಲೇ ಸುಮಾರು ೧೯೭೬-೭೭ರ ಹೊತ್ತಿಗೆ ಇಹಲೋಕವನ್ನು ತ್ಯಜಿಸಿದರು. ಇದು ಅವರಿಗೆ ಬಲವಾದ ಹೊಡೆತ ವಾಯಿತು. ಕಾರಣಾಂತರದಿಂದ ಅಣ್ಣ ಮಹಾಬಲ ಹೆಗಡೆಯವರು ಮೇಳದ ಖಾಯಂ ಪ್ರವಾಸದಿಂದ ಹಿಂಜರಿದರು. ಪ್ರಮುಖ ವೇಷಧಾರಿಯಾಗಿ ಮೇಳದ ಹೊರಗೊಳಗುಗಳ ಆಡಳಿತವನ್ನು ನಡೆಸುವ ಗುರುತರ ಹೊಣೆ ಅವರ ಹೆಗಲಿಗೆ ಬಂದಾಗ ಅವರೇ ಅಂದಂತೆ ಏಳೆಂಟು ಟನ್ ಭಾರವನ್ನು ಹೊರುವ ಲಾರಿಗೆ ಇಪ್ಪತ್ತು ಟನ್ ಭಾರವನ್ನು ಹೊರಿಸಿದಂತಾಯಿತು. ಆದರೂ ಛಲವನ್ನು ಬಿಡದೆ ಮೇಳವನ್ನು ಮುನ್ನಡೆಸಿಕೊಂಡುಹೋದರು.

ಕೀಚಕನನ್ನು ವಿಕಟಕಾಮಿಯನ್ನಾಗಿ ಸೃಷ್ಟಿಸುವುದು ಸಾಮಾನ್ಯ. ಪ್ರವೇಶದಲ್ಲಿಯೇ ವಿಕಟ ಅಟ್ಟಹಾಸ ಮಾಡಿ ತಕ್ಕುದಾದ ಕೆಲವು ನೃತ್ಯವಿಶೇಷಗಳನ್ನು ಕಲಾವಿದರು ಅಳವಡಿಸುವುದಿದೆ. 'ಎಲಗೆ! ಸೈರಂಧ್ರಿ ನಿಲ್' ಎಂಬ ಪದ್ಯದಲ್ಲಿ ಕೀಚಕನು ತನ್ನ ತೈನಾತಿಯೊಡಗೂಡಿ ಸೈರಂಧ್ರಿಯನ್ನು ಕೀಟಲೆಗೊಳಪಡಿಸುವುದಿದೆ. (ಇಲ್ಲಿ ಚಿಟ್ಟಾಣಿ ರಾಮಚಂದ್ರ ಹೆಗಡೆ ಮತ್ತು ದಿ। ಸಾಲ್ಕೋಡು ಗಣಪತಿ ಹೆಗಡೆಯವರ ರಂಗಕ್ರಮವನ್ನು ಗಮನದಲ್ಲಿರಿಸುವುದು). ಇನ್ನು ಕೆಲವರು ಕೀಚಕನನ್ನು ಭಿನ್ನರೀತಿಯಲ್ಲಿ ಸೃಷ್ಟಿಸುವುದಿದೆ. ಕೀಚಕನೊಬ್ಬ ವೀರ. ಆದುದರಿಂದಲೇ ಕೌರವರು ವಿರಾಟರಾಜ್ಯದ ಕಡೆಗೆ ತಮ್ಮ ಗಮನ ಹರಿಸಲಿಲ್ಲ. ದ್ರೌಪದಿ ಸ್ವಯಂವರ ಕಾಲದಲ್ಲಿ ಅವಳ ಸೌಂದರ್ಯವನ್ನು ಕಂಡು ಮನಸೋತವನೀತ. ನಂತರ ಅದೇ ಸೌಂದರ್ಯವನ್ನು ಸೈರಂಧ್ರಿಯಲ್ಲಿ ಕಂಡು ಮನೋವಿಕಾರಗೊಂಡವನು. ಪ್ರವೇಶದಲ್ಲಿ ಆತನೊಬ್ಬ ವೀರಾಗ್ರಣಿ ಎಂದು ಸೃಷ್ಟಿಸಿ, ಸೈರಂಧ್ರಿಯನ್ನು ಕಂಡನಂತರ ಕಾಮುಕನಾದ ಎಂಬ ರೀತಿಯಲ್ಲಿ ಕೆಲವು ಕಲಾವಿದರು ರಂಗದಲ್ಲಿ ತೋರಿಸುವುದಿದೆ. ಶಂಭು ಹೆಗಡೆಯವರ ಕೀಚಕ ಅತ್ತ ವಿಕಟಕಾಮಿಯೂ ಅಲ್ಲ, ಇತ್ತ ತೀರಾ 'ಸಾಚಾ'ನೂ ಅಲ್ಲ ಎಂಬ ರೀತಿಯವನು.

ಕೆರೆಮನೆ ಶಿವರಾಮ ಹೆಗಡೆಯವರನ್ನು ಗದಾಯುದ್ಧದ ಕೌರವನ ಮೂಲಕ ಪ್ರಮುಖವಾಗಿ ಗುರುತಿಸಿಕೊಳ್ಳುತ್ತಾರೆ. ಶಂಭು ಹೆಗಡೆಯವರು ತನ್ನದೇ ಛಾಪನ್ನು ಒತ್ತಿ ಯಕ್ಷಗಾನ ದಿಗಂತದಲ್ಲಿ ಮೂಡಿಸಿದ ಪಾತ್ರವೆಂದರೆ ಕಾರ್ತವೀರ್ಯಾರ್ಜುನನದ್ದು. ಆಟ ನೋಡಲು ನನ್ನ ಜೊತೆ ಕುಳಿತ ಹಿರಿಯ ಮಿತ್ರರೊಬ್ಬರು 'ಸಿಕ್ಕಿದೆಯೋ ದೈತ್ಯರಾಯ' ಎಂಬ ಸನ್ನಿವೇಶ






ಆಗಸ್ಟ್ ಎರಡರಂದು ನವಕರ್ನಾಟಕದ ಐದು ಆಂಗ್ಲ ಪುಸ್ತಕಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಕರ್ನಾಟಕ ಮಾಹಿತಿ ಆಯೋಗದ ಆಯುಕ್ತರಾದ ಶ್ರೀ ಕೆ. ಎ. ತಿಪ್ಪೇಸ್ವಾಮಿ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಹಾಗೂ ಕೃತಿಗಳ ಅನಾವರಣ ಮಾಡಿದರು. ಬಲಭಾಗದ ಚಿತ್ರದಲ್ಲಿರುವವರು (ಎಡದಿಂದ ಬಲಕ್ಕೆ) ಡಾ|| ಎನ್. ಎಸ್. ಲೀಲಾ, ಡಾ|| ವಸುಂಧರಾ ಭೂಪತಿ, ಡಾ|| ಎಂ. ವಸುಂಧರ, ಶ್ರೀ ಕೆ. ಎ. ತಿಪ್ಪೇಸ್ವಾಮಿ, ಶ್ರೀ ವೈ. ಜಿ. ಮುರಳೀಧರ ಮತ್ತು ಶ್ರೀ ಆರ್. ಎಸ್. ರಾಜಾರಾಮ್

ಬಂದಾಗ ಒಳಗೆ ಬಂದರಾಯಿತು ಎಂದು ಹೊರಹೋಗಲು ಹವಣಿಸಿದ ಸಂದರ್ಭ. ಕಾರ್ತವೀರ್ಯಾರ್ಜುನನು, ಈ ದಿನದ ಜಲಕ್ರೀಡೆಯು ನವೀನ ರೀತಿಯದ್ದು, ಹಿಂದಿನಂತಲ್ಲ ಎಂದು ಜೊತೆಗಿದ್ದ ಲಲನೆಯರನ್ನು ಉದ್ದೇಶಿಸಿ ಹೇಳಿದ ಮಾತು. ಅದು ನೆರೆದ ಪ್ರೇಕ್ಷಕರಿಗೂ ಅನ್ವಯಿಸುವಂಥದ್ದು. ಎದ್ದು ನಿಂತ ನನ್ನ ಮಿತ್ರರು ಕುಳಿತುಕೊಂಡರು. ನೆಬ್ಬೂರರ ಭಾಗವತಿಕೆಯಲ್ಲಿ ಸುರಿದ ಗಾನಲಹರಿಯಲ್ಲಿ ಮಯೂರ ಲಾಸ್ಯದ ನೃತ್ಯ ವಿಶೇಷ ಕಾರ್ತವೀರ್ಯಾರ್ಜುನನದ್ದು ಆಗಿತ್ತು. ಪ್ರಕೃತಿಯ ಸೌಂದರ್ಯವನ್ನು ತನ್ನ ಅಂತಃಪುರದ ಸ್ತ್ರೀಯರೊಡನೆ ನೃತ್ಯ ಮುಖೇನ ಆಸ್ವಾದಿಸುವ ರೀತಿ ಹೃನ್ಮನಗಳನ್ನು ತಲುಪುವಂಥಾದ್ದು. ನಂತರ ಇತರ ಕಲಾವಿದರು ಅದನ್ನು ಅನುಕರಿಸಿದರೂ ರಂಗದಲ್ಲಿ ಜಲಕ್ರೀಡೆಯ ಪಟುವಾಗಿ ಕಾರ್ತವೀರ್ಯಾರ್ಜುನನನ್ನು ನಿರ್ಮಿಸಿದ ಕೀರ್ತಿ ಶಂಭು ಹೆಗಡೆಯವರಿಗೆ ಸಲ್ಲಬೇಕು.

ಗದಾಯುದ್ಧದಲ್ಲಿ 'ಕುರುರಾಯನಿದನೆಲ್ಲ ಕಂಡು...' ಎಂಬ ಪದ್ಯಕ್ಕೆ ಎಲ್ಲಾ ಕಲಾವಿದರು ತಮ್ಮ ಶಕ್ತ್ಯನುಸಾರ ರಂಗಕ್ರಿಯೆಯನ್ನು ನಡೆಸುವುದು ಸ್ವಾಭಾವಿಕ. ತನ್ನ ತಮ್ಮನ ಅಕಾಲಮೃತ್ಯುವಿನ ದೆಸೆಯಿಂದ, ಇದೇ ಕಾರಣದಿಂದ ಧೃತಿಗೆಟ್ಟ ಮನೆ ಮಂದಿಯ ಒತ್ತಾಯಕ್ಕೆ ಮಣಿದು ಮಹಾಬಲ ಹೆಗಡೆಯವರು ರಂಗಸನ್ಯಾಸ ಕೈಗೊಂಡಾಗ ಕೌರವನಾಗಿ ಈ ಸನ್ನಿವೇಶದಲ್ಲಿ ಅಭಿನಯಿಸುವಾಗ ಶಂಭು ಹೆಗಡೆಯವರು ಭಾವಪರವಶರಾಗುತ್ತಿದ್ದರೆಂದು ಆ ಸಮಯದಲ್ಲಿ ಪ್ರದರ್ಶನ ನೋಡಿದ ಅನೇಕರ ಅಭಿಪ್ರಾಯ. ಶಿವರಾಮ ಹೆಗಡೆಯವರ ಕೌರವನ ಮಟ್ಟಕ್ಕೆ ಏರುವುದು ಸುಲಭದ ಮಾತಲ್ಲ ಎಂದು ಹಿರಿಯ ಮಿತ್ರರ ಹೇಳಿಕೆ. ೧೯೬೦ರ ದಶಕದಲ್ಲಿ ಉಡುಪಿಯ ವರದೇಂದ್ರ ಕಲಾಮಂದಿರದಲ್ಲಿ ಇಡಗುಂಜಿ ಮಂಡಳಿಯ ಪ್ರದರ್ಶನ. ವೈಶಂಪಾಯನ ಸರೋವರದಿಂದ ಸಿಟ್ಟಿನಿಂದ ಎದ್ದು ಬಂದ ಕೌರವನಾಗಿ ಶಿವರಾಮ ಹೆಗಡೆಯವರ ನಟನೆ ಅಮೋಘವಾದುದು. 'ಚಕ್ಷುರ್ಭ್ಯಾಂ ದರ್ಶಯೇತ್ ಭಾವಂ' ಎಂಬಂತೆ ಬೆಂಕಿ ಉಗುಳುವ ಕೌರವನ ಕಣ್ಣುಗಳ ಚಲನೆ ಅದ್ಭುತವಾದದು ಎಂದವರ ಅಭಿಪ್ರಾಯ. ಕೌರವನ ಚಿತ್ರಣದಲ್ಲಿ ಶಂಭು ಹೆಗಡೆಯವರು ಸಾಕಷ್ಟು ಸಫಲರಾಗಿದ್ದಾರೆ. ಭೀಮ ಬಿದ್ದಾಗ ಗ್ರಾಮ ಜಟ್ಟಿಯ ಮಟ್ಟಕ್ಕೆ ಛಲದಂಕಮಲ್ಲ ಕೌರವನು ಇಳಿಯಲಿಲ್ಲವೆಂಬುದು ಸಮಾಧಾನಕರ ಅಂಶ.

ಯಕ್ಷಗಾನ ರಂಗಮಂಚದ ಏಳು-ಬೀಳು, ಕಷ್ಟನಷ್ಟಗಳು, ಸೊಗಸು ಸೊಗಡುಗಳಿಂದ ಮಾಗಿದ ಶಂಭು ಹೆಗಡೆಯವರು ನಂತರ ಕರುಣರಸಪ್ರಧಾನ ಪಾತ್ರಗಳತ್ತ ತಮ್ಮ ಗಮನವನ್ನು ಹರಿಸುತ್ತಾರೆ. ಪರಿಣಾಮವಾಗಿ ಕವಿ ರಾಘವಾಂಕನ ಸತ್ಯ ಹರಿಶ್ಚಂದ್ರನು ಹೆಗಡೆಯವರ ಕಲಾಕುಂಚದಿಂದ ರಂಗದಲ್ಲಿ ಆವಿರ್ಭವಿಸುತ್ತಾನೆ. ಮಹಾಬಲ ಹೆಗಡೆಯವರು ಹರಿಶ್ಚಂದ್ರನ ಪಾತ್ರ ನಿರ್ವಹಣೆಯಲ್ಲಿ ಎತ್ತಿದ ಕೈ. ಆದರೂ ಶಂಭು ಹೆಗಡೆಯವರು ಅವರಿಗೆ ಸರಿಮಿಗಿಲಾಗಿ ಪಾತ್ರ ನಿರ್ವಹಣೆ ಮಾಡುತ್ತಿದ್ದರೆಂದು ಅನೇಕ ಕಲಾಭಿಮಾನಿಗಳ ಅಭಿಪ್ರಾಯ. ಹರಿಶ್ಚಂದ್ರನ ಸಾಧನೆಯಲ್ಲಿ ಅತ್ಯಂತ ಮುಖ್ಯವಾದುದು ಸ್ಮಶಾನ ಪರ್ವ. ಪ್ರಿಯಪುತ್ರ ಲೋಹಿತಾಶ್ವನ ಶವವನ್ನು ಕಂಡು ಮಮ್ಮಲ ಮರುಗುತ್ತಾನೆ. ತನ್ನನ್ನು ತಾನು ಶಪಿಸಿಕೊಳ್ಳುತ್ತಾನೆ. ಆದರೂ ಕರ್ತವ್ಯದ ಹಾದಿ ಸ್ಪಷ್ಟವಾಗಿ ಅವನಿಗೆ ಕಾಣಿಸುತ್ತದೆ. ವರಪುತ್ರನು ಮಡಿದರೇನಾಯಿತು ? ಮಡದಿಯ ಶಿರಚ್ಛೇದ ಮಾಡಿದರೇನಾಯಿತು ? ಸತ್ಯವನ್ನು ಬಿಟ್ಟಿಲ್ಲವೆಂದು ಲೋಕ ನುಡಿದರೆ ಸಾಕೆಂದು ತನ್ನ ಕರ್ತವ್ಯವನ್ನು ಕೈಗೊಳ್ಳಲು ಮುಂದಾಗುತ್ತಾನೆ. ಕರುಣ ರಸಪ್ರತಿಪಾದನೆಯಲ್ಲಿ ಹರಿಶ್ಚಂದ್ರನಾಗಿ ಹೆಗಡೆಯವರು ಯಶಸ್ಸನ್ನು ಗಳಿಸಿದ್ದಾರೆ.

ಶಂಭು ಹೆಗಡೆಯವರ ಇನ್ನೊಂದು ಹೆಸರುವಾಸಿ ಪಾತ್ರ ರಾಮ ನಿರ್ಯಾಣದ ರಾಮ. ಕಲಾವಿದ ಗೋಡೆ ನಾರಾಯಣ ಹೆಗಡೆಯವರಂದಂತೆ ಸಾಯಲು ಹೊರಟ ಲಕ್ಷ್ಮಣನನ್ನು ನೋಡಿ ರಾಮ 'ಒಮ್ಮೆ ತಿರುಗಿ ನೋಡಬಾರದೇ ತಮ್ಮ' ಎನ್ನುವ ಮಾತಿಗೆ ಇಡೀ ಸಭಾಂಗಣವೇ ಭಾವಾವೇಶಕ್ಕೆ ಒಳಗಾಗುತ್ತದೆ. ಇಡಗುಂಜಿಯಲ್ಲಿ ದಿನಾಂಕ ೩-೨-೨೦೦೯ರಂದು ಸೀತಾ ವಿಯೋಗದ ರಾಮನಾಗಿ ರಂಗಕಾಯಕ ನೆರವೇರಿಸುತ್ತಿದ್ದಾಗ ಇಹಲೋಕ ತ್ಯಜಿಸಿದ ಶಂಭು ಹೆಗಡೆಯವರು, ಅಂಬೆಯಾಗಿ ರಂಗದಲ್ಲಿ ಬಿರುಗಾಳಿ ಎಬ್ಬಿಸಿದ, ಸ್ತ್ರೀವೇಷಧಾರಿಯಾದರೂ ತಂದೆಯವರ ಗದಾಯುದ್ಧದ ಕೌರವನೆದುರು ಭೀಮನಾಗಿ ಗುಡುಗಿದ ನೆಚ್ಚಿನ ತಮ್ಮನನ್ನು ಅರಸುತ್ತಾ ಹೊರಟರೇನು ? ೧೯೮೨ರ ಘಟನೆ ನೆನಪಾಗುತ್ತಿದೆ. ಖ್ಯಾತ ಕಲಾವಿದ ಶಿರಿಯಾರ ಮಂಜುನಾಯಕರು ಮಣಿಪಾಲದ ಗೋಲ್ಡನ್ ಜುಬಿಲಿ ಹಾಲ್‌ನಲ್ಲಿ ಭೀಷ್ಮವಿಜಯದ ಪರಶುರಾಮನಾಗಿ ವೇಷದಲ್ಲಿರುವಾಗಲೇ ಬಣ್ಣದ ಬದುಕಿಗೆ ವಿದಾಯ ಹೇಳಿದರು. ಮಂಜು ನಾಯಕರು ಕುಸಿದುಬಿದ್ದರು ಪರಶುರಾಮನಾಗಿ; ಶಂಭು ಹೆಗಡೆಯವರು ಪ್ರಾಣತ್ಯಾಗ ಮಾಡಿದರು ಅಯೋಧ್ಯಾರಾಮನಾಗಿ. ಎಂತಹ ವಿಧಿ ವಿಲಾಸ! ಕಾಯಕವೇ ಕೈಲಾಸ. ವೇಷದಲ್ಲಿರುವಾಗ ಮಂಜುನಾಯಕರ ಕಂಚಿನಕಂಠ ಮೊಳಗಿತ್ತು – 'ಅಳಿವುದೇ ಕಾಯ, ಉಳಿವುದೇ ಕೀರ್ತಿ.' ಹೌದು, ಒತ್ತರಿಸಿ ಬಂದ ಕಣ್ಣೀರು ಆರುತ್ತದೆ, ಕೀರ್ತಿ ಆಚಂದ್ರಾರ್ಕವಾಗಿ ಉಳಿಯುತ್ತದೆ.

ಎ. ಜೆ. ಡಿ'ಸೋಜಾ
'ಸುಕೃತ್' (ಲಯನ್ಸ್ ಭವನದ ಹಿಂದೆ), ಬ್ರಹ್ಮಗಿರಿ, ಉಡುಪಿ - ೫೭೬ ೧೦೧.



# ಸಾರ್ಥಕತೆ



ಭಾವನೆಗಳು ಬೀಜಗಳಾಗಿ
ಮೊಳೆತು ಮರವಾದರೆ
ನೆಲವಾಗಿ, ಜಲವಾಗಿ ಗೊಬ್ಬರವಾಗಿ
ಅಬ್ಬರದಿಂದ ತಬ್ಬಿಕೊಂಡು
ಸಾರ್ಥಕಪಡುವೆ.

ನನ್ನ ಭಾವನೆಗಳು ದ್ವೇಷ
ಅಸೂಯೆಗಳನ್ನು ಅಳಿಸಿ
ಪ್ರೀತಿಯ ಪರಿಮಳ ಸೂಸಿ
ಬಾಳಸೌಧ ಕಟ್ಟುವದಾದರೆ
ಗಟ್ಟಿ ಇಟ್ಟಿಗೆಯಾಗಿ
ಸಾರ್ಥಕ ಪಡುವೆ

ಭಾವನೆಗಳು ತೇಜ
ನಕ್ಷತ್ರವಾಗಿ ನೆಗೆದು
ಬೆಳಕು ನೀಡುವುದಾದರೆ
ಬಯಲು ಬಾನಿನಲ್ಲಿ
ಬೆಳದಿಂಗಳಾಗಿ ಕಂಗಳ
ತುಂಬಿ ಸಾರ್ಥಕ ಪಡುವೆ.

ಭಾವನೆಗಳು ಶಬ್ದದಲ್ಲಿ
ನಿಶ್ಶಬ್ದವಾಗಿ ಅಬ್ಧಿಯಾಳದ
ಭಾವತರಂಗ
ಹೊರಡಿಸುವದಾದರೆ
ಕಬ್ಬಿಗನೆದೆಯ ಮುಗ್ಧ
ಕವನವಾಗಿ ಸಾರ್ಥಕ ಪಡುವೆ.

ಎಸ್. ಆರ್. ರಾವಳ
ಶ್ರೀ ಶಿವಾನಂದ ಆಶ್ರಮ ರಸ್ತೆ - ದೇವರಾಜ ನಗರ, ತೇರದಾಳ- ೫೮೭ ೩೧೫,
ತಾ: ಜಮಖಂಡಿ ಜಿ: ಬಾಗಲಕೋಟ



# ಸನ್ಮಾನ ಹೀಗೂ ಆದೀತಾ?

ಡಾ|| ರುದ್ರಯ್ಯ ವಿ. ಗದಗ

ನಂಬಿದರೆ ನಂಬಿ ಇಲ್ಲಾ ಬಿಡಿ. ಹೋದ ವರ್ಷ ಗದಗಿನ ಹೊಸ ಬಡಾವಣೆಯಲ್ಲಿ ಅಪರೂಪದ ಸನ್ಮಾನ ಸಮಾರಂಭವೊಂದು ಭಾರಿ ವಿಜೃಂಭಣೆಯಿಂದ ನಡೆಯಿತು. ಸನ್ಮಾನದ ಪರಿಮಳ ಕಸ್ತೂರಿಯಂತೆ ನಗರದೆಲ್ಲೆಡೆ ಪಸರಿಸಿ, ಇತರರಿಗೆ ಆಡಿಕೊಳ್ಳಲು ಗ್ರಾಸವಾಯಿತು. ಸನ್ಮಾನ ಮಾಡಿದರೆ ಹೀಗೆ ಮಾಡಬೇಕು ಅಂತ ಜನಾಭಿಪ್ರಾಯ. ಸನ್ಮಾನಿತರಾದವರಿಗಂತೂ ಸಂತೋಷವೇ ಸಂತೋಷ. ಅದೊಂದು ಅಮೇಝಿಂಗ್ ಎಕ್ಸ್‌ಪೀರಿಯನ್ಸ್. ಹಾಸ್ಯಾಸ್ಪದ ಸನ್ಮಾನ ಸಮಾರಂಭ ಅಂತ ಹಣೆಪಟ್ಟಿ ತಗಲಿಸಿಕೊಂಡಿದ್ದು ಸಮಿತಿಯವರ ಕರ್ಮ! ನಿಜ ಹೇಳಬೇಕೆಂದರೆ ಎಲ್ಲವೂ ಚಿತ್ರ ವಿಚಿತ್ರ. ಕೆಟ್ಟ ಸನ್ಮಾನ ಹೇಗೆ ಮಾಡೋದು ಎನ್ನುವುದಕ್ಕೆ ಇದೊಂದು ನಿದರ್ಶನ. ನನ್ನ ಮನಸ್ಸು ವರ್ಷದ ಹಿಂದಿನ ಆ ಸನ್ಮಾನಕ್ಕೆ ಹಾರಿತು. ಅದರ ಒಂದು ಸಮಗ್ರ ಹಿನ್ನೋಟವನ್ನು ಭಾರವಾದ ಹೃದಯದಿಂದ ಬಿಚ್ಚಿಟ್ಟಿದ್ದೇನೆ.

* * *

ಭಾನುವಾರ ಬೆಳಗ್ಗೆ ಹತ್ತರ ಸುಮಾರಿಗೆ ದೇವಸ್ಥಾನದಲ್ಲಿ ಸಭೆ ಸೇರಿತು. ''ಏನಾದರೊಂದು ಡಿಫರೆಂಟ್ ಆಗಿರುವ ಯೋಜನೆ ಹಮ್ಮಿಕೊಂಡು, ಸುಶಿಕ್ಷಿತ ಹಾಗೂ ಪ್ರಬುದ್ಧತೆಗಳಿಗೆ ಹೆಸರಾದ ಬಡಾವಣೆಯಲ್ಲಿ ಹೊಸ ಗಾಳಿ ಬೀಸುವಂತಾಗಬೇಕು'' ಎಂದು ನಾನು ಒಂದು ಐನಾತಿ ಐಡಿಯಾ ಬಿಸಾಕಿದೆ. ''ಅದೊಂದು ಒಳ್ಳೇ ಯೋಚನೆ'' ಎಂದು ಸದಸ್ಯರ ಪ್ರಶಂಸೆಗೆ ನನ್ನ ಐಡಿಯಾ ಪಾತ್ರವಾಯಿತು. ಪ್ರಖ್ಯಾತರಾದವರ ಸಾಲಿಗೆ ಸೇರಿದವರನ್ನು ಆಹ್ವಾನಿಸಿ, ಸೂಕ್ತ ಸನ್ಮಾನ ಮಾಡಬೇಕೆಂದು ಸಭೆಯ ಚೋಲ್ಸ್ ಗೊತ್ತುವಳಿ ಹೊರಹೊಮ್ಮಿತು.

ಈ ಗೊತ್ತುವಳಿ ಸದಸ್ಯರೆಲ್ಲರನ್ನೂ ಗೊಂದಲದ ಮಡುವಿಗೆ ತಳ್ಳಿತು. ಅವರಿಗೆ ಎದುರಾದ ಸಮಸ್ಯೆಯೆಂದರೆ ಪ್ರತಿಭಾವಂತರನ್ನು ಗುರುತಿಸುವ ಮಾನದಂಡ ಯಾವುದು? ಗೊತ್ತಾಗದೆ ಪರಿತಪಿಸಿದರು. ನಾನು ಅವರ ಸಹಾಯಕ್ಕೆ ನಿಂತೆ.

''ಜೀವಿತಾವಧಿಯಲ್ಲಿ ಮಹೋನ್ನತ ಸಾಧನೆ ಮಾಡಿದವರು, ರಾಷ್ಟ್ರ/ರಾಜ್ಯ ಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ ಹೊಂದಿದವರು, ಹಾಗೂ ಡಾಕ್ಟರೇಟ್ ಪದವಿ ಪುರಸ್ಕೃತರು ಸನ್ಮಾನಕ್ಕೆ ಪಾತ್ರರು'' ಎಂದು ಹೇಳಿ ಮೀಸೆ ಮೇಲೆ ಕೈಹಾಕಿದೆ. ನನ್ನ ಸೂತ್ರಕ್ಕೆ ಸದಸ್ಯರೆಲ್ಲರೂ ತಲೆದೂಗಿದರು. ನನ್ನ ಮೊಗದಲ್ಲಿ ಸಮಾಧಾನದ ಗೆರೆ. ಆದರೆ ಕೊಂಚ ಆರೋಗಂಟ್ ಆಗಿರುವ ಅಧ್ಯಕ್ಷರ ಮುಖದ ಮಂದಹಾಸ ಮಾಸಿ, ಅಲ್ಲಿ ಆತಂಕದ ಕಾರ್ಮೋಡಗಳು ಕವಿದಿದ್ದವು. ಹಾಗೇ ಸ್ವಲ್ಪ ಮುನಿಸಿಕೊಂಡಿದ್ದರು. ಅದರ ಸುಳಿವು ನನಗೆ ಹತ್ತಿದ ಕೂಡಲೇ,

''ಮುಂದಿನ ಭಾನುವಾರ ನಾವು ಇನ್ನೊಂದ್ಸಲ ಸಭೆ ಮಾಡಿ, ಸಂಪೂರ್ಣ ಕಾರ್ಯಕ್ರಮ ಹಾಕ್ಕೊಳ್ಳೋಣ ಬಿಡ್ರಿ'' ಎಂದು ಹೇಳಿ ಸಭೆಯನ್ನು ಬರಖಾಸ್ತು ಮಾಡಿದೆ.

ಭಾನುವಾರ ಮತ್ತೊಮ್ಮೆ ಸಭೆ ಸೇರಿತು. ಅಧ್ಯಕ್ಷರು ಜಿದ್ದಿಗೆ ಬಿದ್ದವರಂತೆ ನನ್ನ ಸೂತ್ರಕ್ಕೆ ತಮ್ಮ ಸ್ವಾರ್ಥ ಅಡಗಿರುವ ನಾಲ್ಕು ಆಪ್‌ಶನ್ಸ್ ಸೇರಿಸಿ ಸದಸ್ಯರ ತಲೆ ತಿಕ್ಕಿದ್ದರು. ಅವರ ದೃಷ್ಟಿಕೋನ ನನಗೆ ಸ್ಪಷ್ಟವಾಯಿತು. ಅವರು ಇತ್ತೀಚೆಗೆ ನಿವೃತ್ತಿ ಹೊಂದಿದ್ದರು. ಅವರ ಗೆಳೆಯರು ಸರ್ವಿಸ್‌ನಲ್ಲಿ ಬಡ್ತಿಹೊಂದಿದ್ದರು. ಅವರ ಅಂತಿಮ ಮಾನದಂಡ ಹೀಗಿತ್ತು:

* ಯಾವುದೇ ಕ್ಷೇತ್ರದಲ್ಲಿ ಮಹೋನ್ನತ ಸಾಧನೆ ಮಾಡಿದವರು. ರಾಷ್ಟ್ರ/ರಾಜ್ಯ ಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ ಹೊಂದಿದವರು. ಡಾಕ್ಟರೇಟ್ ಪದವಿ ಪುರಸ್ಕೃತರು.
* ಸರ್ವಿಸ್‌ನಲ್ಲಿ ಪದೋನ್ನತಿ ಪಡೆದವರು.
  (ಎರಡನೆ ದರ್ಜೆ ಸಹಾಯಕ – ಮೊದಲನೇ ದರ್ಜೆ ಸಹಾಯಕ ಕೆಲಸ)
* ನಿವೃತ್ತಿ ಹೊಂದಿದವರು.
  (ಚಪ್ರಾಸಿಯಿಂದ ಹಿಡಿದು ಉನ್ನತ ಅಧಿಕಾರಿಗಳು)
* ಹಿರಿಯ ನಾಗರಿಕರು
  (ಅರವತ್ತು ವರ್ಷ ಬಾಳಿ ಬದುಕಿದವರು)
* ಹಿಂದಿನ ಆಡಳಿತ ಮಂಡಳಿಯ ಸದಸ್ಯರು.

**ಅಧ್ಯಕ್ಷರ ಸನ್ಮಾನ ಸೂತ್ರ ಓದಿದ ನನಗೆ ಸಖೇದಾಶ್ಚರ್ಯ! ಮನಸ್ಸು ಘಾಸಿಗೊಂಡಿತು. ನಾನು ಸನ್ಮಾನದ ಪುಸ್ತಕ ಮಗುಚಿ ಹಾಕಿದರೂ ಈ ರೀತಿ ಸನ್ಮಾನ ಮಾಡುವ ಪುಟವೂ ಕಣ್ಣಿಗೆ ಬೀಳಲಿಲ್ಲ, ಹುಬ್ಬು ಮೇಲೇರುವಂತೆ ಮಾಡಿತು! ನನಗೆ ಹಾಗಲಕಾಯಿ ರಸಾನುಭವ. ನಿಜಕ್ಕೂ ನನ್ನ ಪಾಲಿಗದು ನುಂಗಲಾರದ, ಉಗುಳಲಾರದ ಬಿಸಿ ತುಪ್ಪ. ಅಧ್ಯಕ್ಷರು ಈ ರೀತಿ ಹಗೆ ಸಾಧಿಸುತ್ತಾರೆಂದು ನಾನು ಕನಸಲ್ಲೂ ಊಹಿಸಿರಲಿಲ್ಲ. ನಾವು ಹೀಗೆ ಸನ್ಮಾನ ಮಾಡಿದರೆ ಅಟ್ಟ ಹತ್ತಿ ಘಟ್ಟಕ್ಕೆ ಬಿದ್ದಂತೆ. ಇದಪ್ಪಾ ಶುಕ್ರದೆಶೆ ಎಂದರೆ!**

ಅಧ್ಯಕ್ಷರ ಸನ್ಮಾನ ಸೂತ್ರ ಓದಿದ ನನಗೆ ಸಖೇದಾಶ್ಚರ್ಯ! ಮನಸ್ಸು ಘಾಸಿಗೊಂಡಿತು. ನಾನು ಸನ್ಮಾನದ ಪುಸ್ತಕ ಮಗುಚಿಹಾಕಿದರೂ ಈ ರೀತಿ ಸನ್ಮಾನ ಮಾಡುವ ಪುಟವೂ ಕಣ್ಣಿಗೆ ಬೀಳಲಿಲ್ಲ. ಹುಬ್ಬು ಮೇಲೇರುವಂತೆ ಮಾಡಿತು! ನನಗೆ ಹಾಗಲಕಾಯಿ ರಸಾನುಭವ. ನಿಜಕ್ಕೂ ನನ್ನ ಪಾಲಿಗದು ನುಂಗಲಾರದ, ಉಗುಳಲಾರದ ಬಿಸಿ ತುಪ್ಪ. ಅಧ್ಯಕ್ಷರು ಈ ರೀತಿ ಹಗೆ ಸಾಧಿಸುತ್ತಾರೆಂದು ನಾನು ಕನಸಲ್ಲೂ ಊಹಿಸಿರಲಿಲ್ಲ. ನಾವು ಹೀಗೆ ಸನ್ಮಾನ ಮಾಡಿದರೆ ಅಟ್ಟ ಹತ್ತಿ ಘಟ್ಟಕ್ಕೆ ಬಿದ್ದಂತೆ. ಇದಪ್ಪಾ ಶುಕ್ರದೆಶೆ ಎಂದರೆ! ಏನೂ ಸಾಧನೆ ಮಾಡದವರನ್ನು, ಬಿಡುಬೀಸಾಗಿ ತಿರುಗಾಡಿಕೊಂಡಿದ್ದವರನ್ನು ಹಾಗೂ ಸನ್ಮಾನ ಮರೀಚಿಕೆಯಾಗಿದ್ದವರನ್ನು, ಸನ್ಮಾನ ಅನಾಯಾಸವಾಗಿ ಹುಡುಕಿಕೊಂಡು ಬಂದಿತ್ತು. 'ಭಗವಾನ್ ದೇತಾ ಹೈ ತೋ ಚಪ್ಪಡ ಫಾಡಕೆ ದೇತಾ ಹೈ' ಅನ್ನೋದು ನೆನಪಿಗೆ ಬಂತು.

''ಇದೂ ಒಂದು ಸನ್ಮಾನವಾ? ಜೀವನದಾಗ ಏನಾರ ಪಡ್ಕೊಬೇಕಾದ್ರ ಏನಾರ ಸಾಧನೆ ಮಾಡ್ಬೇಕು. ಲೋಕದ ನಿಯಮ. ನೌಕರ್‍ಯಾಗ ಪದೋನ್ನತಿ ಪಡೆಯೋದು ಸಾಧನೆ ಎನಿಸದು. ಅವರಿಗೂ, ನಿವೃತ್ತ ನೌಕರರಿಗೂ, ಹಿರಿಯ ನಾಗರಿಕರಿಗೂ - ಸನ್ಮಾನಕ್ಕೂ ಎತ್ತಣಿಂದೆತ್ತ ಸಂಬಂಧ? ಏನ್ ಮಹಾ ಕಡಿದು ಕಟ್ಟಿ ಹಾಕ್ಯಾರಂತ ಅವರನ್ನು ಗೌರವಿಸ್ಬೇಕು?'' ನಾನು ವ್ಯಗ್ರವಾಗಿ ಏನೇನೋ ಬಡಬಡಿಸಿದೆ.

ಸನ್ಮಾನಿತರನ್ನು ಆರಿಸಲು ಅಧ್ಯಕ್ಷರು ಮಂಡಿಸಿದ ಮಾನದಂಡದ ಬಗ್ಗೆ ಇಂಡಿಯಾ-ಪಾಕಿಸ್ತಾನ ವಾರ್ ನಡೆಯಿತು. ಆದರೂ ಅಧ್ಯಕ್ಷರು ತಮ್ಮ ಪಟ್ಟು ಸಡಿಲಿಸಲಿಲ್ಲ. ತಮ್ಮ ಪಾಪ್ಯುಲಾರಿಟಿ ಸ್ಕೀಮನ್ನು ಬೀಸಾಡಲು ತಯಾರಿರಲಿಲ್ಲ. ಅದು ಅವರ ದರ್ಪ, ದಬ್ಬಾಳಿಕೆಯ ಸಿಂಬಲ್. ಅಂಗೈ ಹುಣ್ಣಿನಷ್ಟೇ ನಿಚ್ಚಳ. ಅವರಿಗೆ ಪ್ರಪಂಚವನ್ನೇ ಗೆದ್ದ ಸಂಭ್ರಮ. ಅವರ ಮೂಲ ಉದ್ದೇಶ ನನಗೆ ಗೊತ್ತಾಗಿತ್ತು. ಆದರೆ ನಾನು ತಕರಾರು ಎತ್ತಿದರೆ ಕವಡೆಕಾಸಿನ ಕಿಮ್ಮತ್ತಿಲ್ಲ. ನನ್ನ ಮಾತುಗಳೆಲ್ಲ ಗೋರ್ಕಲ್ಲ ಮೇಲೆ ಮಳೆ ಸುರಿದಂತಾಯಿತು.

ಅಧ್ಯಕ್ಷರು ಸದಸ್ಯರ ತಲೆಗೆ ಯಾವ ಸೊಪ್ಪು ತಿಕ್ಕಿದ್ದರೋ ತಿಳಿಯಲಿಲ್ಲ. ಅಂದು ನನ್ನನ್ನು ಬೆಂಬಲಿಸಿದ ಸದಸ್ಯರೇ ಇಂದು ಅಧ್ಯಕ್ಷರೊಡನೆ ಶಾಮೀಲು, ಅವರ ಬಾಲಂಗೋಚಿ. ಈಗ ನಾನು ಅಧ್ಯಕ್ಷರನ್ನು ಎದುರುಹಾಕಿಕೊಂಡರೆ ಅವರು ನನ್ನನ್ನು ಸೀದಾ ಧಾರವಾಡದ ಮೆಂಟಲ್ ಆಸ್ಪತ್ರೆಗೆ ಸೇರಿಸೋದು ಖಚಿತ. ಅವರೊಡನೆ ಚರ್ಚೆಗೆ ಇಳಿಯೋದು ಮುಳ್ಳು ಬೇಲಿಯಲ್ಲಿ ಮೈ, ಕೈ ತೂರಿಸಿದಂತೆ. ಕೆಸರು ಎರಚಾಟದಲ್ಲಿ ನನಗೆ ಆಸಕ್ತಿ ಇರಲಿಲ್ಲ. ಇನ್ನು ಇವರಿಗೆ ಉಪದೇಶ ಮಾಡಿದರೆ ಫಲವೇನು? ಅವರ ಸೂತ್ರಕ್ಕೆ ಸೈ ಎಂದೆ.

''ಹಾಗಾದ್ರ ಕಡೀಕ ಏಸು ಜನಕ್ಕ ಶಾಲು ಹೊದಿಸ್ಬೇಕಂತ ನಿರ್ಧಾರ ಮಾಡೀರಿ?'' ಪ್ರಶ್ನಿಸಿದೆ.

## ಆಶಾಕಿರಣದ ಆಶಯ ಹೊತ್ತು...



ಆಶಾಕಿರಣದ ಆಶಯ ಹೊತ್ತು
ಬಂದಿಹೆವಯ್ಯಾ ಪಣವನು ತೊಟ್ಟು...
ನಮ್ಮ ಹಳ್ಳಿಗೊಂದು ಆಸ್ಪತ್ರಿ ಬೇಕಿತ್ತು
ಸ್ವಾಮಿ... ಬೇರೇನೂ ಬೇಕಿಲ್ಲ ಸವಲತ್ತು
ಆಸ್ಪತ್ರಿಗಿರಲಿ ತಾಕತ್ತು
ನಮ್ಮ ಕಂದಮ್ಮಗಳ ಬದುಕಿಸುವಷ್ಟು

ದುಡ್ಡಿನ ಬಗ್ಗೆ ಯೋಚನೆ ಬ್ಯಾಡ... ಗೊತ್ತು
ಸ್ವಾಮಿ... ನಮ್ಮ ತೋಳಲಿ ತುಂಬಿದೆ ತಾಕತ್ತು
ಬರಲಿ ಎಂಥದೆ ಕಿಮ್ಮತ್ತು...
ಸ್ವಾಮಿ... ನಮ್ಮ ಹೆಗಲೊಳು ಅಡಗಿದೆ ಸಂಪತ್ತು!
ಬರಲಿ ಯಾವುದೆ ಬಿಕ್ಕಟ್ಟು
ಸ್ವಾಮಿ... ನಮ್ಮಲ್ಲಿ ಇರುವುದು ಒಗ್ಗಟ್ಟು

ಸಾಲ ಮನ್ನಾದ ಸತ್ಯ-ಮಿಥ್ಯ ನಮ್ಮ
ಭೂತಾಯಿಗಷ್ಟೆ ಗೊತ್ತು
ನಮಗೂ ಐತೆ ಸ್ವಾಮಿ... ಮರ್ವಾದೆ... ಇಷ್ಟು.
ತೀರ್ಸೇ ತೀರಿಸ್ತೀವಿ ಸಾಲಾನ... ಮತ್ತೂ ಕಷ್ಟ... ಬಿಟ್ಟು
ಮೇಲೆ ಬಂದೇ ಬರ್ತೀವಿ ಇನ್ನಷ್ಟು... ಬೆವರ... ಬಿಟ್ಟು
ಮತ್ತೆ ಹಳ್ಳಿಗೂ ಪ್ಯಾಟಿಗೂ ಯತ್ಯಾಸ ಎಷ್ಟು
ಯಾರಿಗೆ ಗೊತ್ತು ಇದರ ಗುಟ್ಟು
ನಾವೆ ಬೆಳೆದ ತೆನೆ ಗೊನೆಗಳು ಎಷ್ಟು
ಕೊಟ್ಟಿಲ್ಲವೆ ದೇಸಕ್ಕೆ ಆಸೆಯ ಬಿಟ್ಟು

ಚುನಾವಣೆ ಆಮಿಷಗಳೆಲ್ಲಾ ಕೊಚ್ಚಿದ್ದೂ ಎಷ್ಟು
ನಮಗೇನೂಽಽ... ಬೇಕಿಲ್ಲ ಸ್ವಾಮೀ... ರಾಗಿ ಮುದ್ದೆಯೊಂದು ಬಿಟ್ಟು
ನಮ್ಮ ಹಳ್ಳಿಗೊಂದು ಆಸ್ಪತ್ರಿ ಬೇಕಿತ್ತು...
ಅಷ್ಟೆ... ಸ್ವಾಮಿ... ಬೇರೇನೂ ಬೇಕಿಲ್ಲ ಸವಲತ್ತು...
ಆಸ್ಪತ್ರೆಗಿರಲಿ ತಾಕತ್ತು
ನಮ್ಮ... ಕಂದಮ್ಮಗಳ... ಬದುಕಿಸುವಷ್ಟು...

ಟಿ. ರಾಧಾಕೃಷ್ಣಭಟ್. ಉಡುಪಿ
೪-೪-೯೨- ಭಗತ್‌ಸಿಂಗ್ ರಸ್ತೆ, ಕಿನ್ನಿಮೂಲ್ಕಿ
ಉಡುಪಿ - ೫೭೬ ೧೦೧

''ಖರೆ ಹೇಳ್ಬೇಕಂದ್ರ... ಪಟ್ಟಿ ನಿಧಾನಕ್ಕೆ ಹನುಮಂತನ ಬಾಲದ್ಹಾಂಗ ಬೆಳ್ದು ೧೦೦ರ ಗಡಿ ಹಾರಿತ್ತು. ಹ್ಯಾಗೋ ಮಾಡಿ ಅದನ್ನೀಗ ಎಳ್ದು ತಂದು ೧೦೦ರ ಸಮೀಪ ನಿಲ್ಸೀವಿರಿ.'' ನನಗೆ ಅದು ಅಸಹ್ಯ ಮೂಡಿಸಿತು.

''ಅಷ್ಟೊಂದು ಮಂದಿಗೆ ಸನ್ಮಾನ ಮಾಡೋದು ಈಸಿ ಅಲ್ಲರಿ. ಸನ್ಮಾನಕ್ಕೆ ತನ್ನದೇ ಆದ ಒಂದು ಸಂಸ್ಕೃತಿ ಐತಿ. ೧೦೦ ಮಂದಿಗೆ ಸನ್ಮಾನ ಮಾಡಿದ್ರ... ನಮ್ ಸಂಘದ ಪಾಲಿಗೆ ತೀರ ಹೊರೆ. ನಾವೆಲ್ಲ ವರ್ಷವಿಡೀ ಬಾಯ್ಗೆ ಬೀಗ ಹಾಕ್ಕೊಂಡು ಕೂತ್ಕೊಬೇಕಾದ ಅನಿವಾರ್ಯತೆ! ಹಾಸಿಗೆ ಇದ್ದಷ್ಟು ಕಾಲು ಚಾಚೋದನ್ನ ಕಲೀಬೇಕು. ಯಾವ್ದಕ್ಕೂ ಒಂದು ಇತಿ-ಮಿತಿ ಇದ್ರ ಮಾತ್ರ ಚಂದ'' ನಾನು ಎಚ್ಚರಿಕೆಯ ಗಂಟೆ ಬಾರಿಸಿದೆ.

''ಅದನ್ ಕಟ್ಗೊಂಡು ನಿಮ್ಗೇನ್ ಆಗ್ಬೇಕು? ನಿಮ್ಗೆ ಯಾಕ ಬೇಕು ಇಲ್ಲದ ಉಸಾಬರಿ? ಸನ್ಮಾನದ ಖರ್ಚಿಗೆ ಅಂತ ನಾವು ಬ್ಯಾರೆದೊಂದು ಹಾದಿ ಹಿಡ್ದೀವಿ. ಸಮಾರಂಭದ ಖರ್ಚು ಸಂಘದ ವಾರ್ಷಿಕ ಆಯವ್ಯಯ ಲೆಕ್ಕಕ್ಕೆ ಸೇರೋದಿಲ್ಲ.'' ಅಧ್ಯಕ್ಷರ ಖಂಡತುಂಡ ಮಾತು. ನಾನು ಒಂದು ಕ್ಷಣ ಇಂಗು ತಿಂದ ಮಂಗನಂತಾದೆ. ಅನುಮಾನದ ಹುಳ ನನ್ನ ತಲೆ ಹೊಕ್ಕು ಕೊರೆಯಲಾರಂಭಿಸಿತು.

'ಲೂಟಕೆ ಲಾವೋ, ಬಾಟಕೆ ಖಾವೋ' ಅನ್ನುವುದು ಅಧ್ಯಕ್ಷರ ಧೋರಣೆ. ನನಗೆ ಅದು ಇರಿದಂತಾಯಿತು.

''ಸಾಮಾಜಿಕ ಕೆಲ್ಸದಾಗ ಕೈ-ಬಾಯಿ ಸುದ್ದು ಇರ್ಬೇಕು. ಇಲ್ಲಾಂದ್ರ ಗೋಳು ತಪ್ಪಿದ್ದಲ್ಲ. ಬೆಂಕಿ ಜೊತಿಗೆ ಸರಸವಾಡೋದು ಸರಿ ಅನ್ಸೂದಿಲ್ಲ. ಇಲ್ಲದ ರಗಳೆನೆಲ್ಲಾ ನಾವ್ಯಾಕ ಮೈಮ್ಯಾಲೆ ಎಳ್ಕೊಬೇಕ್ರಿ?'' ನಿರ್ಭಿಡೆಯಿಂದ ಕೇಳಿದೆ. ಆದರೆ ಈಗ ಆಡಿಕೊಂಡರೆ, 'ಬರಾದಿಲ್ಲ, ಬಾರಿಸಾದಿಲ್ಲ' ಎಂಬ ಸತ್ಯದ ಅರಿವಾಯಿತು.

ಸದಸ್ಯರು ಸಮಾರಂಭದ ಸಮಸ್ತ ಉಸ್ತುವಾರಿ ನೋಡಿಕೊಳ್ಳುವುದರಲ್ಲಿ ಸಾಕಷ್ಟು ಬೆವರು ಹರಿಸಿದ್ದರು. ದೇವಸ್ಥಾನ ಬಣ್ಣ-ಸುಣ್ಣ ಬಳಿಸಿಕೊಂಡು ಹೊಳೆಯುತ್ತಿತ್ತು. ಆವರಣದಲ್ಲಿ ದೊಡ್ಡ ರಂಗಮಂದಿರ ಬೇರೆ ತಲೆಯೆತ್ತಿತ್ತು. ನವರಂಗದ ಲೈಟುಗಳು ವಾತಾವರಣಕ್ಕೆ ರಂಗು ತುಂಬಿದ್ದವು. ಸಡಗರ-ಸಂಭ್ರಮದ ಹೊಳೆಯೇ ಹರಿದಿತ್ತು. ನಾನು ಅದನ್ನೆಲ್ಲ ಕಂಡು ಹಿರಿಹಿರಿ ಹಿಗ್ಗಿದೆ. ನಿಧಿ ತುಂಬಿದ ತಾಮ್ರದ ಗುಂಡಿ ಸಿಕ್ಕ ಸಂಭ್ರಮ. ಅಧ್ಯಕ್ಷರು ತಮ್ಮ ಜೀನತನ ತೋರಿಸದೆ ಧಾರಾಳವಾಗಿ ಹಣ ಹರಿಸಿದರು. ಅವರಿಗೇನು ಚಿಂತೆ? 'ಯಾರದೋ ರೊಕ್ಕ ಎಲ್ಲಮ್ಮನ ಜಾತ್ರೆ'. ಮಕ್ಕಳ ಕೂಗಾಟ ಹಾರಾಟ, ಕೇಕೆ, ಹಾಡು ತೆರಪಿಲ್ಲದೆ ನಡೆದಿದ್ದವು. 'ಅಹಾ! ನೋಡೋಣ ಬಾರೆ... ಸನ್ಮಾನ ಸಮಾರಂಭ' ಅಂತ ಬೀದಿ ಮಕ್ಕಳು ಪದಕಟ್ಟಿ ಖುಷಿಯಿಂದ ಕೂಗುತ್ತಿದ್ದರು. ಒಟ್ಟಿನಲ್ಲಿ ಅದೊಂದು ಭೂಲೋಕದ ಸ್ವರ್ಗವೇನೋ ಎಂಬ ಭಾವನೆ ಸೃಷ್ಟಿಸಿತ್ತು.

ಸಮಾರಂಭದ ಮುಖ್ಯ ಅತಿಥಿಗಳಾಗಿ ಪಂಕ್ಚುಯಾಲಿಟಿಗೆ ಮತ್ತೊಂದು ಹೆಸರಾಗಿದ್ದ ನಗರದ ಪ್ರಸಿದ್ಧ ಮಠದ ಸ್ವಾಮೀಜಿಯವರು ಬರುವವರಿದ್ದರು. ಸಾಯಂಕಾಲ ೬.೩೦ಕ್ಕೆ ಫೋನ್ ಬಂತು.

''ಈಗ ನಾನು ಸಮಾರಂಭಕ್ಕೆ ಬರ್ಲಿ ಏನ್ರೀ? ಇಲ್ಲಾ ಇನ್ನೂ ತಡ ಐತೇನು?'' ಎಂದು ಅಧ್ಯಕ್ಷರನ್ನು ಕೇಳಿದರು.

''ಬುದ್ಧಿ, ತಾವು ಸದ್ಯಕ ಬರೋದು ಬ್ಯಾಡ್ರಿ. ಸನ್ಮಾನಿಸಿಕೊಳ್ಳೋರ ಕುರ್ಚಿಗಳು ಅರ್ಧಕ್ಕರ್ಧ ಖಾಲಿಖಾಲಿ ಕಾಣ್ತಾವು. ಗಳಿಗೆ ಕೂಡಿಬಂದ ಕೂಡ್ಲೆ ನಾ ಫೋನ್ ಮಾಡಿ ತಿಳಿಸ್ತೀನ್ರಿ'' ಅಧ್ಯಕ್ಷರು ಪ್ರತಿಕ್ರಿಯಿಸಿದರು. ಸ್ವಾಮೀಜಿಯವರನ್ನು ಇದಿರುಗೊಳ್ಳಲು ಜನರು ತುದಿಗಾಲಲ್ಲಿ ನಿಂತಿದ್ದರು.

ಹಾಗೂ-ಹೀಗೂ ಸಂಜೆ ೬.೩೦ರ ಸುಮಾರಿಗೆ ಸಭಾಂಗಣದ ಕುರ್ಚಿಗಳು ಭರ್ತಿ. ಕಿಕ್ಕಿರಿದು ಜಮಾಯಿಸಿದ ಜನ. ಹಿರಿಯ ನಾಗರಿಕರಿಗೆ ಹಾಗೂ ನಿವೃತ್ತಿ ಹೊಂದಿರುವವರಿಗೆ ತಾವು ಮೋಸ್ಟ್ ಹ್ಯಾಂಡ್‌ಸಮ್ ಆಗಿ ಕಾಣುವ ಚಪಲ. ಹೀಗಾಗಿ ರಂಗುರಂಗಾದ ಹೊಸ ಫ್ಯಾಶನ್ ಡ್ರೆಸ್ ಧರಿಸಿ, ಕಾಲಿಗೆ ಶೂ ಏರಿಸಿ, ಮೈಗೆ ಪರ್‌ಫ್ಯೂಮ್ ಹಾಗೂ ಡಿಯೋಡರಂಟ್ ಪೂಸಿ, ಸ್ಮಾರ್ಟ್ ಆಗಿ, ಸಕುಟುಂಬ ಸಮೇತ ಆಗಮಿಸಿದ್ದರು. ಸ್ಟೈಲ್‌ಗೇನೂ ಕಮ್ಮಿ ಇರಲಿಲ್ಲ. 'ಹುಚ್ಚು ಮುಂಡೆ ಮದುವೇಲಿ ಉಂಡವನೇ ಜಾಣ' ಎನ್ನುವ ಗಾದೆ ನೆನಪಿಗೆ ಬಂತು. ಅಧ್ಯಕ್ಷರು ತಾಬಡತೋಬಡ ಸ್ವಾಮಿಗಳಿಗೆ ಫೋನ್ ಮಾಡಿದರು.

ಮುಸ್ಸಂಜೆ ೬.೩೦ಕ್ಕೆ ಪ್ರಾರಂಭವಾಗಬೇಕಿದ್ದ ಪ್ರೋಗ್ರಾಂಗೆ ಸಂಜೆ ೮.೩೦ಕ್ಕೆ ಜೀವಕಳೆ ಬಂತು. ಸ್ವಾಗತ ಭಾಷಣದ ನಂತರ ಸ್ವಾಮೀಜಿಯವರು ಡಾಕ್ಟರೇಟ್ ಪದವಿ ಪುರಸ್ಕೃತರಿಗೂ ಹಾಗೂ ಹಿಂದಿನ ಮಂಡಳಿಯ ಸದಸ್ಯರಿಗೂ ಹಾರ ಹಾಕಿ, ಶಾಲು ಹೊದಿಸಿ, ಹಣ್ಣಿನ ತಟ್ಟೆ ಕೊಟ್ಟು, ಆಶೀರ್ವದಿಸಿದರು. ಬಳಿಕ ಸ್ವಾಮೀಜಿಯವರು ''ಬ್ಯಾರೆ ಊರಾಗ ಇನ್ನೊಂದು ಪ್ರೋಗ್ರಾಂ ಐತಿ. ನನ್ಗೆ ಅಲ್ಲಿಗೆ ತುರ್ತಾಗಿ ಹೋಗಾಕೈತಿ.'' ಇಲ್ಲಿಯ ಉಳಿದ ಭಾಗನ ಕಡಿದು ಕಟ್ಟೆ ಹಾಕಕ ಪದಾಧಿಕಾರಿಗಳಿಗೆ ಒಪ್ಸಿ ಬಂದಂತೆ ಕರಗಿಹೋದ್ರು.

ಸ್ವಾಮೀಜಿಯವರು ಹೋದ ಬೆನ್ನಲ್ಲೆ, ಪದಾಧಿಕಾರಿಗಳು ಪ್ರೋಗ್ರಾಂಗೆ ಮರುಜೀವ ಕೊಟ್ಟರು. ಒಂದು ಸಲಕ್ಕೆ ಹತ್ತು ಮಂದಿ ವೇದಿಕೆಗೆ ಬರಮಾಡಿಕೊಂಡು, ಹಾರ ಹಾಕಿ, ಶಾಲು ಹೊದಿಸಿ, ಹಣ್ಣಿನ ತಟ್ಟೆ ಕೊಟ್ಟು ಅವರನ್ನು ಅಟ್ಟಿದರು. ಎಲ್ಲವೂ ಯೋಜನಾಬದ್ಧವಾಗಿ ಸಾಗುತ್ತಿರುವಾಗ ಒಂದು ಎಡವಟ್ಟಾಯಿತು.

''ನಾವೂ ಸ್ವಾಮಿಗಳಿಂದ ಶಾಲು ಹೊದಿಸಿಕೊಂಡು, ಅವರ ಆಶೀರ್ವಾದ ಪಡ್ಕೊಬೇಕಾಗಿತ್ತು. ಅದೀಗ ಸಾಧ್ಯ ಇಲ್ಲ. ಅವರಿವರಿಂದ ಶಾಲು ಹೊದ್ಸಿಕೊಳ್ಳಾಕ ನಾವೇನ್ ದಿಕ್ಕೇಡಿಗಳೇ? ಇದಕ್ಕಿಂತ ಬದ್‌ನಶೀಬಿ ಬೇರುಂಟೆ ಶಿವಾ? ಯಾವಾನ್ಗೆ ಬೇಕಪ್ಪಾ ನಿಮ್ ಶಾಲು? ನೀ ಬಿಡು ನಿಮ್ ಅಪ್ಪ ಬಂದ್ರು ಸೈತ ನಾವ್ಯಾರು ಶಾಲು ಹೊದ್ಸಿಕೊಳ್ಳಾಕ ತಯಾರಿಲ್ಲ ತಗಿ.'' ಪದಾಧಿಕಾರಿಗಳಿಗೆ ಬೇಕಾಬಟ್ಟೆ ಜರೆದು, ಸನ್ಮಾನದ ಸೀಮೋಲ್ಲಂಘನೆ ಮಾಡಿ, ಫಕ್ಕನೆ ಪರಾರಿಯಾದರು.

ಸಮಾರಂಭದ ಅಚ್ಚರಿಯ ಅಂಶವೇನಪ್ಪಾಂದ್ರೆ... ಸನ್ಮಾನಿಸಿಕೊಳ್ಳುವವರ ಬಗ್ಗೆ ಯಾರೂ ಅವರ ಬದುಕು ಹಾಗೂ ಮಾಡಿರುವ ಸಾಧನೆಗಳ ಬಗ್ಗೆ ಚಕಾರವೆತ್ತಲಿಲ್ಲ... ಅವರನ್ನು ಸಭೆಗೆ ಪರಿಚಯಿಸಲಿಲ್ಲ. ಹೀಗಾಗಿ ಕೆಲವರಿಗೆ ಶಾಲು ಹೊದಿಸಿದ್ದು ಯಾಕೆ, ಎಂಬುದು ತಿಳಿಯದೇ ಒದ್ದಾಡಿದರು. ಅಂತೂ-ಇಂತೂ ಅದ್ದೂರಿ ಸನ್ಮಾನ ಸಮಾರಂಭದ ಅಧ್ಯಾಯವೊಂದು ಮುಕ್ತಾಯವಾಯಿತು.

ಸಮಾರಂಭಕ್ಕೆ ಹರಿದು ಬಂದ ಹಣವೆಷ್ಟು? ದೇಣಿಗೆದಾರರ ಹೆಸರೇನು?... ಉತ್ತರ ಕಾಣದ ಪ್ರಶ್ನೆಗಳು. ವರ್ಷ ಕಳೆದುಹೋದರೂ ಹಣದ ಸುಳಿವು ಸಿಗಲೇ ಇಲ್ಲ. ಟಾಪ್ ಸಿಕ್ರೆಟ್! ಯಾವದಕ್ಕೂ ಒಂದು ರೀತಿ, ನೀತಿ, ನಿಯಮ, ಲೆಕ್ಕಾಚಾರ ಇರೋದು ಸಾಮಾನ್ಯ. ಆದರೆ ಈ ಸನ್ಮಾನ ಸಮಾರಂಭ ಅದಕ್ಕೊಂದು ಅಪವಾದ.

ಸನ್ಮಾನ ಮುಗಿದು ವರ್ಷ ಕಳೆದ ನಂತರ...

ಒಂದಿನ ನಾನು ಸಿಟಿ ಬಸ್ಸಿನ ದಾರಿ ಕಾಯುತ್ತ ದೇವಸ್ಥಾನದಲ್ಲಿ ಕುಂತಿದ್ದೆ. ಎಂದಿನಂತೆ ದೇವರ ದರ್ಶನಕ್ಕೆ ಬಂದ ಅಧ್ಯಕ್ಷರನ್ನು ಇಬ್ಬರು ತಡೆದು ''ಸಾರ್ ನಾ ರಿಟಾಯರ್ ಆಗಿ ಆಗ್ಲೆ ತಿಂಗಳಾಯ್ತು. ನನ್ ಫ್ರೆಂಡ್ಸ್ ಎಫ್‌ಡಿಸಿ ಕೆಲಸಕ್ಕೆ ಬಡ್ತಿ ಹೊಂದ್ಯಾರ. ನಮ್ಗೆ ಯಾವಾಗರೀ ಸನ್ಮಾನ? ಯೋಚ್ನೆ ಮಾಡೋ ಜರೂರತ್ ಇಲ್ಲ. ತಲಾಗ್ ಟೆನ್ ಥೌಸಂಡ್ ಕೊಡ್ತೀವಿ.'' ಮುಖಕ್ಕೆ ರಾಚುವಂತೆ ಡಿಮಾಂಡ್ ಮಾಡಿದರು. ಅಧ್ಯಕ್ಷರ ಗಂಟಲಿನ ಪಸೆಯಾರಿ ಗಂಟಲಿನಿಂದ ಮಾತು ಹೊರಬರಲಿಲ್ಲ. ಎಂಬರಾಸಿಂಗ್ ಸಿಚುಯೇಶನ್! ನನ್ನೆದೆ ಧಸಕ್! ವರ್ಷದ ಹಿಂದೆ ನಾನು ಬಾರಿಸಿದ್ದ ಎಚ್ಚರಿಕೆ ಗಂಟೆಯ ನಾದ ಸಕಾಲಕ್ಕೆ ಅಧ್ಯಕ್ಷರ ಕಿವಿಗೆ ಬಿದ್ದಿದ್ದರೆ ಬರುತಿತ್ತೇ ಈ ದುರ್ಗತಿ!

**ಡಾ|| ರುದ್ರಯ್ಯ ಎ. ಗದಗ**
ಮನೆ ನಂ. ೨೪೦/೪೨, ವಿವೇಕಾನಂದ ನಗರ, ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨೧೦೧

ಶೀನನಿಗೆ ಎಚ್ಚರವಾದಾಗ ಬೆಳಗೆಂಬುದು ಸಂಪೂರ್ಣವಾಗಿತ್ತು. ಅಪ್ಪ ರಸ್ತೆಯ ಕೂಲಿ ಕೆಲಸಕ್ಕೆ ಹೋಗಿದ್ದ. ಅಮ್ಮ ಡಾಕ್ಟರ ಮನೆಗೆ ಮನೆ ಕೆಲಸಕ್ಕೆ ಹೋಗಿದ್ದಳು. ಅವರಿಬ್ಬರೂ ಹೊರಹೋಗುವಾಗ ಬಾಗಿಲೇ ಇರದಿದ್ದ ಆ ಗುಡಿಸಲಿಗೆ ಮಾಮೂಲಿನಂತೆ ಮರದ ತುಂಡುಗಳನ್ನು ಜೋಡಿಸಿ ಮಾಡಿದ ಬಾಗಿಲಿನಂಥದ್ದೊಂದನ್ನು ಮುಚ್ಚಿಹೋಗಿದ್ದರು.

ಆ ಗುಡಿಸಲು ಕಟ್ಟಿದ್ದೇ ಸ್ಥಳೀಯ ವಸ್ತುಗಳಿಂದ ಮತ್ತು ವಿಶಿಷ್ಟ ವಾಸ್ತುವಿನಿಂದ. ನಾಲ್ಕು ಮೀಟರ್ ಚಚ್ಚೌಕದ ಜಾಗದಲ್ಲಿ ಮಧ್ಯದಲ್ಲೊಂದು ಸುಮಾರು ಮೂರೂವರೆ ಮೀಟರ್ ಎತ್ತರದ ಕಂಬ ನಿಲ್ಲಿಸಿ, ಉಳಿದ ನಾಲ್ಕೂ ಮೂಲೆಗಳಿಗೂ ಎರಡು ಮೀಟರ್ ಎತ್ತರದ ಕಂಬಗಳನ್ನು ನೆಟ್ಟು ಮಧ್ಯದ ಕಂಬದಿಂದ ಬಿದಿರುಗಳನ್ನು ಹಗ್ಗದಿಂದ ಬಿಗಿದು, ಅಡಕೆ ದಬ್ಬೆಗಳನ್ನು ಅಡ್ಡಕ್ಕೆ ಕಟ್ಟಿ ಅದರ ಮೇಲೆ ಸೋಗೆ (ಅಡಕೆ ಮರದ ಒಣಗಿದ ಎಲೆ) ಯನ್ನು ಹೊದೆಸಿದ್ದರು. ಗೋಡೆಯಿರಬೇಕಾದ ಜಾಗದಲ್ಲೂ ಸೋಗೆಯದೆ ತಡಿಕೆಗಳನ್ನು ಕಟ್ಟಿದ್ದರು. ಪೂರ್ವ ದಿಕ್ಕಿನಲ್ಲಿ ಒಂದು ಮೀಟರ್ ಅಗಲದ ಬಾಗಿಲನ್ನು ಬಿಟ್ಟಿದ್ದರು. ತಡಿಕೆಯ ಗೋಡೆಯು ಮನೆ ಮಾಡಿಗಿಂತಲೂ ಕೆಳಗಿದ್ದುದರಿಂದ ಆ ಗುಡಿಸಲಿಗೆ ಗಾಳಿ-ಬೆಳಕು ಧಾರಾಳವಾಗಿ ಬರುತ್ತಿತ್ತು. ನಾಯಿ-ಹಸು ಮುಂತಾದ ಪ್ರಾಣಿಗಳು ಹೋಗಬಾರದೆಂದು ಮರದ ತುಂಡೊಂದನ್ನು ಬಾಗಿಲಿನ ಹಾಗೆ ಬಳಸುತ್ತಿದ್ದರು. ಈ ಎಲ್ಲ ವ್ಯವಸ್ಥೆಯನ್ನೂ ಅಪ್ಪ, ಅಮ್ಮ ಮತ್ತು ಶೀನ ಸ್ವಂತ ಶ್ರಮದಿಂದ ಮಾಡಿಕೊಂಡಿದ್ದರು. ಸೋಗೆ ಮತ್ತು ಮರದ ತುಂಡುಗಳನ್ನು ಊರಿನವರಿಂದ ಬೇಡಿ ತಂದಿದ್ದರು. ಸಂಬಂಧಿಗಳು ಮತ್ತು ಅತಿಥಿಗಳೆಂದುಕೊಳ್ಳುವವರು ಯಾರೂ ಬರುತ್ತಿರಲಿಲ್ಲವಾದ್ದರಿಂದ ಅವರಿಗೆ ಅವರ ಮನೆಯ ಬಗೆಗೆ ಕೀಳರಿಮೆ ಎಂದೂ ಬಂದಿದ್ದಿಲ್ಲ.

# ಕನ್ನಡ ಪರಿಮಳ




**ಬೆಳಿಗ್ಗೆ ಶೀನನಿಗೆ ಎಚ್ಚರವಾದಾಗ ಕೆಸರಿನಲ್ಲಿಯೇ ಮುದುಡಿ ಮಲಗಿದ್ದು ಗೊತ್ತಾಯ್ತು. ತನ್ನ ಕನ್ನಡ ಪರಿಮಳ ಪುಸ್ತಕಕ್ಕೇನೂ ಆಗದಿರಲಿ ಎಂದುಕೊಂಡೇ ಹಾಸಿಗೆಯಿಂದ ಎದ್ದ. ಎದೆಗವಚಿ ಕೊಂಡಿದ್ದ ಚೀಲದಿಂದ ಪುಸ್ತಕವನ್ನು ತೆಗೆಯಲು ಪ್ರಯತ್ನಿಸಿದ. ಅದು ಹೊರಬರಲಿಲ್ಲ. ಕೆಸರ ನೀರು ಸೇರಿಕೊಂಡು ಮುದ್ದೆಯಾಗಿತ್ತು. ದುಃಖ ಒತ್ತರಿಸಿ ಬಂತು. ಕಣ್ಣಿನಿಂದ ಇಳಿದ ನೀರು ಚೀಲದೊಳಕ್ಕೆ ಬಿದ್ದು ಇನ್ನಷ್ಟು ರಾಡಿ ಮಾಡಿತು.**

ಕಳ್ಳತನಕ್ಕೆ ಬೇಕಾದ ವಸ್ತುಗಳೂ ಇರದಿದ್ದುದರಿಂದ ಆ ಭಯವೂ ಇರಲಿಲ್ಲ.

ಶೀನ ಗುಡಿಸಲಿನಿಂದ ಹೊರಬಂದು ಮುಖಕ್ಕೆ ಒಂದಿಷ್ಟು ನೀರು ಹಾಕಿಕೊಂಡ, ಸುತ್ತಮುತ್ತಲು ನೋಡಿದ. ತುಂಬಾ ಹೊತ್ತಾದಂತೆನಿಸಿತು. ಬಿಂದಿಗೆ ಹಿಡಿದು ನದಿಯ ಕಡೆಗೆ ಹೊರಟ. ಸ್ನಾನ ಮುಗಿಸಿ ಮನೆಗೆ ನೀರು ತರಬೇಕಾದ್ದು ಅವನ ಬೆಳಗಿನ ಮಾಮೂಲಿನ ಕೆಲಸ.

ಸ್ನಾನ ಮುಗಿಸಿ ಮನೆಯ ಹತ್ತಿರ ಬರುವಾಗ ಬೆಂಗಳೂರಿಗೆ ಹೋಗುವ ಸರ್ಕಾರಿ ಕೆಂಪು ಬಸ್ಸು ಕಾಣಿಸಿತು. ತುಂಬಾ ತಡವಾಗಿದೆ ಎಂದುಕೊಂಡ. ದಿನವೂ ಅದು ತಾನು ಶಾಲೆಗೆ ಹೋಗುತ್ತಿರುವಾಗ ಎದುರಾಗುತ್ತಿತ್ತು. ಇವತ್ತು ಊಟ ಮಾಡಲೂ ಸಮಯವಿಲ್ಲ, ತುಂಬಾ ತಡವಾಗಿದೆ ಎಂದುಕೊಂಡ. ಮನೆಗೆ ಬಂದವನೇ ಶಾಲೆಯ ಚೀಲವನ್ನು ಹೆಗಲಿಗೆ ಹಾಕಿ ಲಾರಿ ಆಫೀಸಿಗೆ ಓಡಿದ.

ಶೀನ ಎಂಟು ಗಂಟೆಗೆ ಲಾರಿ ಆಫೀಸನ್ನು ತಲುಪಿ ಕಸ ಗುಡಿಸಬೇಕು. ಟೇಬಲ್, ಕುರ್ಚಿ, ಕಿಟಕಿಗಳನ್ನೆಲ್ಲ ಒರೆಸಬೇಕು. ರಸ್ತೆ ಬದಿಯ ನಲ್ಲಿಯಿಂದ ಬಿಂದಿಗೆಯಲ್ಲಿ ನೀರು ತಂದು, ನೀರಿನ ಫಿಲ್ಟರ್ ತೊಳೆದು ಅದನ್ನು ತುಂಬಿಸಿಡುವ ಹೊತ್ತಿಗೆ ಒಂಬತ್ತೂವರೆ ಘಂಟೆಯಾಗುತ್ತಿತ್ತು. ಲಾರಿ ಆಫೀಸಿನಲ್ಲಿ ಗಡಿಯಾರವಿರುತ್ತಿದ್ದುದರಿಂದ ಸಮಯ ಸರಿಯಾಗಿ ತಿಳಿಯುತ್ತಿತ್ತು. ಇಷ್ಟು ಕೆಲಸಕ್ಕಾಗಿ ಅವನಿಗೆ ತಿಂಗಳಿಗೆ ಹದಿನೈದು ರೂಪಾಯಿ ಕೊಡುತ್ತಿದ್ದರು. ಆ ಹಣವನ್ನು ಅವನ ಅಪ್ಪ ಯಾವಾಗಲೋ ಬಂದು ತೆಗೆದುಕೊಂಡುಹೋಗಿರುತ್ತಿದ್ದ.

ಇವತ್ತು ಕೂಡ ಶೀನ ಲಾರಿ ಆಫೀಸು ಸೇರುವ ಹೊತ್ತಿಗೆ ಎಂಟೂವರೆ ಗಂಟೆಯಾಗಿತ್ತು. ಬೇಗನೆ ಎಲ್ಲ ಕೆಲಸ ಮುಗಿಸಿ ಶಾಲೆಗೆ ಓಡುತ್ತ ಹೋದರೂ ಅಲ್ಲಿ ಎಲ್ಲರೂ ನಿಂತು ಪ್ರಾರ್ಥನೆ ಮುಗಿಸಿ ಜನಗಣಮನವನ್ನು ಪ್ರಾರಂಭಿಸಿದ್ದರು. ತಾನು ಬಂದುದನ್ನು ಓರೆಗಣ್ಣಿನಿಂದ ಗಮನಿಸುತ್ತಿದ್ದ ಹೆಡ್ಮಾಸ್ತರ್ ರಂಗಣ್ಣ ಬೋಪಿಯನ್ನೂ, ಲಲಿತಮ್ಮ ಟೀಚರನ್ನೂ ನೋಡಿ ಗೇಟಿನ ಬಳಿಯೇ ನಿಂತುಕೊಂಡ. ತಡವಾಗಿ ಬರುತ್ತಿರುವುದಕ್ಕಾಗಿ ಬೋಪಿಯವರಿಂದ ಪೆಟ್ಟನ್ನೂ ಲಲಿತಮ್ಮನವರಿಂದ ಬೈಗುಳಗಳನ್ನೂ ತಿನ್ನುವುದು ಅವನಿಗೆ ಹೊಸದೇನಲ್ಲ.

ಇವೆಲ್ಲವುಗಳ ನಡುವೆ ಶೀನನಿಗೊಂದು ಸಂತೋಷದ ವಿಷಯ ಕಾದಿತ್ತು. ಮೊದಲ ಪೀರಿಯಡ್ ಕನ್ನಡದ್ದಾಗಿತ್ತು. ತರಗತಿಯೊಳಗೆ ಬಂದ ಲಲಿತಮ್ಮ ಕ್ಲಾಸ್ ಲೀಡರ್ ಜೊತೆ ಇನ್ನೊಬ್ಬ ಹುಡುಗನನ್ನು ಕರೆದು ಆಫೀಸ್ ರೂಮಿನಲ್ಲಿ ತನ್ನ ಟೇಬಲ್ಲಿನ ಮೇಲಿರುವ ಪುಸ್ತಕಗಳ ಕಟ್ಟನ್ನು ತರಲು ಹೇಳಿದರು. ಓಡುತ್ತ ಹೋದ ಹುಡುಗರು ದೊಡ್ಡದಾದ ಹೊಸಾ ಪುಸ್ತಕಗಳ ಎರಡು ಕಟ್ಟುಗಳನ್ನು ತಂದರು. ಅವುಗಳನ್ನು ನೋಡುತ್ತಲೇ ಎಲ್ಲ ಮಕ್ಕಳೂ ಹುರುಪುಗೊಂಡರು. ಟೇಬಲ್ಲಿನ ಹತ್ತಿರ ಕುಳಿತಿದ್ದವರು ಅವುಗಳನ್ನು ಮುಟ್ಟಲು, ಓದಲು ಪ್ರಯತ್ನಿಸುತ್ತಿದ್ದರೆ, ಇವರ ಬಗೆಗೆ ಅಸೂಯೆಗೊಂಡು ಸಿಟ್ಟಿನಿಂದ, ಅಸಹಾಯಕತೆಯಿಂದ ಎದ್ದೆದ್ದು ಇಣುಕಾಡುತ್ತಿದ್ದರು ಹಿಂದೆ ಕುಳಿತಿದ್ದವರು. ಎಲ್ಲರಿಗಿಂತ ಎರಡು ವರ್ಷ ತಡವಾಗಿ ಶಾಲೆಗೆ ಸೇರಿದ್ದ ಮತ್ತು ಎತ್ತರಕ್ಕಿದ್ದ ಶೀನನಿಗೂ ಪುಸ್ತಕಗಳ ಕಟ್ಟನ್ನು ಮುಟ್ಟುವುದಕ್ಕಾಗಲೀ ಓದುವುದಕ್ಕಾಗಲೀ ಸಾಧ್ಯವಾಗಲಿಲ್ಲ.

ಲಲಿತಮ್ಮ ಟೀಚರ್ ಹಾಜರಿ ಪುಸ್ತಕ ತೆರೆದು ಒಬ್ಬೊಬ್ಬರ ಹೆಸರನ್ನೂ ಕರೆದು

ತೊಡಗಿದರು. ಹಾಜರಿದ್ದವರಿಗೆಲ್ಲ ಒಂದೊಂದು ಪುಸ್ತಕವನ್ನು ನೀಡಿದರು. ಶೀನನಿಗೂ ಹೊಸಾ ಪುಸ್ತಕವೊಂದು ಸಿಕ್ಕಿತು. ನಿಧಿ ದೊರೆತವನಂತೆ ಅದನ್ನು ತೊಗೊಂಡು ತನ್ನ ಜಾಗಕ್ಕೆ ಹೋದವನೇ ಮುಖಪುಟದ ಬಣ್ಣದ ಚಿತ್ರಗಳ ಮೇಲೆ ಬರೆದಿದ್ದುದನ್ನು ಓದಿದ. 'ಕರ್ನಾಟಕ ಸರ್ಕಾರ ಶಿಕ್ಷಣ ಇಲಾಖೆ - ಕನ್ನಡ ಪರಿಮಳ ಮೂರನೇ ತರಗತಿ ಪಠ್ಯಪುಸ್ತಕ' ತುಂಬಾ ಸಂತೋಷವಾಯಿತು. ಏನೋ ಸುವಾಸನೆಯಂತಿದೆ. ಇನ್ನೂ ಮೂಗಿನ ಹತ್ತಿರಕ್ಕೆ ತಂದ. ತುಂಬಾ ಪರಿಮಳವೆನಿಸಿತು. ಕನ್ನಡ ಭಾಷೆಗೆ ಈ ಪರಿಮಳವಿರುವುದಕ್ಕೇ ಈ ಪುಸ್ತಕಕ್ಕೆ ಕನ್ನಡ ಪರಿಮಳ ಎಂದು ಹೆಸರನ್ನಿಟ್ಟಿರಬಹುದೆಂದುಕೊಂಡ. ಜೊತೆಗೆ, ಚಿತ್ರಗಳೂ ತುಂಬಾ ಚೆನ್ನಾಗಿವೆ ಎನಿಸಿತು. ಲಲಿತಮ್ಮ ಹಾಜರಿಯ ಪ್ರಕಾರ ಎಲ್ಲರಿಗೂ ಪುಸ್ತಕಗಳನ್ನು ನೀಡಿ ಪಾಠವನ್ನು ಪ್ರಾರಂಭಿಸಿದ್ದರೂ, ತುಂಬಾ ಹಿಂದೆ ಕುಳಿತಿದ್ದ ಶೀನ ಪುಸ್ತಕದ ಪುಟಗಳನ್ನು ನೋಡುತ್ತ, ಪರಿಮಳ ಹೀರುತ್ತ ಅವನದೇ ಆದ ಭಾವನಾ ಪ್ರಪಂಚದಲ್ಲಿದ್ದ.

* * *

ಸಂಜೆ ಶೀನ ಮನೆಗೆ ಬಂದಾಗ ಎಲ್ಲ ದಿಕ್ಕಿನಿಂದಲೂ ಮೋಡಗಳಾವರಿಸತೊಡಗಿದ್ದವು. ಕಪ್ಪನೆಯ ಮೋಡಗಳು ಸಾಧ್ಯವಾದಷ್ಟು ಬೆಳಕನ್ನು ಹೀರಿ ಮಬ್ಬುಗತ್ತಲನ್ನುಂಟು ಮಾಡಿದ್ದವು. ಬೀಸುತ್ತಿದ್ದ ಗಾಳಿ ಸುತ್ತಲಿನ ಶಾಖವನ್ನೆಲ್ಲ ಹೀರಿ ಎಲ್ಲಿಯೋ ಬೀಳುತ್ತಿರುವ ಮಳೆ ಇಲ್ಲಿಯೂ ಬೀಳಲಿದೆಯೆಂಬ ಸೂಚನೆಯನ್ನು ನೀಡುತ್ತಿತ್ತು.

ಮನೆಗೆ ಬಂದವನೇ ಪುಸ್ತಕದ ಬಟ್ಟೆ ಚೀಲವನ್ನು ಮನೆಯ ಮಧ್ಯದ ಕಂಬದ ಮೊಳೆಗೆ ನೇತುಹಾಕಿದ. ಅದಕ್ಕೂ ಮೊದಲು ಪುಸ್ತಕವನ್ನು ಹೊರತೆಗೆದು ಪುಟಗಳೊಳಗೆ ಹುದುಗಿದ್ದ ಪರಿಮಳವನ್ನು ಹೀರಿ 'ಆಹಾ! ಈ ಕನ್ನಡ ಪರಿಮಳ ಎಷ್ಟು ಚೆನ್ನಾಗಿದೆ. ವರ್ಷವಿಡೀ ಇದೇ ಪರಿಮಳವಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು' ಎಂದುಕೊಂಡ. ಹೊಸತಿರುವಾಗ ಹುದುಗಿರುವ ಈ ಪರಿಮಳ ಹಳೆಯದಾದಂತೆಲ್ಲ ಎಲ್ಲಿ ಹೋಗುತ್ತದೆ, ಎಂಬುದು ಅವನಿಗೆ ಗೊತ್ತಾಗಲಿಲ್ಲ.

ಶೀನನ ತಾಯಿ ಅದಾಗಲೇ ಮನೆಗೆ ಬಂದಾಗಿತ್ತು. ಬೆಳಿಗ್ಗೆ ಊಟ ಮಾಡದೇ ಹೋಗಿದ್ದಕ್ಕಾಗಿ ಬೈಗುಳಗಳ ರಾಶಿಯನ್ನು ಮೊದಲು ತಿನ್ನಿಸಿದಳು. ನಂತರ ಊಟ ನೀಡಿ ''ಹೀಗೆಲ್ಲ ಉಪವಾಸವಿದ್ದು ನನ್ನ ಹೊಟ್ಟೆ ಉರಿಸ್ಬೇಡ ಮಗನೇ...'' ಎಂದು ಗೋಳಿಟ್ಟಳು. ಇದು ಅವನಿಗೆ ಸ್ವಲ್ಪ ಕಿರಿಕಿರಿಯೆನ್ನಿಸಿತು. ಇಂಥವುಗಳೆಲ್ಲ ಆಗಾಗ್ಗೆ ನಡೆಯುವ ಸಾಮಾನ್ಯ ಘಟನೆಗಳಾಗಿದ್ದವು. ಅವನಿಗೆ ದಿನಕ್ಕೆ ಎರಡೇ ಸಲ ಊಟ ಸಿಗುತ್ತಿತ್ತು – ಬೆಳಿಗ್ಗೆ ಮತ್ತು ಸಂಜೆ. ಇದರಲ್ಲಿ ಆಗಾಗ್ಗೆ ಬೆಳಗಿನ ಊಟ ತಪ್ಪಿಹೋಗುತ್ತಿತ್ತು. ಊಟ ತಪ್ಪಿದರೂ ಬೈಗುಳಗಳನ್ನು ತಿನ್ನಬೇಕಾದ್ದು ಎಂದೂ ತಪ್ಪುತ್ತಿರಲಿಲ್ಲ.



ಶೀನ ಊಟ ಮುಗಿಸುವ ಹೊತ್ತಿಗೆ ಮೋಡದ ಕತ್ತಲೆಯ ಜೊತೆಗೆ ಸೂರ್ಯ ಮುಳುಗಿದ ಕತ್ತಲೆಯೂ ಸೇರಿ ಕಾರ್ಗತ್ತಲಾಗತೊಡಗಿತು. ಗಾಳಿ ಜೋರಾಗಿ ಬೀಸತೊಡಗಿ ಸೀಮೆಎಣ್ಣೆಯ ಬುಡ್ಡಿ ಹಚ್ಚಿದರೂ ಬೆಳಕೆಂಬುದು ಅಲ್ಲಿ ನಿಲ್ಲುವಂತೆ ಕಾಣಲಿಲ್ಲ. ಆದರೂ ಶೀನನ ಅಮ್ಮ ದೀಪಹಚ್ಚಿ ಬೆಳಕನ್ನು ಹಿಡಿದಿಡುವ ಪ್ರಯತ್ನ ಮಾಡುತ್ತಲೇ ಇದ್ದಳು. ಕಿಟಕಿ ಬಾಗಿಲುಗಳಿಲ್ಲದ ಆ ಮನೆಯಲ್ಲಿ ಬಿರುಗಾಳಿಯನ್ನು ಹೊರಗಿಟ್ಟು ಬೆಳಕನ್ನು ಬಚ್ಚಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ.

ಸುಮಾರು ಇದೇ ಹೊತ್ತಿಗೆ ಶೀನನ ಅಪ್ಪನೂ ಬಂದ. ಕತ್ತಲೆಯು ದಟ್ಟವಾಗುತ್ತಿದ್ದಂತೆಯೇ ಮಿಂಚುಗಳ ಸಂಖ್ಯೆಯೂ, ಅವುಗಳ ಬೆಳಕೂ ಹೆಚ್ಚಾಗತೊಡಗಿತು. ಅವರೆಲ್ಲರೂ ಈ ಬೆಳಕಿನಲ್ಲೇ ಉಳಿದವರೆಲ್ಲಿದ್ದಾರೆಂಬುದನ್ನು ನೋಡಿಕೊಳ್ಳುತ್ತಿದ್ದರು. ಅಪ್ಪನು ಈ ಬೆಳಕಿನಲ್ಲೇ ಊಟವನ್ನು ಮುಗಿಸಿದ.

ಬರಬರುತ್ತ ಗಾಳಿಯ ರಭಸ ಹೆಚ್ಚಾಗಿ ಬಿರುಗಾಳಿ ಸುಂಟರಗಾಳಿಯ ಸ್ವರೂಪ ಪಡೆದುಕೊಳ್ಳತೊಡಗಿತು. ಅವರ್ಯಾರಿಗೂ ಕುಳಿತುಕೊಳ್ಳುವುದಕ್ಕಾಗಲೀ, ನಿಂತು ಓಡಾಡುವುದಕ್ಕಾಗಲೀ ಸಾಧ್ಯವಾಗದಂತೆ ಬೀಸತೊಡಗಿತು. ಈ ಭೀಕರ ಬಿರುಗಾಳಿಯು ಕ್ಷಣಕ್ಷಣಕ್ಕೂ ಗುಡಿಸಲನ್ನೂ ಸುತ್ತಲಿನ ತಡಿಕೆಯನ್ನೂ ಅಲ್ಲಾಡಿಸಿ ಅನಾಹುತದತ್ತ ಕೊಂಡೊಯ್ಯುತ್ತಿರುವುದನ್ನೂ ಫಳ್ಳನೆ ಮಿಂಚುತ್ತಿದ್ದ ಮಿಂಚುಗಳು ತೋರಿಸುತ್ತಿದ್ದವು. ಕೊನೆಗೊಮ್ಮೆ ತೀವ್ರಗೊಂಡ ಬಿರುಗಾಳಿಯ ದಾಳಿಯು ಮಾಡಿನ ಹೊದಿಕೆಯನ್ನೂ, ಸುತ್ತಲಿನ ಸೋಗೆಯ ತಡಿಕೆಯನ್ನೂ ಹೊಡೆದೆಬ್ಬಿಸಿ ಮುದ್ದೆಯಾಗಿಸಿ ಎಲ್ಲೋ ದೂರಕ್ಕೆ ಎಸೆದುಹೋದವು. ಈಗ ಮನೆಯೆಂಬುದೇ ಇಲ್ಲವಾಗಿ ಬಯಲಾಯ್ತು. ಮಳೆಯ ಆರ್ಭಟ ಮಿಂಚು ಎಲ್ಲವೂ ಹಾಗೂ ಹೀಗೂ ಉಳಿದುಕೊಂಡಿದ್ದ ಕಂಬಗಳನ್ನೂ, ಮಾಡಿನ ಗಳು-ದಬ್ಬೆಗಳನ್ನೂ ತೋರಿಸಿ ಅಣಕಿಸುತ್ತಿದ್ದವು.

ಇಷ್ಟೇ ಸಾಲದೆಂಬಂತೆ ಪಟಪಟನೆ ಮರಳ ಕಣಗಳಂತೆ ಮಳೆ ಹನಿಗಳು ಬೀಳಲಾರಂಭಿಸಿದವು. ಅಪ್ಪ ಮಧ್ಯದ ಕಂಬದಲ್ಲಿದ್ದ ತಿರುಪತಿ ತಿಮ್ಮಪ್ಪನ ಸಣ್ಣ ಪಟವನ್ನು ಹಿಡಿದು 'ಗೋವಿಂದ ಕಾಪಾಡು, ಗೋವಿಂದ ಕಾಪಾಡು...' ಎಂದು ಬೇಡಿಕೊಳ್ಳುತ್ತಿದ್ದ. ಮಳೆ ಜೋರಾಗಿ ಮನೆಯಿದ್ದ ಜಾಗದಲ್ಲಿ ಹೊಳೆ ಹರಿಯತೊಡಗಿತು. ಅಮ್ಮ ಕೈಗೆ ಸಿಕ್ಕಿದ ಪ್ಲಾಸ್ಟಿಕ್ ಚೀಲವೊಂದನ್ನು ತಲೆಯ ಮೇಲೆ ಹೊದ್ದುಕೊಂಡು ದೇವರನ್ನು ಧ್ಯಾನಿಸತೊಡಗಿದಳು. ಶೀನನಿಗೆ 'ಕನ್ನಡ ಪರಿಮಳ' ಪುಸ್ತಕದ ನೆನಪಾಯ್ತು. ಮಿಂಚೊಂದು ಬಂದಕೂಡಲೇ ಆ ಬೆಳಕಿನಲ್ಲಿ ಮಿಂಚಿನಂತೆ ನೆಗೆದು ತನ್ನ ಚೀಲವನ್ನು ಹಿಡಿದುಕೊಂಡ. ಅದಾಗಲೇ ಒದ್ದೆಯಾಗಿತ್ತು.

ಮಳೆ ಇನ್ನೂ ಜೋರಾಗಿ ಬೀಳತೊಡಗಿತು. ಮಣ್ಣಿನ ನೆಲವೆಲ್ಲ ಕೆಸರಾಗಿತ್ತು. ನಡುರಾತ್ರಿಯವರೆಗೂ ಬಿಡದೆ ಸುರಿದ ಮಳೆ ಮನೆಯೆಂಬ ವ್ಯವಸ್ಥೆಯನ್ನೇ ಕೆಸರ ಗುಂಡಿಯನ್ನಾಗಿಸಿತು. ಅದರಲ್ಲಿಯೇ ಮುದುರಿ ಮಲಗಿ ಆ ಮೂರೂ ಜನ ಮನುಷ್ಯರೆಂಬುವರು ತಮ್ಮ ಪಾಲಿನ ರಾತ್ರಿಯನ್ನು ಕಳೆದರು.

ಬೆಳಿಗ್ಗೆ ಶೀನನಿಗೆ ಎಚ್ಚರವಾದಾಗ ಕೆಸರಿನಲ್ಲಿಯೇ ಮುದುಡಿ ಮಲಗಿದ್ದು ಗೊತ್ತಾಯ್ತು. ತನ್ನ ಕನ್ನಡ ಪರಿಮಳ ಪುಸ್ತಕಕ್ಕೇನೂ ಆಗದಿರಲಿ ಎಂದುಕೊಂಡೇ ಹಾಸಿಗೆಯಿಂದ ಎದ್ದ. ಎದೆಗವಚಿಕೊಂಡಿದ್ದ ಚೀಲದಿಂದ ಪುಸ್ತಕವನ್ನು ತೆಗೆಯಲು ಪ್ರಯತ್ನಿಸಿದ. ಅದು ಹೊರಬರಲಿಲ್ಲ. ಕೆಸರ ನೀರು ಸೇರಿಕೊಂಡು ಮುದ್ದೆಯಾಗಿತ್ತು. ದುಃಖ ಒತ್ತರಿಸಿಬಂತು. ಕಣ್ಣಿನಿಂದ ಇಳಿದ ನೀರು ಚೀಲದೊಳಕ್ಕೆ ಬಿದ್ದು ಇನ್ನಷ್ಟು ರಾಡಿ ಮಾಡಿತು.

* * *

ಮಾಹಿತಿ ತಂತ್ರಜ್ಞಾನದ ರಾಜಧಾನಿ ಬೆಂಗಳೂರಿನ ವೈಟ್‌ಫೀಲ್ಡಿನಲ್ಲಿರುವ ಐಟಿಪಿಎಲ್‌ನ ತಣ್ಣನೆಯ ಹವಾನಿಯಂತ್ರಿತ ರೂಮಿನಲ್ಲಿ ಕುಳಿತಿರುವ ಶೀನ ಉರುಫ್ ಶ್ರೀನಿವಾಸನಿಗೆ ಈಗಲೂ ತಾನು ಕಳೆದುಕೊಂಡಿರುವ ಕನ್ನಡ ಪರಿಮಳವನ್ನು ಮತ್ತೆ ಆಸ್ವಾದಿಸಬೇಕೆಂಬ ಆಸೆಯಿದೆ. ಆಗಸದಿಂದ ಬರುವ ಅಂತರ್ಜಾಲದೊಳಗೆಲ್ಲ ಬಹಳ ಸಲ ಹುಡುಕಿದ್ದಾನೆ. ಇದುವರೆಗೂ ಸಿಕ್ಕಿಲ್ಲ. ಅವನಿಗೆ ಯಾರದ್ದಾದರೂ ಸಹಾಯ ಬೇಕಾಗಿದೆ. ಕನ್ನಡ ಪರಿಮಳವನ್ನು ಹುಡುಕಿ ಪಡೆಯಬೇಕಾಗಿದೆ.

ಎಚ್. ಎಸ್. ಶೇಷಗಿರಿ
ನಂ. ೨೫, ಸಿದ್ಧಿವಿನಾಯಕ ಬಡಾವಣೆ, ವಿರೂಪಾಕ್ಷಪುರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು - ೯೭

ಆಧುನಿಕ ಬಂಡವಾಳಶಾಹಿ ವ್ಯವಸ್ಥೆ ಉದಯಿಸಿದಾಗಿನಿಂದ ಈ ವಿಶ್ವ ಮೂವತ್ತಕ್ಕೂ ಹೆಚ್ಚು ಆರ್ಥಿಕ ಬಿಕ್ಕಟ್ಟುಗಳನ್ನು ಕಂಡಿದೆ. ಹಿಂದಿನ ಮೂರು ಶತಮಾನಗಳಲ್ಲಿ ದಶಕಕ್ಕೆ ಒಂದರಂತೆ ಆರ್ಥಿಕ ಬಿಕ್ಕಟ್ಟುಗಳು ಸಂಭವಿಸಿವೆ. ೧೯೭೪ರಲ್ಲಿ ಇಂಗ್ಲೆಂಡಿನಲ್ಲಿ ಸಂಭವಿಸಿದ ಬ್ಯಾಂಕಿಂಗ್ ಬಿಕ್ಕಟ್ಟು, ಹದಿನೆಂಟನೇ ಶತಮಾನದಲ್ಲಿ ಫ್ರಾನ್ಸ್‌ನಲ್ಲಿ ಸಂಭವಿಸಿದ ಸ್ಟಾಕ್ ಮಾರುಕಟ್ಟೆ ಬಿಕ್ಕಟ್ಟು, ೧೯೨೦ರ ಫ್ಲೋರಿಡಾದ ರಿಯಲ್ ಎಸ್ಟೇಟ್ ಬಬಲ್, ೧೯೨೯ರ ಸ್ಟಾಕ್ ಮಾರುಕಟ್ಟೆ ಪತನ ನಿಕ್ಕೆ ಬಬಲ್, ೧೯೯೧ ಹಾಗೂ ೨೦೦೦ದ ನ್ಯಾಸ್‌ಡಾಕ್ ಬಬಲ್‌ಗಳು ಅವುಗಳಲ್ಲಿ ಅತಿ ಪ್ರಮುಖವಾದವುಗಳಾಗಿವೆ.

ಒಂದು ನೂರು ವರ್ಷಗಳ ಹಿಂದೆ, ಅಂದರೆ ೧೫ನೇ ಅಕ್ಟೋಬರ್ ೧೯೦೮ರಲ್ಲಿ, ಜನಿಸಿದ ಖ್ಯಾತ ಅರ್ಥಶಾಸ್ತ್ರಜ್ಞರಾಗಿದ್ದ ಜೆ. ಕೆ. ಗಾಲ್‌ಬ್ರೈತ್ ಅತಿಯಾದ ಹಣದ ಪೂರೈಕೆಯಿಂದಾಗಬಹುದಾದ ಅಪಾಯಗಳನ್ನು ಕುರಿತು ಎಚ್ಚರಿಸಿದ್ದರು. ಅವರು ತಮ್ಮ 'ದಿ ಗ್ರೇಟ್ ಕ್ರ್ಯಾಷ್ – ೧೯೨೯' ಎಂಬ ಗ್ರಂಥದಲ್ಲಿ ಇದರಲ್ಲಿ ಜರುಗುವ ಸಾಮಾನ್ಯ ನಿರ್ದಿಷ್ಟ ಬಿಕ್ಕಟ್ಟುಗಳೊಂದಿಗೆ ಕಂಡುಬರುವ ವಿವಿಧ ರೀತಿಯ ಬೆಳವಣಿಗೆಗಳನ್ನು ಸರಳವಾಗಿ ಚಿತ್ರಿಸಿದ್ದರು. ಪೂರ್ಣ ಮುಕ್ತಮಾರುಕಟ್ಟೆಯ ತತ್ವಗಳ ಆಧಾರದ ಮೇಲೆ ಕಾರ್ಯ ನಡೆಸುವ ಪೈಪೋಟಿಯುತ ಬಂಡವಾಳಶಾಹಿ ವ್ಯವಸ್ಥೆಯು ಸಹಜವಾಗಿಯೆ ಅಸ್ಥಿರತೆಯಿಂದ ಕೂಡಿದ್ದು, ತ್ವರಿತ ನಿಯಂತ್ರಣಗಳು ಮತ್ತು ಕ್ರಿಯಾಶೀಲ ಸರ್ಕಾರವೊಂದರ ಅವಶ್ಯಕತೆಯನ್ನು ಹೊಂದಿರುತ್ತದೆಂದು ವಾದಿಸಿದ್ದರು. ಪ್ರಸ್ತುತ ಬಿಕ್ಕಟ್ಟು ವಿಶ್ವದ ಎಲ್ಲಾ ಆರ್ಥಿಕತೆಗಳೂ ಗಾಲ್‌ಬ್ರೈತ್ ಅವರ ಮಾರ್ಗದಲ್ಲೇ ಪುನರಾಲೋಚಿಸುವ ಅನಿವಾರ್ಯತೆಯನ್ನು ತಂದೊಡ್ಡಿದೆ.

ಕೊಲಂಬಿಯಾ ವಿಶ್ವವಿದ್ಯಾನಿಲಯದ ಚಿಂತಕರಾದ ನೊಬೆಲ್ ಪ್ರಶಸ್ತಿ ವಿಜೇತರಾದ ಜೋಸೆಫ್ ಸ್ಟಿಗ್ಲಿಟ್ಸ್ ಪ್ರಸ್ತುತ ಜಾಗತಿಕ ಬಿಕ್ಕಟ್ಟನ್ನು ಅತ್ಯಂತ ಹೀನಾಯವಾದ ಆರ್ಥಿಕ ಬಿಕ್ಕಟ್ಟು ಎಂಬುದಾಗಿ ಬಣ್ಣಿಸಿದ್ದಾರೆ. ಅವರ ಪ್ರಕಾರ ಈ ಬಿಕ್ಕಟ್ಟು ಪೂರ್ವ ನಿಶ್ಚಿತವಾದುದ್ದಾಗಿತ್ತು. ಆದರೆ ದುರದೃಷ್ಟವಶಾತ್, ಮುಖ್ಯವಾಹಿನಿಯಲ್ಲಿದ್ದ ಆರ್ಥಿಕ ಚಿಂತಕರು, ರಾಜಕಾರಣಿಗಳು ಹಾಗೂ ನಿಯಮ ರೂಪಿಸುವವರೆಲ್ಲರೂ ಅವರ ಈ ಎಚ್ಚರಿಕೆಯನ್ನು ನಿರ್ಲಕ್ಷಿಸಿದ್ದರು.

ಪ್ರಸ್ತುತ ಬಿಕ್ಕಟ್ಟು ವಿಶ್ವಕ್ಕೆ ಹೊಸದೇನೂ ಅಲ್ಲ. ಹಾಗೆಯೇ ಭಾರತಕ್ಕೂ ಕೂಡ. ಏಕೆಂದರೆ, ನಾವು ೧೯೯೧ರಲ್ಲಿ ಭಾರತ ಅನುಭವಿಸಿದ ಬಿಕ್ಕಟ್ಟನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ಆಗಿನ ಹಣಕಾಸು ಮಂತ್ರಿಗಳಾಗಿದ್ದ ಡಾ|| ಮನಮೋಹನ್ ಸಿಂಗ್, ನಮ್ಮ ಸಂದಾಯ ಬಾಕಿ ಸಮಸ್ಯೆ ಹಾಗೂ ಸಂಕುಚಿತಗೊಳ್ಳುತ್ತಿರುವ ವಿದೇಶಿ ವಿನಿಮಯ ದಾಸ್ತಾನು ಆರ್ಥಿಕ ಮುಗ್ಗಟ್ಟಿಗೆ ಸೂಚಕವಾಗಿವೆ, ಎಂಬುದಾಗಿ ನುಡಿದಿದ್ದರು. ಈ ಸಮಸ್ಯೆಗಳು ಸಮರೋಪಾದಿಯಲ್ಲಿ ಪರಿಹಾರ ಹಾಗೂ ಸುಧಾರಣೆಗಳನ್ನು ಬಯಸಿದ್ದವು. ಭಾರತದಲ್ಲಿ ಇಂದಿಗೂ ಪ್ರತಿ ರಾತ್ರಿ ಹಸಿದುಕೊಂಡೇ ನಿದ್ದೆ ಹೋಗುವ ೪೦೦ ಮಿಲಿಯನ್ ಬಡಜನರ ಬವಣೆಯನ್ನು ಒಂದು ಬಿಕ್ಕಟ್ಟು ಎಂಬುದಾಗಿ ಪರಿಗಣಿಸದೇ ಇರುವುದು ಒಂದು ವಿಪರ್ಯಾಸವೇ ಸರಿ. ಆದರೆ ಪ್ರಸ್ತುತ ವಿಶ್ವ ಆರ್ಥಿಕ ಬಿಕ್ಕಟ್ಟು, ಭಾರತೀಯ ರಿಸರ್ವ್ ಬ್ಯಾಂಕಿನ ಚತುರ ನಿಯಂತ್ರಣಗಳು ಹಾಗೂ ಸೂಕ್ಷ್ಮ ಮೇಲ್ವಿಚಾರಣೆಗಳಿಂದಾಗಿ ಭಾರತೀಯ ಅರ್ಥವ್ಯವಸ್ಥೆಯನ್ನು ಅಷ್ಟೊಂದು ಹೀನಾಯವಾಗಿ ಬಾಧಿಸಿಲ್ಲವೆಂದೇ ಹೇಳಬಹುದು. ಕೇಂದ್ರ ಬ್ಯಾಂಕಿನ ಅಧಿಕಾರಿಗಳಾದ, ಪ್ರಬುದ್ಧ ಚಿಂತಕರೂ ಅನುಭವಿಗಳೂ ಆದ ಶ್ರೀಯುತ ಎಂ. ನರಸಿಂಹ ಅವರು ಭಾರತೀಯ ಹಣಕಾಸು ವ್ಯವಸ್ಥೆಯನ್ನು ಸುನಿಯಂತ್ರಿತ ಆಧಾರದ ಮೇಲೆ ಬೆಳೆಯಲು ಬಿಡಬೇಕೆಂಬ ದೂರದೃಷ್ಟಿಯನ್ನು ಇಟ್ಟುಕೊಂಡಿದ್ದರು. ಅವರ ಶ್ರೇಷ್ಠ ವರದಿಗಳು ಭಾರತ ಸರ್ಕಾರಕ್ಕೆ ಹಾಗೂ ಭಾರತೀಯ ರಿಸರ್ವ್ ಬ್ಯಾಂಕಿಗೆ ನಿಯಮದ ಚೌಕಟ್ಟನ್ನು ಒದಗಿಸಿದ್ದೇ ಅಲ್ಲದೆ

# ವಿಶ್ವ ಆರ್ಥಿಕ ಬಿಕ್ಕಟ್ಟಿಗೆ ಭಾರತೀಯ ಅರ್ಥವ್ಯವಸ್ಥೆ ಕಂಡ ಪರಿಹಾರ

## - ಒಂದು ನೋಟ

ಅಮೆರಿಕಾದ ಅರ್ಥವ್ಯವಸ್ಥೆಯಲ್ಲಿನ ಬ್ಯಾಂಕಿಂಗ್ ವಲಯಕ್ಕೆ ಹೋಲಿಸಿದಾಗ ಭಾರತೀಯ ಬ್ಯಾಂಕಿಂಗ್ ವಲಯ ಆರ್ಥಿಕ ಕುಸಿತದ ದುಷ್ಪರಿಣಾಮಗಳಿಂದ ಸಾಕಷ್ಟು ರಕ್ಷಣೆ ಪಡೆದಿದೆ. ಇದಕ್ಕೆ ಕಾರಣವೆಂದರೆ ಭಾರತ ಹೊಂದಿರುವ ಮಿಶ್ರ ಅರ್ಥವ್ಯವಸ್ಥೆಯಲ್ಲಿ ಬ್ಯಾಂಕಿಂಗ್ ಮತ್ತು ವಿಮಾ ವಲಯಗಳು ಸಾರ್ವಜನಿಕ ಕ್ಷೇತ್ರದಲ್ಲಿ ಇರುವುದೇ ಆಗಿದೆ. ಪ್ರಸ್ತುತ ಆರ್ಥಿಕ ಕುಸಿತ ಹಾಗೂ ಹಿಂದಿನ ಹಲವಾರು ಕುಸಿತಗಳು ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಬಾಧಿಸಿರುವುದಕ್ಕೆ ಅನಿಯಂತ್ರಿತ ಹಣಕಾಸು ವ್ಯವಸ್ಥೆಗಳೇ ಕಾರಣವೆನ್ನಬಹುದು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಪೂರ್ಣ ಪ್ರಮಾಣದ ಮತ್ತು ಹೆಚ್ಚು ಪರಿಣಾಮಕಾರಿಯಾದ ಹಣಕಾಸು ನಿಯಂತ್ರಣಗಳು ಮಾತ್ರ ಫಲಕಾರಿಯಾಗಬಲ್ಲವು.

ಡಾ|| ಜಯಂತಿ ಜೆ.

ಭಾರತೀಯ ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳ ಸ್ವರೂಪವನ್ನು ನಿರ್ಧರಿಸಲು ಸಹಾಯಕವಾಗಿವೆ. ಅವರ ಮಾದರಿ, ಸಮರ್ಪಕ ಬಂಡವಾಳೀಕರಣ, ಸಬಲ ನಿಯಮಾವಳಿಗಳು ಹಾಗೂ ಸೂಕ್ತ ಸ್ವರೂಪದ ಮೇಲ್ವಿಚಾರಣೆಯನ್ನು ಒಳಗೊಂಡಿದೆ. ಈ ಮಾದರಿ ಅಮೆರಿಕಾದ ಹೂಡಿಕೆ ಬ್ಯಾಂಕಿಂಗ್ ತತ್ವಕ್ಕೆ ಅವಕಾಶ ನೀಡಿಲ್ಲ. ಪ್ರಸ್ತುತ ಬಿಕ್ಕಟ್ಟು ಅಮೆರಿಕಾದ ಬ್ಯಾಂಕಿಂಗ್ ವಲಯದಷ್ಟು ಭಾರತೀಯ ಬ್ಯಾಂಕಿಂಗ್ ವಲಯವನ್ನು ಬಾಧಿಸಲಾರದು. ಏಕೆಂದರೆ, ಭಾರತದಲ್ಲಿ ಬ್ಯಾಂಕಿಂಗ್ ಹೆಚ್ಚು ಪ್ರಮಾಣದಲ್ಲಿ ಸಾರ್ವಜನಿಕ ವಲಯದ ಒಡೆತನದಲ್ಲಿದೆ.

ಪ್ರಸ್ತುತ ವಿಶ್ವ ಕುಸಿತಕ್ಕೆ ಸಂಬಂಧಿಸಿದಂತೆ, ಭಾರತ ಅಷ್ಟೊಂದು ಉದಾಸೀನತೆ ತೋರುವುದೂ ಉಚಿತವಲ್ಲ. ಏಕೆಂದರೆ, ಭಾರತೀಯ ಅರ್ಥವ್ಯವಸ್ಥೆ ಪೂರ್ಣವಾಗಿ ವಿಶ್ವ ಕುಸಿತದ ಪರಿಣಾಮದಿಂದ ಮುಕ್ತವಾಗಿಲ್ಲ. ಭಾರತದಲ್ಲಿ ಎರಡಂಕಿ ಮಟ್ಟಕ್ಕೆ ತಲುಪಿದ್ದ ಹಣದುಬ್ಬರದ ದರ ದಿನೇ ದಿನೇ ಕುಸಿಯುತ್ತಿದೆ. ಪ್ರಸ್ತುತ ಶೇಕಡ ೧ಕ್ಕಿಂತ ಕಡಿಮೆ ಪ್ರಮಾಣದಲ್ಲಿದೆ. ಅನೇಕ ಬಿ.ಪಿ.ಒ. ಕಂಪನಿಗಳು ತಮ್ಮ ವೆಚ್ಚವನ್ನು ಕಡಿತಗೊಳಿಸಲು ತಮ್ಮ ಕಾರ್ಮಿಕರನ್ನು ಕಿತ್ತೆಸೆಯುತ್ತಿವೆ. ಅನೇಕ ಉತ್ಪಾದನಾ ಕೈಗಾರಿಕೆಗಳು, ನಿರ್ಮಾಣ ಕೈಗಾರಿಕೆಗಳು, ಎಲೆಕ್ಟ್ರಾನಿಕ್ ಮತ್ತು ಮುದ್ರಣ ಕೈಗಾರಿಕೆಗಳು ಕುಸಿತದ ದುಷ್ಪರಿಣಾಮಕ್ಕೆ ಒಳಗಾಗಿವೆ.

**ವಿಶ್ವ ಕುಸಿತಕ್ಕೆ ಭಾರತ ಕಂಡುಕೊಂಡ ಪರಿಹಾರಗಳು**

ಇಲ್ಲಿಯವರೆಗೆ ಭಾರತ ಸರ್ಕಾರ ಮೂರು ಪ್ಯಾಕೇಜುಗಳನ್ನು ಪ್ರಕಟಿಸಿದೆ. ಅದು ೨೦,೦೦೦ ಕೋಟಿ ರೂಪಾಯಿಗಳ ಒಂದು ಟಾನಿಕ್ ಪ್ಯಾಕೇಜನ್ನು ಪ್ರಕಟಿಸಿ ಯೋಜನೇತರ ವೆಚ್ಚಗಳನ್ನು ೩ ಲಕ್ಷ ಕೋಟಿ ರೂಪಾಯಿಗಳಷ್ಟು ಹೆಚ್ಚಿಸಿದೆ. ಭಾರತದ ಯೋಜನಾ ಆಯೋಗದ ಡೆಪ್ಯುಟಿ ಛೇರ್‌ಮನ್ ಆಗಿರುವ ಮಾಂಟೆಕ್ ಸಿಂಗ್ ಅಹ್ಲುವಾಲಿಯಾ ಅವರು ೧೦ ಅಂಶಗಳ ಒಂದು ಪ್ಯಾಕೇಜನ್ನು ಆಟೊಮೊಬೈಲ್, ಮನೆ ನಿರ್ಮಾಣ, ಸಣ್ಣ ಕೈಗಾರಿಕೆಗಳ ಸಂರಕ್ಷಣೆಗಾಗಿ ಪ್ರಕಟಿಸಿದ್ದಾರೆ. ಟೆಕ್ಸ್‌ಟೈಲ್ಸ್‌ಗಾಗಿ ೧೪೦೦ ಕೋಟಿ ರೂಪಾಯಿಗಳನ್ನು ನೀಡಲಾಗಿದೆ. ಕೇಂದ್ರ ಮೌಲ್ಯವರ್ಧಿತ ತೆರಿಗೆಯನ್ನು ಶೇಕಡ ೪ರಷ್ಟು ಕಡಿತಗೊಳಿಸಲಾಗಿದೆ. ಈ ಪ್ಯಾಕೇಜ್‌ನ ಇತರ ಪ್ರಮುಖ ಅಂಶಗಳೆಂದರೆ, ಮನೆ ಸಾಲಕ್ಕೆ ವಿಶೇಷ ಯೋಜನೆ, ಸಣ್ಣ ಕಂಪನಿಗಳಿಗೆ ಸಾಲ, ರಫ್ತು ಹೆಚ್ಚಳಕ್ಕೆ ಪ್ರೋತ್ಸಾಹ ಇತ್ಯಾದಿ.

ಭಾರತೀಯ ಮಾರುಕಟ್ಟೆಯ ದ್ರವತೆಯ ಸ್ಥಿತಿಯನ್ನು ಉತ್ತಮಪಡಿಸಲು ಕೇಂದ್ರ ಪ್ರಮುಖ ಬದಲಾವಣೆಗಳನ್ನು ತನ್ನ ನೀತಿಗಳಲ್ಲಿ ಜಾರಿಗೆ ತಂದಿದೆ. ನಗದು ಮೀಸಲು ನಿಧಿಯ ಪ್ರಮಾಣವನ್ನು ಶೇಕಡ ೧.೫ರಷ್ಟು ಕಡಿಮೆ ಮಾಡಿದೆ, ಹಾಗೆಯೇ ೬೦,೦೦೦ ಕೋಟಿ ರೂಪಾಯಿಗಳಷ್ಟು ಹಣವನ್ನು ಬ್ಯಾಂಕಿಂಗ್ ವಲಯಕ್ಕೆ ಹರಿಯಬಿಟ್ಟಿದೆ. ಮಾರುಕಟ್ಟೆ ಸ್ಥಿರೀಕರಣ ಯೋಜನೆಯಿಂದ ೮೦೦೦ ಕೋಟಿ ರೂಪಾಯಿಗಳಷ್ಟು ಮೊತ್ತವನ್ನು ಶೇಕಡ ೧ರಷ್ಟು ಕಡಿತಗೊಳಿಸಿದೆ (ಕೇಂದ್ರ ಬ್ಯಾಂಕಿನಿಂದ ವಾಣಿಜ್ಯ ಬ್ಯಾಂಕುಗಳು ಅಲ್ಪಾವಧಿ ಸಾಲ ಪಡೆಯುವ ದರ). ಇದರಿಂದ ವಾಣಿಜ್ಯ ಬ್ಯಾಂಕುಗಳು ಕಡಿಮೆ ಬಡ್ಡಿ ದರದಲ್ಲಿ ಸಾರ್ವಜನಿಕರಿಗೆ ೧೪ ದಿನಗಳಿಗಾಗಿ ಒಂದು ವಿಶೇಷ ಹರಾಜಿನಲ್ಲಿ ೨೦,೦೦೦ ಕೋಟಿ ರೂ.ಗಳವರೆಗೆ ಸಾಲ ಪಡೆಯಬಹುದಾಗಿದೆ. ಹಣದ ಹರಿವನ್ನು ಕಾರ್ಯಗತಗೊಳಿಸಲು ಹಾಗೂ ಹೆಚ್ಚು ಸಾಲ ನೀಡಿಕೆಗಾಗಿ ೪೦,೦೦೦ ಕೋಟಿ ರೂಪಾಯಿಗಳಷ್ಟು ಹೆಚ್ಚುವರಿ ಹಣವನ್ನು ಬ್ಯಾಂಕಿಂಗ್ ವಲಯಕ್ಕೆ ಹರಿಯಬಿಡಲಾಗಿದೆ. ವಿದೇಶೀ ಕರೆನ್ಸಿ ಠೇವಣಿಗಳ ಮೇಲಿನ ಬಡ್ಡಿದರವನ್ನು ಶೇಕಡ ೦.೫ರಷ್ಟು ಹೆಚ್ಚಿಸಲಾಗಿದೆ. ಇದರ ಉದ್ದೇಶ ಡಾಲರ್ ಠೇವಣಿಗಳನ್ನು ಆಕರ್ಷಿಸುವುದೇ ಆಗಿದೆ.

ಅನಿವಾಸಿಯರ ರೂಪಾಯಿ ರೂಪದಲ್ಲಿರುವ ಠೇವಣಿಗಳ ಮೇಲಿನ ಬಡ್ಡಿದರವನ್ನು ಶೇಕಡ ೦.೫ರಷ್ಟು ಹೆಚ್ಚಿಸಲಾಗಿದೆ. ಕಾರ್ಪೊರೇಟ್ ಬಾಂಡ್‌ಗಳ ಮೇಲೆ ವಿದೇಶೀ ಸಾಂಸ್ಥಿಕ ಹೂಡಿಕೆಯ ಮಿತಿಯನ್ನು ದ್ವಿಗುಣಗೊಳಿಸಲಾಗಿದೆ. ಅದು ೬ ಬಿಲಿಯನ್ ಡಾಲರ್‌ಗಳಷ್ಟಾಗಿದೆ. ಅಕ್ಟೋಬರ್ ೬, ೨೦೦೮ರಂದು ಭಾರತೀಯ ರಿಜರ್ವ್ ಬ್ಯಾಂಕು ಸಿ.ಆರ್.ಆರ್.ಅನ್ನು ೩೫೦ ಆಧಾರ ಬಿಂದುಗಳಿಂದ ಕಡಿತಗೊಳಿಸಿ ಶೇಕಡ ೨೪ಕ್ಕೆ ಕಡಿಮೆ ಮಾಡಿದೆ.

ಇತ್ತೀಚೆಗೆ ಫೆಬ್ರವರಿ ೨೪ರಂದು ಕೇಂದ್ರ ಸರ್ಕಾರ ಎಕ್ಸೈಜ್ ಸುಂಕ ಮತ್ತು ಸೇವಾ ತೆರಿಗೆಗಳನ್ನು ಶೇಕಡ ೨ರಷ್ಟು ಕಡಿತಗೊಳಿಸಿದೆ. ಕೇಂದ್ರ ಸರ್ಕಾರದ ಎಕ್ಸೈಜ್ ಸುಂಕವನ್ನು ಶೇಕಡ ೧೦ರಿಂದ ಶೇಕಡ ೮ಕ್ಕೆ ಇಳಿಸಲಾಗಿದೆ. ಸೇವಾ ತೆರಿಗೆಯನ್ನು ಶೇಕಡ ೧೨ರಿಂದ ಶೇಕಡ ೧೦ಕ್ಕೆ ಇಳಿಸಲಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ, ಸಕಾಲಿಕವಾದ ಹಾಗೂ ಜಾಗೃತವಾದ ಸರ್ಕಾರದ ನೀತಿ ಹಾಗೂ ಕೇಂದ್ರ ಬ್ಯಾಂಕಿನ ಕ್ರಮಗಳಿಂದ ಭಾರತೀಯ ಅರ್ಥವ್ಯವಸ್ಥೆ ವಿಶ್ವ ಕುಸಿತದಿಂದ ತನ್ನನ್ನು ತಾನು ರಕ್ಷಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ. ಭಾರತೀಯ ಕ್ರಮಗಳನ್ನು ನೊಬೆಲ್ ಪ್ರಶಸ್ತಿ ವಿಜೇತರಾದ ಅಮರ್ತ್ಯ ಸೇನ್ ಈ ರೀತಿ ಪ್ರಶಂಸಿಸಿದ್ದಾರೆ: ''ಪ್ರಸ್ತುತ ಕುಸಿತದ ಸಂಖ್ಯೆಗಳು ೧೯೩೦ರ ಮಹಾ ಆರ್ಥಿಕ ಮುಗ್ಗಟ್ಟಿಗೆ ಯಾವುದೇ ರೀತಿಯಲ್ಲಿ ಸಮವಲ್ಲ.'' ಭಾರತೀಯ ರಿಜರ್ವ್ ಬ್ಯಾಂಕು ಕೈಗೊಂಡಿರುವ ಪರಿಹಾರಾತ್ಮಕ ಕ್ರಮಗಳು ಸರಿಯಾಗಿವೆ ಮತ್ತು ಕುಸಿತದ ಅಲೆಗಳು ೨೦೧೦ರ ವೇಳೆಗೆ ಕಡಿಮೆಯಾಗಲಿವೆ.

ಕೊನೆಯದಾಗಿ, ಅಮೆರಿಕಾದ ಅರ್ಥವ್ಯವಸ್ಥೆಯಲ್ಲಿನ ಬ್ಯಾಂಕಿಂಗ್ ವಲಯಕ್ಕೆ ಹೋಲಿಸಿದಾಗ ಭಾರತೀಯ ಬ್ಯಾಂಕಿಂಗ್ ವಲಯ ಆರ್ಥಿಕ ಕುಸಿತದ ದುಷ್ಪರಿಣಾಮಗಳಿಂದ ಸಾಕಷ್ಟು ರಕ್ಷಣೆ ಪಡೆದಿದೆ. ಇದಕ್ಕೆ ಕಾರಣವೆಂದರೆ ಭಾರತ ಹೊಂದಿರುವ ಮಿಶ್ರ ಅರ್ಥವ್ಯವಸ್ಥೆಯಲ್ಲಿ ಬ್ಯಾಂಕಿಂಗ್ ಮತ್ತು ವಿಮಾ ವಲಯಗಳು ಸಾರ್ವಜನಿಕ ಕ್ಷೇತ್ರದಲ್ಲಿ ಇರುವುದೇ ಆಗಿದೆ. ಪ್ರಸ್ತುತ ಆರ್ಥಿಕ ಕುಸಿತ ಹಾಗೂ ಹಿಂದಿನ ಹಲವಾರು ಕುಸಿತಗಳು ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಬಾಧಿಸಿರುವುದಕ್ಕೆ ಅನಿಯಂತ್ರಿತ ಹಣಕಾಸು ವ್ಯವಸ್ಥೆಗಳೇ ಕಾರಣವೆನ್ನಬಹುದು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಪೂರ್ಣ ಪ್ರಮಾಣದ ಮತ್ತು ಹೆಚ್ಚು ಪರಿಣಾಮಕಾರಿಯಾದ ಹಣಕಾಸು ನಿಯಂತ್ರಣಗಳು ಮಾತ್ರ ಫಲಕಾರಿಯಾಗಬಲ್ಲವು. ಹಣಕಾಸು ನಿಯಂತ್ರಣಗಳು ವ್ಯಾಪಕವಾಗಿದ್ದು, ಆವರ್ತಗಳನ್ನು ಹತೋಟಿಯಲ್ಲಿಡಲು ಸಹಕರಿಸುವಂತಿರಬೇಕು. ಆಗ ಮಾತ್ರ ಜಾಗತಿಕ ಅರ್ಥವ್ಯವಸ್ಥೆ ಚೇತರಿಸಿಕೊಂಡು, ಪುನರುದಯಿಸುವುದರಲ್ಲಿ ಸಂಶಯವೇ ಇಲ್ಲ.

**ಡಾ|| ಜಯಂತಿ ಜೆ.**
ಆಯ್ಕೆ ಶ್ರೇಣಿ ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಕಾಲೇಜು
ಹೊಳೆಹೊನ್ನೂರು, ಭದ್ರಾವತಿ ತಾಲ್ಲೂಕು




ದಿನಾಂಕ ೧೭-೭-೨೦೦೯ ರಂದು ಇಳಾ ಪ್ರಕಾಶನ ಪ್ರಕಟಿಸಿರುವ ಡಾ|| ಬಿ. ಎನ್. ಸುಮಿತ್ರಾಬಾಯಿ ಅವರ 'ಸರಹದ್ದುಗಳ ಆಚೆ ಈಚೆ' ಕೃತಿಯ ಲೋಕಾರ್ಪಣೆ ನಡೆಯಿತು. ಡಾ|| ಎಂ. ಎಚ್. ಕೃಷ್ಣಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಗುರುಮೂರ್ತಿ, ಡಾ|| ವನಮಾಲಾ ವಿಶ್ವನಾಥ್, ಡಾ|| ಯು. ಆರ್. ಅನಂತಮೂರ್ತಿ, ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ಬಿ. ಎನ್. ಸುಮಿತ್ರಾಬಾಯಿ

# ಆಗಸದಲ್ಲೊಂದು ಕಣ್ಣಾಮುಚ್ಚಾಲೆ ಆಟ

ಬಿ. ಮೈತ್ರಿ

ಕಳೆದ ತಿಂಗಳಷ್ಟೇ ನಾನು ವೀಕ್ಷಿಸಿದ ಪೂರ್ಣ ಸೂರ್ಯಗ್ರಹಣದ ಬಗ್ಗೆ 'ಹೊಸತು' ಪತ್ರಿಕೆಗೆ ಲೇಖನವೊಂದನ್ನು ಬರೆಯಬೇಕೆಂದು ಸಂಪಾದಕರು ನನ್ನನ್ನು ಕೇಳಿದಾಗ ನನ್ನ ಮನಸ್ಸು ೧೪ ವರ್ಷ ಹಿಂದಕ್ಕೋಡಿತು. ೧೯೯೫ರಲ್ಲಿ ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕರಾದ ಆರ್. ಎಸ್. ರಾಜಾರಾಮ್‌ರವರಿಗೆ ನಾನೊಂದು ಪತ್ರ ಬರೆದಿದ್ದೆ. ೧೯೯೫ರ ಅಕ್ಟೋಬರ್ ೨೪ರಂದು ಪೂರ್ಣ ಸೂರ್ಯಗ್ರಹಣವೊಂದು ಕಂಡಿತ್ತು. ಅದನ್ನು ವೀಕ್ಷಿಸಲೆಂದು ಆಗ್ರಾದ ಬಳಿಯಿರುವ ಫತೇಪುರ್‌ಸಿಕ್ರಿಗೆ ನನ್ನ ಕುಟುಂಬದೊಡನೆ ಪ್ರಯಾಣ ಮಾಡುತ್ತಿದ್ದೆ. ಆ ಸಂದರ್ಭದಲ್ಲಿ ರಾಜಾರಾಮ್ ಅವರಿಗೆ ಬರೆದ ಪತ್ರವದು. ಈಗ ೨೦೦೯ರಲ್ಲಿ ಕಂಡ ಸೂರ್ಯಗ್ರಹಣದ ಬಗ್ಗೆ ಲೇಖನವನ್ನು ಬರೆಯುತ್ತಿದ್ದೇನೆ. ೧೪ ವರ್ಷಗಳಲ್ಲಿ ನನ್ನಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದರೂ ಸೂರ್ಯಗ್ರಹಣವೆಂಬುದರ ಬಗ್ಗೆ ನನಗಿರುವ ಆಸಕ್ತಿ ಹಾಗೂ ವಿಸ್ಮಯಗಳು ಬದಲಾಗಿಲ್ಲ. ನನ್ನ ಜೀವನದ ಅತ್ಯಂತ ಅದ್ಭುತವಾದ ಅನುಭವಗಳಲ್ಲಿ ಪೂರ್ಣ ಸೂರ್ಯಗ್ರಹಣದ ವೀಕ್ಷಣೆಯೂ ಒಂದು. ೧೯೯೫ರಲ್ಲಿ ಆ ಅದ್ಭುತವನ್ನು ವೀಕ್ಷಿಸಿದಾಗ ಅಂತಹ ಅನುಭವ ಮತ್ತೊಮ್ಮೆ ನನಗಾಗಬಹುದೆಂದು ನಾನು ಎಣಿಸಿರಲಿಲ್ಲ.

ಭೂಮಿಯ ಮೇಲೆ ನಡೆಯುವ ಎಲ್ಲ ಜೈವಿಕ ಹಾಗೂ ಭೌತಿಕ ಚಟುವಟಿಕೆಗಳ ಮೇಲೆ ಸೂರ್ಯನ ಪ್ರಭಾವ ಅಗಾಧವಾದದ್ದು. ಇಂತಹ ಪ್ರಭಾವಶಾಲಿಯಾದ ಸೂರ್ಯನನ್ನು ಮರೆಮಾಡುವ ಸಾಮರ್ಥ್ಯ ಅಷ್ಟು ಪುಟ್ಟದಾದ ಚಂದ್ರನಿಗಿದೆ ಎಂಬುದೆ ವಿಸ್ಮಯದ ಸಂಗತಿಯಲ್ಲವೆ? ಭೂಮಿ, ಸೂರ್ಯ ಮತ್ತು ಚಂದ್ರ – ಈ ಮೂರೂ ಆಕಾಶಕಾಯಗಳ ನಡುವಿನ ಕಣ್ಣಾಮುಚ್ಚಾಲೆ ಆಟವನ್ನು ನೋಡುವ ಅನುಭವ ಅನನ್ಯ ಮತ್ತು ಅಪೂರ್ವವಾದದ್ದು. ಇಂತಹ ಅನುಭವವನ್ನು ಬೇರೆ ಬೇರೆ ರೀತಿಗಳಲ್ಲಿ ಜನ ಅರ್ಥೈಸಿಕೊಳ್ಳುತ್ತಾರೆ. ವಿಜ್ಞಾನಿಗಳಿಗೆ ಅದೊಂದು ಖಗೋಳ ವಿದ್ಯಮಾನವಾದರೆ ಸಂಪ್ರದಾಯಸ್ಥರಿಗೆ ತಮ್ಮ ಜೀವನದಲ್ಲಿ ತೊಡಕನ್ನುಂಟುಮಾಡುವ ವಿದ್ಯಮಾನವಾಗಿ ಕಂಡುಬರುತ್ತದೆ. ಸೂರ್ಯಗ್ರಹಣವನ್ನು ವಿವಿಧ ದೇಶದ ಜನರು ವಿವಿಧ ರೀತಿಗಳಲ್ಲಿ ಅರ್ಥೈಸಿಕೊಂಡಿದ್ದಾರೆ. ಅಂತೆಯೇ ಬೇರೆ ಬೇರೆ ದೇಶಗಳ ಪುರಾಣಗಳಲ್ಲಿ ಗ್ರಹಣದ ವಿವರಣೆಯನ್ನು ತಮ್ಮ ಸಂಸ್ಕೃತಿಗಳಿಗನುಸಾರವಾಗಿ ನೀಡುತ್ತಾರೆ.

ಭಾರತೀಯ ಪುರಾಣದ ಪ್ರಕಾರ ಗ್ರಹಣದ ಕಾರ್ಯಕರ್ತ ರಾಹು. ವಾಸುಕಿಯ ರುಂಡವಾದ ರಾಹು ಸೂರ್ಯ-ಚಂದ್ರರನ್ನು ನುಂಗಿದಾಗ ಗ್ರಹಣವುಂಟಾಗುತ್ತದೆಂಬ ನಂಬಿಕೆ ನಮ್ಮಲ್ಲಿದೆ. ಗ್ರಹಣದ ಸಮಯದಲ್ಲಿ ಆಹಾರ, ನೀರು ಸೇವಿಸದಿರುವುದು, ಅಡಿಗೆ ಮಾಡದಿರುವುದು, ಆಹಾರ ತಯಾರಿಸಿದ್ದರೆ ಅದಕ್ಕೆ ದರ್ಭೆ ಹುಲ್ಲನ್ನಿಟ್ಟು ರಕ್ಷಿಸಲೆತ್ನಿಸುವುದು, ಬಾವಿಗಳನ್ನು ಬೆಳಕು ಬೀಳದಂತೆ ಮುಚ್ಚುವುದು – ಇವೆಲ್ಲ ಇನ್ನೂ ಚಾಲ್ತಿಯಲ್ಲಿರುವ ಮೂಢನಂಬಿಕೆಗಳು. ಅಲ್ಲದೆ ಗ್ರಹಣದ ಸಮಯದಲ್ಲಿ ಗರ್ಭಿಣಿಯರು ಹೊರಕ್ಕೆ ಬರಬಾರದು; ಒಂದು ವೇಳೆ ಬಂದರೆ ಶಿಶುವಿಗೆ ಅಪಾಯ ತಪ್ಪಿದ್ದಲ್ಲ ಎಂಬ ನಂಬಿಕೆಗಳೂ ಇವೆ. ಅಲ್ಲದೆ ತಮ್ಮ ಮೂಢನಂಬಿಕೆಗಳನ್ನು ಸಮರ್ಥಿಸಿಕೊಳ್ಳಲು ಕೆಲವರು ವಿಜ್ಞಾನದ ಮೊರೆ ಹೋಗುವುದೂ ಉಂಟು. ಗ್ರಹಣದ ಸಮಯದಲ್ಲಿ ಸೂರ್ಯನ ಅಪಾಯಕಾರಿ ವಿಕಿರಣಗಳಿಂದ ಜನರಿಗೆ, ಅದರಲ್ಲೂ ಗರ್ಭಿಣಿಯರಿಗೆ ಅಪಾಯವೆಂಬುದು ಇವರ ವಾದ. ಅಲ್ಲದೆ ಸೂರ್ಯನ ಶಾಖದ ಪ್ರಮಾಣ ಗ್ರಹಣದ ವೇಳೆ ಕಡಿಮೆ ಆಗುವುದರಿಂದ ನಮ್ಮ ಸುತ್ತಮುತ್ತಲಿನ ರೋಗಾಣುಗಳು ಹೆಚ್ಚು ಶಕ್ತಿಯುತವಾಗಿ ರೋಗಗಳನ್ನು ಹರಡಬಹುದಾದ್ದರಿಂದ ಗ್ರಹಣದ ಸಮಯದಲ್ಲಿ ಯಾವುದೇ ಆಹಾರವನ್ನು ಸೇವಿಸಬಾರದೆಂಬುದು ಇನ್ನೊಂದು ವಾದ. ಯಾವುದೇ ವಿಜ್ಞಾನದ ವಿದ್ಯಾರ್ಥಿಗಾದರೂ ಹಾಸ್ಯಾಸ್ಪದವೆನಿಸಬಹುದಾದಂತಹ ವಾದಗಳಿವು. ಆದರೆ ವಿಪರ್ಯಾಸದ ಸಂಗತಿಯೆಂದರೆ ವಿಜ್ಞಾನಿಗಳೇ ಇಂತಹ ಗೊಡ್ಡು ಆಚರಣೆಗಳನ್ನು ಪಾಲಿಸುತ್ತಾರೆ ಎನ್ನುವಂತಹದ್ದು. ೧೯೯೫ರ ಗ್ರಹಣದ ಕಾಲದಲ್ಲಿ ಕೇಳಿಬರುತ್ತಿದ್ದ ಇಂತಹ ಸಂಗತಿಗಳು ಇಂದೂ, ೨೦೦೯ರಲ್ಲೂ ಕೇಳಿಬರುತ್ತಿದೆ ಎನ್ನುವುದು ವಿಷಾದದ ಸಂಗತಿ. ೧೪ ವರ್ಷಗಳಲ್ಲಿ ಜನರ ವೈಜ್ಞಾನಿಕ ಮನೋಭಾವ ಬೆಳೆದಿಲ್ಲವೆನ್ನುವುದು ಆಶ್ಚರ್ಯಕರವಾದದ್ದು. ವೈಜ್ಞಾನಿಕ ಮನೋಭಾವದ ಬೆಳವಣಿಗೆಯಿರಲಿ ಇಂತಹ ಗೊಡ್ಡು ಆಚರಣೆಗಳು ಈಚಿನ ದಿನಗಳಲ್ಲಿ ಹೆಚ್ಚಿನ ಅಬ್ಬರದಿಂದ ನಡೆಸಲ್ಪಡುತ್ತಿವೆ.

ಈ ಬಾರಿ ಗ್ರಹಣದ ಕಾಲದಲ್ಲಿ ಶಾಂತಿಹೋಮಗಳನ್ನು ಸಾರ್ವಜನಿಕವಾಗಿ ನಡೆಸಲಾಗುವುದೆಂದು ಮೂರ್ಖತನದಿಂದ ಘೋಷಿಸುವ ಭಿತ್ತಿಪತ್ರಗಳು ಎಲ್ಲೆಲ್ಲಿಯೂ

ಗ್ರಹಣ ಸಮಯದಲ್ಲಿ ನದಿಯಲ್ಲಿ ಸ್ನಾನ ಮಾಡುತ್ತಿರುವವರು

ಕಂಡುಬರುತ್ತಿದ್ದವು. ಇಷ್ಟು ಸಂಖ್ಯೆಯಲ್ಲಿ ಗೊಡ್ಡು ಆಚರಣೆಗಳು ಸಾರ್ವಜನಿಕವಾಗಿ ೧೯೯೫ರಲ್ಲಿ ನಡೆದಿರಲಿಲ್ಲವೇನೋ.

ಎರಡು ಪೂರ್ಣ ಸೂರ್ಯಗ್ರಹಣಗಳನ್ನು ನೋಡಿದ ನಂತರ ಎರಡೂ ಅನುಭವಗಳ ತುಲನೆಯಾಗುವುದು ಸಹಜ. ೧೯೯೫ರ ಗ್ರಹಣವನ್ನು ವೀಕ್ಷಿಸಲು ನಾವು ಫತೇಪುರ್ ಸಿಕ್ರಿಗೆ ಹೋಗಿದ್ದೆವು. ಪೂರ್ಣಗ್ರಹಣ ಉತ್ತರ ಭಾರತದ ಕೆಲವೇ ಭಾಗಗಳಲ್ಲಿ ಮಾತ್ರ ಕಾಣಿಸುವಂತಿತ್ತು. ಆದ್ದರಿಂದ ನಾವು ಆಗ್ರಾದ ಬಳಿಯಿರುವ ಫತೇಪುರ್ ಸಿಕ್ರಿಗೆ ಹೋಗುವುದೆಂಬ ತೀರ್ಮಾನ ತೆಗೆದುಕೊಂಡಿದ್ದೆವು. ಗ್ರಹಣದ ಹಿಂದಿನ ದಿನ ಆಗ್ರಾದಲ್ಲಿ ತಂಗಿದ್ದ ನಾವು ಬೆಳಗಿನ ಜಾವದಲ್ಲಿ ಕಾರ್ ಒಂದರಲ್ಲಿ ಫತೇಪುರ್ ಸಿಕ್ರಿಗೆ ತಲುಪಿದೆವು. ಗ್ರಹಣ ನೋಡಲು ಅಲ್ಲಿರುವ ಕೋಟೆ ಪ್ರಶಸ್ತ ಜಾಗವೆಂದು ತಿಳಿದು ಅಲ್ಲಿಗೇ ನೇರವಾಗಿ ಹೋದೆವು. ಕೋಟೆಯ ವಿಶಾಲವಾದ ಮೆಟ್ಟಿಲುಗಳ ಮೇಲೆ ನೆರೆದಿದ್ದ ಜನಜಂಗುಳಿ, ಎಲ್ಲಿ ಕಾಲಿಟ್ಟರೆ ಇನ್ನೊಬ್ಬರನ್ನು ತುಳಿಯುತ್ತೇವೋ ಎನ್ನುವಷ್ಟು ಜನಸಂದಣಿ. ಭಾರತವೊಂದೇ ಅಲ್ಲದೆ ವಿಶ್ವದ ವಿವಿಧ ಭಾಗಗಳಿಂದ ಗ್ರಹಣದ ಅನುಭವವನ್ನು ಸವಿಯಲು ಸಾವಿರಾರು ಯಾತ್ರಿಕರು ಆಗಮಿಸಿದ್ದರು. ಅವರಲ್ಲಿ ಗಿರೀಶ್ ಕಾರ್ನಾಡ್ ಮತ್ತು ಅವರ ಪತ್ನಿಯೂ ಸೇರಿದ್ದರು. ಅನೇಕ ವಿಜ್ಞಾನಿಗಳು ತಾವು ನಡೆಸಬೇಕಿದ್ದ ಪ್ರಯೋಗಗಳಿಗೆ ಬಳಸುವ ಉಪಕರಣಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು.

ಸುಮಾರು ೭.೩೦ ಗಂಟೆಯ ಹೊತ್ತಿಗೆ ಗ್ರಹಣದ ಆರಂಭವಾದಾಗ ಜನರ ಹರ್ಷೋದ್ಗಾರ ಮುಗಿಲು ಮುಟ್ಟುವಂತಿತ್ತು. ಚಂದ್ರನ ಬಿಂಬ ಸೂರ್ಯನನ್ನು ನಿಧಾನವಾಗಿ ನುಂಗಲಾರಂಭಿಸಿದಂತೆ ಎಲ್ಲರೂ ಪರವಶರಾಗಿ ನೋಡಲಾರಂಭಿಸಿದರು. ಸುತ್ತಲಿನ ಗದ್ದಲವೆಲ್ಲ ನಿಧಾನವಾಗಿ ಶಾಂತವಾಗತೊಡಗಿತು. ಎಲ್ಲರ ಬಳಿಯೂ ಸೂರ್ಯನನ್ನು ನೋಡಲು ವಿವಿಧ ಬಗೆಯ ಫಿಲ್ಟರ್‌ಗಳು ಕಂಡುಬಂದವು.

ಗ್ರಹಣದ ಕಾಲದಲ್ಲಿ ಆಹಾರವನ್ನು ಸೇವಿಸಬಾರದೆಂಬ ಮೌಢ್ಯವನ್ನು ಸೋಲಿಸಲೆಂದು ನಮ್ಮಲ್ಲಿ ಅನೇಕರು ತಿಂಡಿ ತಿನ್ನುತ್ತ ಗ್ರಹಣದ ಆನಂದವನ್ನು ಸವಿಯುತ್ತಿದ್ದೆವು.

ಗ್ರಹಣದ ಪ್ರಮಾಣ ಹೆಚ್ಚುತ್ತಿದ್ದಂತೆ ಸುತ್ತಲಿನ ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಗಳು ನಮ್ಮ ಗಮನಕ್ಕೆ ಬರತೊಡಗಿದವು. ಸುತ್ತಲಿದ್ದ ಬೆಳಕು ಕಡಿಮೆಯಾಗಿ ಕತ್ತಲಾವರಿಸಲಾರಂಭಿಸಿತು. ಅಲ್ಲದೆ ಹವೆಯೂ ತಣ್ಣಗಾಗಿ ಚಳಿಯೆನಿಸಲಾರಂಭಿಸಿತು. ಆಗಷ್ಟೆ ಬೆಳಗಾಗಿ ತಮ್ಮ ಗೂಡುಗಳಿಂದ ಹೊರಟ ಹಕ್ಕಿಗಳು ಮತ್ತೊಮ್ಮೆ ಬಡೆದ ಕತ್ತಲಿನಿಂದ ತಬ್ಬಿಬ್ಬುಗೊಂಡು ತಮ್ಮ ಗೂಡುಗಳಿಗೆ ಮರಳುವ ಪ್ರಯತ್ನದಲ್ಲಿ ಮಾಡುತ್ತಿದ್ದ ಕಚಪಿಚ ಶಬ್ದವನ್ನು ನಾನು ಜೀವನಪೂರ್ತಿ ಮರೆಯಲಾರೆನು.

ಅಂತೂ ಗ್ರಹಣ ಪೂರ್ಣತೆಯ ಹಂತವನ್ನು ತಲುಪಿದಾಗ ಎಲ್ಲೆಲ್ಲೂ ಕಡುಕಪ್ಪು ಮೌನ. ಆಗಸದಲ್ಲಿ ಕಂಡ ಮಿನುಗುತಾರೆಗಳು: ಆ ದೃಶ್ಯದ ಅದ್ಭುತ ಸೌಂದರ್ಯವನ್ನು ಶಬ್ದಗಳಿಂದ ಬಣ್ಣಿಸಲು ಸಾಧ್ಯವಿಲ್ಲ. ಆ ವಿಸ್ಮಯದಿಂದ ನಾನೆಷ್ಟು ಭಾವಪರವಶಳಾಗಿದ್ದೆನೆಂದರೆ ನನ್ನ ಕಣ್ಣುಗಳಲ್ಲಿ ನನಗೆ ಗೊತ್ತಿಲ್ಲದಂತೆ ನೀರು ತುಂಬಿತ್ತು. ಆ ವಿಸ್ಮಯದ ದೃಶ್ಯ ಒಂದು ನಿಮಿಷದಷ್ಟೂ ಇರಲಿಲ್ಲ. ಚಂದ್ರನ ಬಿಂಬ ಸರಿದು 'ವಜ್ರದುಂಗುರ'ದ ಅಪೂರ್ವ ನೋಟ ಕಂಡಾಗ ಜನರ ಹರ್ಷೋದ್ಗಾರ ನನ್ನನ್ನು ಭೂಮಿಗೆ ಮರಳಿಸಿತು. ಪ್ರತಿಯೊಬ್ಬರೂ ತಮ್ಮದೇ ರೀತಿಯಲ್ಲಿ, ತಮ್ಮದೇ ಭಾಷೆಯಲ್ಲಿ ತಮ್ಮ ಆನಂದವನ್ನು ವ್ಯಕ್ತಪಡಿಸುತ್ತಿದ್ದರು. ಈ ಅನುಭವವನ್ನು ನಾನೆಂದೂ ಮರೆಯಲು ಸಾಧ್ಯವೇ ಇಲ್ಲ.

ಈ ಬಾರಿಯ ಸೂರ್ಯಗ್ರಹಣವೂ ಉತ್ತರ ಭಾರತದಲ್ಲೇ ಪೂರ್ಣವಾಗಿ ಕಾಣುವುದೆಂದು ತಿಳಿದಾಗ ನಾವು ಅಲ್ಲಿಗೇ ಪ್ರಯಾಣಿಸಲು ನಿರ್ಧರಿಸಿದೆವು. ಗ್ರಹಣವು ಭೋಪಾಲ್, ಪಾಟ್ನಾ, ವಾರಾಣಸಿ, ಡಾರ್ಜಿಲಿಂಗ್, ಇಂದೋರ್ ಮುಂತಾದ ಅನೇಕ ಜಾಗಗಳಲ್ಲಿ ಕಾಣುವಂತಿದ್ದರೂ ವಾರಾಣಸಿಯಲ್ಲಿ ಉತ್ತಮವಾಗಿ ಕಾಣುವುದೆಂಬ ಸಲಹೆ ಸಿಕ್ಕಿದ್ದರಿಂದ ನಾವು ವಾರಾಣಸಿಗೆ ಹೋಗುವ ನಿರ್ಧಾರ ಮಾಡಿದೆವು. ನಾನು ಅಲ್ಲಿಗೆ ಮೊದಲ ಬಾರಿ ಹೋಗುತ್ತಿದ್ದುದರಿಂದ ಗ್ರಹಣ ನಡೆಯುವ ದಿನಕ್ಕೆ (ಜುಲೈ ೨೨) ಕೆಲವು ದಿನಗಳ ಮುಂಚೆಯೇ ಕಾಶಿ ತಲುಪಿದೆವು. ವಾರಾಣಸಿಯಲ್ಲಿ ತಿರುಗಾಡುತ್ತಿದ್ದಾಗ ಎಲ್ಲಿಯೂ ಗ್ರಹಣದ ಬಗೆಗಿನ ಪ್ರಚಾರ ಕಂಡುಬರಲಿಲ್ಲ. ವೈಜ್ಞಾನಿಕ ಪ್ರಚಾರವಿಲ್ಲದಿದ್ದರೂ ಯಾವುದೇ ಹೋಮ-ಹವನಗಳ ಪ್ರಚಾರವೂ ಕಂಡುಬರಲಿಲ್ಲ. ಅದು ಶ್ರಾವಣ ಮಾಸವಾದ್ದರಿಂದ ಊರಿನ ತುಂಬ ಕನ್ವರಿಯಾಗಳ ಗಲಾಟೆ. ಉತ್ತರ ಭಾರತದ ಬೇರೆ ಬೇರೆ ರಾಜ್ಯಗಳಿಂದ



ಪೂರ್ಣ ಸೂರ್ಯಗ್ರಹಣ



ವಜ್ರದುಂಗುರ

ಹರಿದ್ವಾರ, ಗಂಗೋತ್ರಿ ಅಥವಾ ಗೋಮುಖಗಳಿಗೆ ಪಾದಯಾತ್ರೆ ಹೋಗುವ ಇವರು ಅಲ್ಲಿಂದ ಗಂಗಾಜಲವನ್ನು ತಮ್ಮ ಕಲಶಗಳಲ್ಲಿ ತುಂಬಿಕೊಂಡು ತಮ್ಮ ಊರಿನ ಹತ್ತಿರದ ಶಿವಲಿಂಗಕ್ಕೆ ಪೂಜೆ ಸಲ್ಲಿಸಿಯೇ ಮರಳುವರು. ಯಾತ್ರೆ ಹೋಗುವ ವೇಳೆ ತಮ್ಮ ಭುಜಗಳ ಮೇಲೆ ಬೊಂಬಿನ ಕೋಲುಗಳನ್ನು ಹೊತ್ತು ಇವರು ನಡೆಯಬೇಕು. ವಾರಾಣಸಿಯ ರಸ್ತೆಗಳಲ್ಲಿ, ಮಂದಿರಗಳಲ್ಲಿ ಎಲ್ಲೆಲ್ಲೂ ಇವರೇ ಕಂಡುಬರುತ್ತಾರೆ. ಶ್ರಾವಣ ಮಾಸದಲ್ಲಿ ಈ ಕನ್ವರಿಯಾಗಳನ್ನು ಬಿಟ್ಟರೆ ಇನ್ನಾವ ರೀತಿಯ ಗ್ರಹಣದ ಪ್ರಚಾರವೂ ನಮಗೆ ಕಂಡುಬರಲಿಲ್ಲ.

ಗ್ರಹಣವನ್ನು ವೀಕ್ಷಿಸಲು ಸೂಕ್ತ ಸ್ಥಳ ಯಾವುದೆಂಬ ಮಾಹಿತಿಯನ್ನು ನಾವು ಪಡೆಯಬೇಕಿತ್ತಾದ್ದರಿಂದ ಬೆನಾರಸ್ ಹಿಂದೂ ವಿಶ್ವವಿದ್ಯಾಲಯದ ಭೌತಶಾಸ್ತ್ರ ವಿಭಾಗಕ್ಕೆ ಹೋದೆವು. ಅಲ್ಲಿನ ಪ್ರಾಧ್ಯಾಪಕರಾದ ಡಾ॥ ಎ. ಕೆ. ಸಿಂಗ್ ಅವರು ನಮ್ಮನ್ನು ಭೇಟಿ ಮಾಡಿ ಗ್ರಹಣದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡಿದ್ದಲ್ಲದೆ ಗ್ರಹಣವನ್ನು ನೋಡಲು ಪ್ರಶಸ್ತವಾದ ಜಾಗ ಯಾವುದೆಂಬುದನ್ನೂ ಹೇಳಿದರು. ಅವರ ಸಲಹೆಯಂತೆ ನಾವು ವಾರಾಣಸಿಯ ರಾಮನಗರ ಕೋಟೆಯ ಎದುರಿಗಿರುವ ಸಾಮ್ನೆ ಘಾಟ್‌ನಲ್ಲಿರುವ ನ್ಯಾಯಾಲಯದ ವಿಶ್ರಾಂತಿಗೃಹದಲ್ಲಿರಲು ವ್ಯವಸ್ಥೆ ಮಾಡಿಕೊಂಡೆವು.

ಗ್ರಹಣದ ವೀಕ್ಷಣೆಗೆ ನಮ್ಮ ಕಡೆಯಿಂದಾಗಬೇಕಿದ್ದ ಎಲ್ಲ ತಯಾರಿಯಾಗಿತ್ತು. ಆದರೆ ಗ್ರಹಣ ನಮಗೆ ಸರಿಯಾಗಿ ಕಾಣುವುದೇ ಎಂಬ ಪ್ರಶ್ನೆ ಕಾಡತೊಡಗಿತ್ತು. ಜುಲೈ ತಿಂಗಳಾದ್ದರಿಂದ ಎಲ್ಲೆಲ್ಲೂ ಮಳೆ ಹಾಗೂ ಮೋಡಗಳ ಆರ್ಭಟವೇ ಹೆಚ್ಚಿತ್ತು. ವಾರಾಣಸಿಗೆ ಬರುವ ನಮ್ಮ ನಿರ್ಧಾರ ಸರಿಯಾದುದೆ ಎಂಬ ಅನುಮಾನ ಕಾಡಲು ಆರಂಭವಾಗಿತ್ತು. ಅಥವಾ ಅಲ್ಲಿಂದಲೇ ಪಾಟ್ನಾಕ್ಕೆ ಹೋಗಬೇಕೇ ಎಂಬ ದ್ವಂದ್ವವೂ ನಮ್ಮಲ್ಲಿತ್ತು. ಪಾಟ್ನಾದಿಂದ ಸುಮಾರು ೩೦ ಕಿಲೋ ಮೀಟರ್ ದೂರದಲ್ಲಿರುವ ತಾರೆಗಣ ಎನ್ನುವ ಹಳ್ಳಿಯಲ್ಲಿ ವಿವಿಧ ರಾಜ್ಯಗಳಿಂದ, ವಿವಿಧ ದೇಶಗಳಿಂದ ಬಂದಿದ್ದ ವಿಜ್ಞಾನಿಗಳ, ಆಸಕ್ತರ ದಂಡೇ ಇತ್ತು. ಅಂತಹ ಜಾಗವನ್ನು ಬಿಟ್ಟು ಗ್ರಹಣದ ಬಗ್ಗೆ ಸ್ವಲ್ಪವೂ ಆಸಕ್ತಿಯನ್ನೇ ತೋರದ ಈ ಊರಿಗೆ ಬಂದು ನಾವು ತಪ್ಪು ಮಾಡಿದೆವೇನೋ ಎನ್ನುವ ಭಾವನೆ ಬೇರೆ.

ಗ್ರಹಣದ ದಿನ ಬೆಳಿಗ್ಗೆ ಬೇಗನೆದ್ದು ಮಹಡಿಯ ಮೇಲೆ ಹೋದರೆ ಗ್ರಹಣವಾಗಲೇ ಆರಂಭವಾಗಿತ್ತು. ಹುಟ್ಟುವಾಗಲೇ ಸೂರ್ಯನಿಗೆ ಗ್ರಹಣ ಹಿಡಿದಿತ್ತು. ಆಕಾಶದಲ್ಲಿದ್ದ ಮೋಡಗಳ ಸಾಲುಗಳನ್ನು ನೋಡಿ ಎಲ್ಲರಿಗೂ ಮನಸ್ಸಿನಲ್ಲಿ ದುಗುಡ ತುಂಬಿತ್ತು. ಆಗೊಮ್ಮೆ ಈಗೊಮ್ಮೆ ಮೋಡಗಳ ನಡುವೆ ಇಣುಕಿ ನೋಡುವ ಸೂರ್ಯನನ್ನು ನೋಡಿಯೇ ತೃಪ್ತಿಪಟ್ಟುಕೊಳ್ಳುತ್ತಿದ್ದೆವು. ಗ್ರಹಣದ ಪ್ರಮಾಣ ಹೆಚ್ಚುತ್ತಿದ್ದಂತೆಯೇ ಸೂರ್ಯ ಸ್ವಲ್ಪಸ್ವಲ್ಪವೇ ಮೇಲೇರತೊಡಗಿದನು. ಅವನನ್ನು ಮುಚ್ಚುವಂತೆ ಕವಿದಿದ್ದ ಮೋಡಗಳೂ ಮೆಲ್ಲನೆ ದೂರ ಸರಿಯತೊಡಗಿದವು. ಗಂಗಾ ನದಿಯ ತೀರದಲ್ಲಿದ್ದ ಘಾಟ್‌ಗಳಲ್ಲಿ ಗ್ರಹಣದ ಸ್ನಾನಕ್ಕಾಗಿ ಬಂದಿದ್ದ ಜನರ ಸಂಖ್ಯೆ ಹೆಚ್ಚುತ್ತಲೇ ಇತ್ತು. ಅವರ ಮಂತ್ರ ಪಠನ, ದೇವರ ಸ್ಮರಣೆ ನಮ್ಮ ಕಿವಿ ಮುಟ್ಟುತ್ತಲಿತ್ತು. ನೋಡನೋಡುತ್ತಿದ್ದಂತೆಯೇ ಆಕಾಶದಲ್ಲಿ ನಮಗೆ ಕಾಣದಿದ್ದ ಚಂದ್ರ ಪೂರ್ಣವಾಗಿ ಸೂರ್ಯನನ್ನು ನುಂಗಿಯೇ ಬಿಟ್ಟ. ಸಂಪೂರ್ಣವಾಗಿ ಮರೆಮಾಡುವ ಚಮತ್ಕಾರ ವಿಸ್ಮಯಕರ. ಗ್ರಹಣದ ಪೂರ್ಣತೆಯ ಅವಧಿ ಈ ಬಾರಿ ೬ ನಿಮಿಷ ೪ ಸೆಕೆಂಡುಗಳು. ನಮ್ಮ ಕೈಗಳಲ್ಲಿದ್ದ ಫಿಲ್ಟರ್ ಇಳಿಸಿ ಸ್ವೇಚ್ಛೆಯಿಂದ ಆ ಮನಮೋಹಕ ದೃಶ್ಯವನ್ನು ಕಣ್ತುಂಬಿಕೊಂಡೆವು. ಸುತ್ತಲೂ ಕತ್ತಲು, ಚಳಿ ಹುಟ್ಟಿಸುವ ಕುಳಿರ್ಗಾಳಿ. ಆದರೆ ಕಳೆದ ಬಾರಿಯ ಹಾಗೆ ಹೆಚ್ಚಿನ ನಕ್ಷತ್ರಗಳು ಕಂಡುಬರಲಿಲ್ಲ, ಅಲ್ಲದೆ ಫತೇಪುರ್ ಸಿಕ್ರಿಯಂತೆ ಇಲ್ಲಿ ಹಕ್ಕಿಗಳ ಗದ್ದಲ ಹೆಚ್ಚಾಗಿ ಇರಲಿಲ್ಲ. ಕೆಲವು ಕಾಗೆಗಳ ಕೂಗಾಟ ಬಿಟ್ಟರೆ ಬೇರೆ ಹಕ್ಕಿಗಳ ಕಲರವವಿರಲಿಲ್ಲ. ಆದರೂ ಗ್ರಹಣದ ಸೌಂದರ್ಯ ಬದಲಾಗಿರಲಿಲ್ಲ. ಅದೇ ವಿಸ್ಮಯವನ್ನುಂಟುಮಾಡುವ ಭಾವ, ವಜ್ರದುಂಗುರ ಕಂಡಾಗ ಆಗುವ ರೋಮಾಂಚನ – ಈ ಬಾರಿಯೂ ನನ್ನನ್ನು ಮೂಕಗೊಳಿಸಿದ ದೃಶ್ಯಗಳು. ಗ್ರಹಣ ಬಿಟ್ಟುಕೊಳ್ಳುತ್ತಿದ್ದ ಸಮಯದಲ್ಲಿ ಅದನ್ನು ತಡೆಹಿಡಿಯುವಂತಿದ್ದರೆ ಎಷ್ಟು ಚೆನ್ನ ಎಂಬ ಅನಿಸಿಕೆ. ಒಮ್ಮೆಯೇ ಎಷ್ಟೆಲ್ಲ ಅನುಭವಗಳು !

ಗ್ರಹಣ ಮುಗಿದು ನಂತರ ದೂರದರ್ಶನದ ವಾರ್ತೆ ಕೇಳುತ್ತಿದ್ದಾಗ ತಿಳಿಯಿತು ಇಂತಹ ಅಪರೂಪ ದೃಶ್ಯವನ್ನು ಅಡೆತಡೆಗಳಿಲ್ಲದೆ ನೋಡುವ ಅವಕಾಶ ಕೇವಲ ವಾರಾಣಸಿ ಮತ್ತು ಅಲಹಾಬಾದ್‌ನಲ್ಲಿ ಇದ್ದವರಿಗೆ ಮಾತ್ರ ದೊರಕಿತು ಎಂಬುದು. ಭಾರತದ ಇನ್ನಾವುದೇ ಜಾಗದಲ್ಲಿಯೂ ಮಳೆ ಹಾಗೂ ಮೋಡಗಳಿಂದಾಗಿ ಗ್ರಹಣ ನಮಗೆ ಕಂಡಷ್ಟು ಚೆನ್ನಾಗಿ ಕಂಡಿರಲಿಲ್ಲ. ವಿಶ್ವದ ಗಮನವನ್ನು ಸೆಳೆದಿದ್ದ ತಾರೆಗಣದಲ್ಲೂ ಗ್ರಹಣದ ಅನುಭವವನ್ನು ಸವಿಯಲು ಅಲ್ಲಿ ನೆರೆದಿದ್ದವರಿಗೆ ಆಗಿರಲಿಲ್ಲ. ನಾವು ವಾರಾಣಸಿಗೆ ಬರಲು ತೆಗೆದುಕೊಂಡ ನಿರ್ಧಾರ ಎಷ್ಟು ಸರಿಯಾಗಿತ್ತು ಎಂದು ಸಂತೋಷದಿಂದ ನಮ್ಮ ಬೆನ್ನನ್ನು ನಾವೇ ತಟ್ಟಿಕೊಂಡೆವು ಮತ್ತು ಒಳ್ಳೆಯ ಸೂಚನೆ ನೀಡಿದ್ದ ಡಾ॥ ಬಿ. ಎಸ್. ಶೈಲಜಾ ಅವರನ್ನು ನೆನೆಸಿದೆವು !

ಜುಲೈ ೨೨, ೨೦೦೯ರಂದು ನಡೆದ ಪೂರ್ಣ ಸೂರ್ಯಗ್ರಹಣ ೨೧ನೇ ಶತಮಾನದ ಅತ್ಯಂತ ದೀರ್ಘಾವಧಿಯ ಗ್ರಹಣವಾಗಿತ್ತು. ಅಷ್ಟು ದೀರ್ಘ ಅವಧಿಯ ಇನ್ನೊಂದು ಗ್ರಹಣ ನಮ್ಮ ಜೀವಿತಾವಧಿಯಲ್ಲಿ ಬರುವುದಿಲ್ಲ. ಆದ್ದರಿಂದ ಅನನ್ಯ ಮತ್ತು ಅಪೂರ್ವವಾದಂತಹ ಅನುಭವವೊಂದರ ಭಾಗವಾದುದರ ಬಗ್ಗೆ ನನಗೆ ಅತ್ಯಂತ ಸಂತೋಷವಿದೆ. ವಜ್ರದ ಉಂಗುರಗಳನ್ನು ತೊಟ್ಟು ಅದರ ಕೃತಕ ಸೌಂದರ್ಯದಿಂದ ನಾವು ಸಂತೋಷಪಡುತ್ತೇವೆ. ಆದರೆ ಪ್ರಕೃತಿಯೇ ಸೃಷ್ಟಿಸಿದ ಸುಂದರ ವಜ್ರದುಂಗುರವು ಸುಂದರ ದೃಶ್ಯವಷ್ಟೇ ಅಲ್ಲ, ಅದು ಪ್ರಕೃತಿಯ ಹಿರಿಮೆ ಹಾಗೂ ಪ್ರೌಢಿಮೆಯ ಪ್ರತೀಕ.

ಪೂರ್ಣ ಸೂರ್ಯಗ್ರಹಣವನ್ನು ವೀಕ್ಷಿಸಿದಾಗ ನನ್ನ ಮನಸ್ಸಿಗೆ ಬರುವುದು ಒಂದೇ ಭಾವ – ಪ್ರಕೃತಿಯ ಮುಂದೆ ನಾವೆಷ್ಟು ಸಣ್ಣವರು ಎಂಬುದು. ತನ್ನದೇ ಕ್ಷುಲ್ಲಕ ವಿಚಾರಗಳಲ್ಲಿ ಪ್ರತಿಷ್ಠೆಯನ್ನು ಕಂಡುಕೊಳ್ಳುವ ಮನುಷ್ಯನಿಗೆ ತನಗಿಂತ ಮಿಗಿಲಾದ ಸೃಷ್ಟಿಯೊಂದು ಇದೆ ಎನ್ನುವುದನ್ನು ತೋರಿಸುವ ಒಂದು ಅವಕಾಶ. ಅಂತಹ ಅವಕಾಶಗಳು ಹೆಚ್ಚು ಬರಲಿ ಎನ್ನುವುದೇ ನನ್ನ ಆಶಯ. ಅದಕ್ಕಾಗಿಯೇ ೨೦೧೦ರ ಜನವರಿಯಲ್ಲಿ ನಡೆಯುವ ಕಂಕಣ ಸೂರ್ಯಗ್ರಹಣವನ್ನು ವೀಕ್ಷಿಸಲು ಆತುರದಿಂದ ಕಾಯುತ್ತಿದ್ದೇನೆ. ಈ ಬಾರಿ ಪಯಣ ಕನ್ಯಾಕುಮಾರಿಗೆ. ನೀವೂ ಬನ್ನಿ

ಬಿ. ಮೈತ್ರಿ
೨೦೧, [illegible] ಬೆಂಗಳೂರು - [illegible]

ಹೊಸ ಓದು



## ಬಹುಮುಖಿ ಜಾನಪದ

ಡಾ|| ಬಸವರಾಜ ಸಬರದ

**ಪುಟ : iv + ೨೦೦**

**ಬೆಲೆ : ರೂ. ೧೪೦**

**ಪಲ್ಲವಿ ಪ್ರಕಾಶನ,** ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

ಮನುಷ್ಯನ ಬುದ್ಧಿವಿಕಾಸದ ಜೊತೆ ಜೊತೆಗೇ ಹುಟ್ಟಿಬೆಳೆದು, ಆತನ ಎಲ್ಲ ಭಾವನೆಗಳಿಗೆ ದನಿಯಾದದ್ದೇ ಜಾನಪದ ಸಾಹಿತ್ಯ. ಸ್ವಚ್ಛ ಝರಿ ನೀರಿನಂತೆ ತನ್ನತನದಿಂದ ಕಂಗೊಳಿಸುವ ಇಂತಹ ಸಾಹಿತ್ಯ ಪ್ರಕಾರವನ್ನು ಇಂದಿನ ಬದಲಾದ ಸನ್ನಿವೇಶದಲ್ಲಿ ತೂಗಿನೋಡುವುದು ಆಸಕ್ತಿದಾಯಕ. ಹಾಡು-ಕುಣಿತದ ಮೂಲಕ ವ್ಯಕ್ತವಾಗುವ ಅಂದಿನ ಜಾನಪದರ ಬಹುಮುಖ ಜೀವನದಲ್ಲಿ ಒಳಿತು-ಕೆಡುಕುಗಳ ಅಂಶಗಳೆರಡೂ ಇವೆ. ಈ ಬಗ್ಗೆ ವಿಶ್ಲೇಷಣಾತ್ಮಕ ಒಳನೋಟವನ್ನು ಈ ಕೃತಿಯ ಮೂಲಕ ನೀಡಿದವರು ಶ್ರೀ ಬಸವರಾಜ ಸಬರದ. ಕ್ರಮೇಣ ಪಲ್ಲಟಗೊಂಡಿರುವ ಇಂದಿನ ವಿಶ್ವಗ್ರಾಮದ - ಜಾಗತೀಕರಣದ ಸಂದರ್ಭದಲ್ಲಿ ಕ್ರಾಂತಿಕಾರಿ - ವಿಚಾರವಾದಿ ಲೇಖನಗಳು ಅತ್ಯಮೂಲ್ಯವಾದ ಬೇರೇನನ್ನೋ ಹೇಳುತ್ತಿವೆ ಅನಿಸುತ್ತದೆ.



## ರಂಗಭೂಮಿ ಮತ್ತು ಸೌಂದರ್ಯಪ್ರಜ್ಞೆ

ಪ್ರೊ|| ಎಂ. ಎಚ್. ಕೃಷ್ಣಯ್ಯ

**ಪುಟ : x + ೨೫೪**

**ಬೆಲೆ : ರೂ. ೧೬೦**

**ಇಳಾ ಪ್ರಕಾಶನ,** ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೫೬೦ ೦೨೬

ರಂಗಭೂಮಿ ಹಾಗೂ ಸೌಂದರ್ಯ ಮೀಮಾಂಸೆಯ ಕುರಿತಾದ ಸಂಪೂರ್ಣ ಚಿತ್ರಣವನ್ನು ನೀಡುವ ಲೇಖನಗಳ ಸಂಗ್ರಹ. ಪ್ರಾಚೀನ ಸಂಸ್ಕೃತ ನಾಟಕಗಳಿಂದ – ಇಂದಿನ ಹವ್ಯಾಸಿ ಹಾಗೂ ವೃತ್ತಿರಂಗಭೂಮಿಗಳವರೆಗೂ ಲೇಖನಗಳ ವ್ಯಾಪ್ತಿ ಇದೆ. ವಿವಿಧ ಮೂಲಗಳಿಂದ ನಿಖರವಾದ ಮಾಹಿತಿ ಪಡೆದು ವಿಷಯವನ್ನು ಸವಿಸ್ತಾರವಾಗಿ ನಿರೂಪಿಸಿದ್ದು ಇಲ್ಲಿನ ವಿಶೇಷ. ಗೊಂದಲವಿಲ್ಲದ, ಎಳೆಎಳೆಯಾಗಿ ವಿವರಿಸುವ ಬರವಣಿಗೆಯ ಶೈಲಿ ಅತ್ಯಾಕರ್ಷಕ. ಕಾಲದ ನಿರಂತರ ಪ್ರವಾಹದೊಂದಿಗೆ ನಿನ್ನೆ-ಇಂದು-ನಾಳೆಗಳು ಸರಿದುಹೋದಂತೆ, ರಂಗಭೂಮಿಯೂ ಅದಕ್ಕೆ ಹೊರತಾಗದೆ ಅನೇಕ ಪಲ್ಲಟಗಳನ್ನು ಕಂಡಿದೆ. ಸೌಂದರ್ಯಪ್ರಜ್ಞೆ - ರಂಗಭೂಮಿ ಬಗ್ಗೆ ಭಾರತವಷ್ಟೇ ಅಲ್ಲ; ಗ್ರೀಸ್, ಇಂಗ್ಲೆಂಡ್, ರಷ್ಯಾ ಮುಂತಾದ ವಿದೇಶಗಳ ಗತಿಕೆಗಳನ್ನು ಸಮನ್ವಯಗೊಳಿಸಿದ ಒಂದು ಅವಲೋಕನ.

## ಸ್ವಾಮೀಜಿ ಸಂದೇಶ-ಸಂವಾದ

(ಶ್ರೀ ಸ್ವಾಮಿ ವಿವೇಕಾನಂದರ ಪತ್ರಸಂದೇಶ ಮತ್ತು ಶಿಷ್ಯರೊಡನೆ ಸಂವಾದ)

ಅನುವಾದ : ಕೋ. ಚೆ.

**ಪುಟ : viii + ೧೬೨** **ಬೆಲೆ : ರೂ. ೬೦**

**ಕರ್ನಾಟಕ ನಿಲಯಂ ಟ್ರಸ್ಟ್(ರಿ), ಪಾಂಡಿಚೇರಿ - ೬೦೫ ೦೦೧**

ವೀರಸಂನ್ಯಾಸಿ, ವಿಶ್ವವಿಜೇತ, ವಿಶ್ವಮಾನವ ಎಂಬಂಥ ವಿಶೇಷಣಗಳು ಸ್ವಾಮಿ ವಿವೇಕಾನಂದರ ಹೆಸರಿನ ಜೊತೆಗಿದ್ದರೆ ಅದಕ್ಕಿಂತ ಹೆಚ್ಚಿನ ಪರಿಚಯ ಇನ್ನೇನಿದೆ? ಅವರ ಸಂದೇಶಗಳು, ಭಾಷಣಗಳು ವಿಶ್ವಮಾನ್ಯವಾಗಿದ್ದುವು. ಅವರ ಪ್ರಖರ ವಿಚಾರಗಳು ಭಾರತದ ಯುವ ಜನರನ್ನು ಮಾತ್ರವಲ್ಲದೆ ವಿದೇಶೀಯರನ್ನೂ ಆಕರ್ಷಿಸಿದ್ದು, ಅಲ್ಲಿಯೂ ಅವರಿಗೆ ಅಪಾರ ಶಿಷ್ಯಸಮೂಹವಿತ್ತು. ಸ್ವಾಮೀಜಿ ಕಡಲಾಚೆಯ ಅಮೆರಿಕಾದಿಂದ ತಮ್ಮ ಶಿಷ್ಯರಿಗೆ ಬರೆದಿರುವ ಪತ್ರಗಳು ಮತ್ತು ಇತರ ಶಿಷ್ಯರೊಂದಿಗೆ ನಡೆಸಿದ ಸಂವಾದಗಳು ಮಾನ್ಯ ಕೋ. ಚೆನ್ನಬಸಪ್ಪನವರಿಂದ ಬಹು ಹಿಂದೆಯೇ ಅನುವಾದಗೊಂಡು ಈ ಪುಸ್ತಕದಲ್ಲಿ ದಾಖಲಾಗಿವೆ.



## ಎರಡು ನಾಟಕಗಳು

ಡಾ|| ವಿಜಯಶ್ರೀ ಸಬರದ

**ಪುಟ : iv + ೧೧೪** **ಬೆಲೆ : ರೂ. ೮೦**

**ಪಲ್ಲವಿ ಪ್ರಕಾಶನ,** ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

ಬಸವಣ್ಣನ ಕಾಲದಲ್ಲಿನ ಕಲ್ಯಾಣದ ಕ್ರಾಂತಿಯನ್ನು ವಸ್ತುವನ್ನಾಗಿಸಿ ರಚಿಸಿದ ನಾಟಕಗಳಿವು. ಮೇಲು-ಕೀಳು, ಧರ್ಮ-ಅಧರ್ಮ ಇವನ್ನೆಲ್ಲ ಸರಿಯಾಗಿ ಅರ್ಥೈಸಿಕೊಳ್ಳದ ಸಂಪ್ರದಾಯವಾದಿ ನಿಲುವಿನ ವಿರುದ್ಧ ಶರಣ ಸಂಸ್ಕೃತಿಯ ಕ್ರಾಂತಿಕಾರಿಗಳು ಪ್ರತಿಭಟಿಸಿದ ಸನ್ನಿವೇಶದ ಚಿತ್ರಣ. ಅಸಮಾನತೆಯನ್ನು ತೊಲಗಿಸಲು ಶ್ರಮಿಸಿದ ಎಲ್ಲ ವಚನಕಾರರನ್ನು ಇಲ್ಲಿ ಪಾತ್ರಗಳನ್ನಾಗಿಸಿ, ಅವರ ಸಂದೇಶಗಳನ್ನು ಸಂಭಾಷಣೆಗಳನ್ನಾಗಿಸಿ, ಸರಿಯಾದ ಸಂದರ್ಭ ಸೃಷ್ಟಿಯನ್ನೂ ಮಾಡಿದ ಲೇಖಕಿಯ ಸಾಮಾಜಿಕ ಕಳಕಳಿ ಮೆಚ್ಚುವಂತಹುದು. ಸಾಹಿತ್ಯಕ್ಕೆ ಜನರ ಮನಃಪರಿವರ್ತನೆ ಮಾಡುವ ಶಕ್ತಿಯಿದೆ. ತನ್ಮೂಲಕ ಸಮಾಜ ಪರಿವರ್ತನೆಗೆ ಈ ಕಿರುನಾಟಕಗಳು ನೆರವಾಗಲೆಂದು ಆಶಿಸೋಣ.

## ರಂಗ ದರ್ಶನ (ರಂಗಭೂಮಿ ಕುರಿತು ಮೆಲುಕು)

ಮೋನಪ್ಪ ಗಾಡದ

**ಪುಟ : viii + ೧೨೪** **ಬೆಲೆ : ರೂ. ೧೦೦**

**ಗ್ರಾಮೀಣ ಸಾಹಿತ್ಯ ಮಾಲೆ,** ಎಡೆಯೂರು ಶ್ರೀ ಜಗದ್ಗುರು ತೋಂಟದಾರ್ಯಮಠ, ಡಂಬಳ - ಗದಗ

ಬಾಲ್ಯದ ನೆನಪುಗಳನ್ನು ಇಳಿವಯಸ್ಸಿನಲ್ಲಿ ಸ್ಮರಿಸಿಕೊಳ್ಳುವುದು ಒಂದು ರೋಚಕ ಅನುಭವ. ಚಿಕ್ಕ ವಯಸ್ಸಿನಿಂದಲೇ ನಾಟಕಗಳನ್ನು ನೋಡುವ ಅಭ್ಯಾಸವಿದ್ದ ಶ್ರೀ ಮೋನಪ್ಪ ಗಾಡದ ಅವರು, ಸುಮಾರು ೬೦-೭೦ ವರ್ಷಗಳಷ್ಟು ಹಿಂದಿನ ನಾಟಕಗಳ - ರಂಗಭೂಮಿಯ ದೃಶ್ಯವೈಭವವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾರೆ. ಆ ನಾಟಕ ಕಂಪೆನಿಯ ಕಲಾವಿದರೇನು, ಅವರ ಪಾತ್ರಗಳನ್ನು ಮತ್ತೆ ಮತ್ತೆ ನೋಡಲು ಧಾವಿಸುವ ಕಲಾಭಿಮಾನಿಗಳೇನು! ಅದೊಂದು ಆಗಿನ ಸುಂದರ ಬಣ್ಣದ ಲೋಕ. ಓದಿನ ಮೂಲಕ ಮಾತ್ರ ನಾವಿಂದು ದಕ್ಕಿಸಿಕೊಳ್ಳಬಹುದಾದ ಕಲಾಸಂಸ್ಕೃತಿಯೊಂದರ ಪ್ರತೀಕ. ಇಷ್ಟೇ ಅಲ್ಲ; ಇನ್ನೂ ಸ್ವಾರಸ್ಯ ವಿಚಾರಗಳು ಇವೆ, ಓದಿ ನೋಡಿ.



## ಶ್ಯಾಮಕೃಷ್ಣ ನಾದ ವೈಭವ (ಶ್ರೀ ಶ್ಯಾಮಾಶಾಸ್ತ್ರಿಮುತ್ತಿತ್ತರರ ಕೃತಿ ಸಂಕಲನ)

ಸಂ. : ವಿದ್ವಾನ್ ಆನಂದರಾಮ ಉಡುಪ

**ಪುಟ : 18 + 400 + 10** **ಬೆಲೆ : ರೂ. ೭೫೦**

**ಶ್ರುತಿರಂಜನಿ,** ನಂ. ೭೬, ೫ನೇ ಮುಖ್ಯರಸ್ತೆ, ೧ನೇ ಸ್ಟೇಜ್, ಪೋಸ್ಟಲ್ ಕಾಲೋನಿ, ಸಂಜಯನಗರ, ಬೆಂಗಳೂರು - ೫೬೦ ೦೯೪

ಸಂಗೀತಕ್ಕೆ ಸಾಹಿತ್ಯದ ಹಂಗಿಲ್ಲ! ನಾದವೇ ಪ್ರಧಾನ. ಆದರೂ ರಾಗ-ತಾಳ-ಸ್ವರ-ಭಾವಗಳನ್ನು ಅನುಸರಿಸಿ ಸಾಹಿತ್ಯವೂ ಜೊತೆಯಲ್ಲಿ ಸುಂದರವಾಗಿ ಸಾಗಿ ಬಂದರೆ ಭಾವಶ್ರೀಮಂತಿಕೆ ಹೆಚ್ಚಿ ಸಂಗೀತ ಜನರೊಂದಿಗೆ ಸಂವಾದಿಸಬಲ್ಲುದು. ಹಿಂದಿನ ತಲೆಮಾರಿನ ಕೆಲವೇ ಮನೆತನದ ವಾಗ್ಗೇಯಕಾರರು ಸಂಗೀತದ ಭಾಷೆಗೆ ಹೊಂದುವಂಥ ಕೃತಿರಚನೆ ಮಾಡಿ ಸ್ವತಃ ಹಾಡುತ್ತಿದ್ದರು. ಅವು ಸಾಮಾನ್ಯವಾಗಿ ತಮ್ಮ ಇಷ್ಟದೈವದ ಸ್ತುತಿಗಳೋ ಕೀರ್ತನೆಗಳೋ ಆಗಿರುವುದೇ ಹೆಚ್ಚು. ಇದೋ ಇಲ್ಲಿವೆ ನೋಡಿ – ಶುದ್ಧ ಸ್ವರಪ್ರಸ್ತಾರದೊಂದಿಗೆ ಹಾಡಲು ಅನುಕೂಲವಾದ ಕೆಲವು ಉತ್ಕೃಷ್ಟ ಕೃತಿಗಳನ್ನು ಶ್ರೀ ಆನಂದರಾಮ ಉಡುಪರು ಸಂಗ್ರಹಿಸಿದ್ದಾರೆ.

– ಇಂದಿರಾಕುಮಾರಿ

೭೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ಕವಿಪತ್ನಿಯರ ಸಂದರ್ಶನ

ಎಂ. ಡಿ. ಗೋಗೇರಿ

**ಸು**ಬ್ಬಣ್ಣ ಹುಟ್ಟಾ ಪ್ರತಿಭಾವಂತ ಕವಿ. ಮೇಲಾಗಿ ವೃತ್ತಿಯಿಂದ ಪತ್ರಕರ್ತ. ಹೀಗಾಗಿ ಏನಾದರೊಂದು ಹೊಸ ಹೊಸ ಪ್ರಯೋಗಗಳನ್ನು ಕಾವ್ಯ ಕ್ಷೇತ್ರದಲ್ಲಿಯೂ, ಪತ್ರಿಕಾ ರಂಗದಲ್ಲಿಯೂ ಮಾಡುತ್ತಲೇ ಇರುವ ಹವ್ಯಾಸ. ಅಂತೆಯೆ ಸುಬ್ಬಣ್ಣನ ಮನಸ್ಸಿನಲ್ಲಿ ಕವಿಪತ್ನಿಯರ ಸಂದರ್ಶನ ತೆಗೆದುಕೊಳ್ಳಬೇಕೆಂಬ ವಿಚಾರ ಹೊಳೆದೊಡನೆ ತನ್ನ ಸಹೋದ್ಯೋಗಿ ಅಣ್ಣಪ್ಪ ಕಟ್ಟಿಯವರ ಮುಂದೆ ''ಕವಿಗಳ ಹೆಂಡಿರ ಸಂದರ್ಶನ ಮಾಡಬೇಕೆಂದು ವಿಚಾರ ಮಾಡಿದ್ದೇನೆ, ನಿಮ್ಮ ಅಭಿಪ್ರಾಯ ತಿಳಿಸಿರಿ'' ಎಂದು ಕೇಳಿದ. ಕೂಡಲೆ ಅಣ್ಣಪ್ಪ ''ಬಹಳ ಒಳ್ಳೆಯ ವಿಚಾರವಿದು, ಸಂದರ್ಶನ ಏರ್ಪಡಿಸಿರಿ, ಕವಿಗಳಿಗೂ ಅವರ ಪತ್ನಿಯರಿಗೂ ಲಾಭವಾದೀತು'' ಎಂದು ಪ್ರೋತ್ಸಾಹ ನೀಡಿದರು. ಅಣ್ಣಪ್ಪನವರಂತೆ ಹೂಲಿ ಮಲ್ಲೇಶಿ, ವಿಜಯ ಕುಲಕರ್ಣಿ, ಮಧುರಾ ಹಿರೇಮಠ ಅವರೂ ಮುಕ್ತಮನಸ್ಸಿನಿಂದ ಪ್ರೋತ್ಸಾಹ ಕೊಟ್ಟರು ಮತ್ತು ಸಹಕಾರ ನೀಡಲು ಮುಂದೆಬಂದರು. ಸುಬ್ಬಣ್ಣನಿಗೆ ಇಷ್ಟೊಂದು ಬೆಂಬಲ ಸಿಕ್ಕಮೇಲೆ ಕೇಳುವದೇನು ! ಕೂಡಲೆ ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ ಕವಿಪತ್ನಿಯರ ಸಂದರ್ಶನಕ್ಕೆ ಆಹ್ವಾನ ನೀಡಿಯೇ ಬಿಟ್ಟರು.

ಅಮೂಲ್ಯವಾದ ಈ ಪ್ರಕಟನೆಯನ್ನು ಓದಿದ ಕವಿಪತ್ನಿಯರು ಸಂದರ್ಶನಕ್ಕೆ ಬರಲು (ಎಲ್ಲ ತರಹದ ಕವಿಪತ್ನಿಯರು) ತಮ್ಮ ಹೆಸರುಗಳನ್ನು ಸುಬ್ಬಣ್ಣನವರಲ್ಲಿ ನೋಂದಾಯಿಸಿಕೊಂಡರು. ಕವಿಗಳ ದೌರ್ಭಾಗ್ಯವೊ ಕವಿಪತ್ನಿಯರ ಸೌಭಾಗ್ಯವೊ ! ಒಟ್ಟಿನಲ್ಲಿ ನೂರಾರು ಕವಿಗಳ ಹೆಂಡಂದಿರು ತಮ್ಮ ಸುಖ ದುಃಖ ಹೇಳಿಕೊಳ್ಳಲು ಕಾದುಕುಳಿತರು. ಸಂದರ್ಶನದ ದಿನಾಂಕ ಮತ್ತು ವೇಳೆ ಹಾಗೂ ಸ್ಥಳವನ್ನು ತಿಳಿಸಿದೊಡನೆ ಸಭಾಭವನದಲ್ಲಿ ಚುಟುಕು ಕವಿಗಳ ಪತ್ನಿಯರು, ನವೋದಯ ಕವಿಗಳ ಸತಿಯರು, ನವ್ಯ ಕವಿಗಳ ನಲ್ಲೆಯರು, ಬಂಡಾಯ ಕವಿಗಳ ಭಾರ್ಯೆಯರು, ದಲಿತ ಕವಿಗಳ ಧರ್ಮಪತ್ನಿಯರು, ಮಹಾಕಾವ್ಯ ಬರೆದ ಮಹಾಕವಿಗಳ ಮನದನ್ನೆಯರು, ಆಧುನಿಕ ವಚನಗಳನ್ನು ರಚಿಸುವವರ ಕೈಹಿಡಿದ ಶರಣೆಯರು ಕಿಕ್ಕಿರಿದು ಸೇರಿ ಸಭೆಯಲ್ಲಿ ರೋಮಾಂಚನದ ಅಲೆಗಳನ್ನೇ ಎಬ್ಬಿಸಿದರು. ಮಕ್ಕಳ ಕವಿಪತ್ನಿಯರೂ ಸಂಬಂಧವಿಲ್ಲದವರಂತೆ ಹಾಜರಿದ್ದರು.



ಕವಿಗಳ ಕವನವನ್ನು ಮೊತ್ತಮೊದಲಿಗೆ ಕೇಳಲು ತಮ್ಮ ಕಿವಿಗಳನ್ನು ಮೀಸಲಿಟ್ಟ ಕವಿಪತ್ನಿಯರ ದಂಡು ಕಂಡು ಸುಬ್ಬಣ್ಣನವರಿಗೆ ಹಿಡಿಸಲಾರದಷ್ಟು ಸಂತೋಷ ಉಕ್ಕಿಹರಿಯತೊಡಗಿತು. ನಗರದ ಸಾವಿರಾರು ಸಾಹಿತ್ಯಾಸಕ್ತ ಜನರು ಕವಿಪತ್ನಿಯರ ಅನುಭವಗಳನ್ನು ಆಲಿಸಲು ಮಾಧುರಿ ದೀಕ್ಷಿತಳ ಪ್ರಕ್ಷುಟ ನೃತ್ಯವನ್ನು ನೋಡಲು ಸೇರಿದಂತೆ ಹಿಂಡು ಹಿಂಡಾಗಿ ಬಂದು ಸೇರಿಕೊಂಡರು. ಕೆಲವು ಕವಿಗಳಂತೂ ಗುಪ್ತವಾಗಿ ಬಂದು ಹಿಂದಿನ ಸಾಲುಗಳಲ್ಲಿ ತಲೆ ತಗ್ಗಿಸಿ ಕುಳಿತು, ತಮ್ಮ ಪತ್ನಿಯರು ಏನು ಹೇಳುತ್ತಾರೆಂದು ತಿಳಿಯಲು ಕಾದು ಕುಳಿತರು. ಎಷ್ಟೋ ಜನರು ಕವಿಗಳನ್ನು ಪ್ರತ್ಯಕ್ಷವಾಗಿ ನೋಡುವ ಭಾಗ್ಯ ನಮ್ಮ ಹಣೆಯಲ್ಲಿ ಬರೆದಿಲ್ಲ, ಅವರ ಹೆಂಡರನ್ನಾದರೂ ಕಾಣುವ ನಸೀಬವನ್ನು ನಮಗಿಂದು ದೇವರು ಕರುಣಿಸಿದನಲ್ಲ! ಎಂದು ತಮ್ಮ ನಿತ್ಯದ ವ್ಯವಹಾರ ವಹಿವಾಟನ್ನು ರದ್ದುಗೊಳಿಸಿ ಸಭೆಗೆ ಹಾಜರಾದರು. ತುಂಬಿದ ಸಭೆ ಕಂಡ ಸುಬ್ಬಣ್ಣ ಮೈಯಲ್ಲಿ ಗಾಳಿ ತುಂಬಿದವರಂತೆ ಹಾರಾಡುತ್ತ ಸಂದರ್ಶನವನ್ನು ಪ್ರಾರಂಭಿಸಿದ. ಪ್ರಾರಂಭದಲ್ಲಿ ಕಟ್ಟಿ ಅಪ್ಪಣ್ಣನವರು ಎದ್ದು ನಿಂತು ''ಸಂದರ್ಶನವು ಏರಿಕೆಯ ರೂಪದಲ್ಲಿ ಸಾಗಲಿ'' ಎಂದು ಸಲಹೆ ನೀಡಿದರು. ಸುಬ್ಬಣ್ಣನಿಗೆ ಕಟ್ಟಿಯವರ ಸೂಚನೆ ಸರಿ ಎನಿಸಿತು. ಪ್ರಾಸ್ತಾವಿಕವಾಗಿ ನಾಲ್ಕು ಮಾತುಗಳಿಂದ ಪ್ರಾರಂಭಿಸಿದ :

''ನನ್ನ ಆತ್ಮೀಯ ಕವಿಪತ್ನಿಯರೆ, ಇಂದು ನಮ್ಮ ನಿಮ್ಮೆಲ್ಲರಿಗೂ ಹಬ್ಬದ ದಿನವೆಂದೇ ಹೇಳಬಹುದು, ನಾನು ಕೇಳುವ ಪ್ರಶ್ನೆಗಳಿಗೆ ನಿರರ್ಗಳವಾಗಿ ಉತ್ತರಿಸಿ. ನಿಮ್ಮ ಕವಿ ಗಂಡಂದಿರಿಗೆ ಹೆದರುವ ಪ್ರಮೇಯವೇ ಇಲ್ಲ. ನಿಮಗಾದ ಅನುಭವಗಳನ್ನು ಸಾರ್ವಜನಿಕವಾಗಿ ನೀವು ಅಭಿವ್ಯಕ್ತಪಡಿಸಿದರೆ ನಿಮ್ಮ ಕೈಹಿಡಿದ ಕವಿ ತನ್ನ ಕಾವ್ಯ ರಚನೆಯನ್ನು ಸುಧಾರಿಸಿಕೊಳ್ಳಬಹುದು. ಈಗ ನಾನು ಮೊತ್ತ ಮೊದಲಿಗೆ ಚುಟುಕು ಕವಿಪತ್ನಿಯರನ್ನು ಆಹ್ವಾನಿಸುತ್ತೇನೆ. ಏಕೆಂದರೆ ಕಾವ್ಯಕ್ಷೇತ್ರದಲ್ಲಿ ಚುಟುಕು ಕವನಗಳೇ ಚಿಕ್ಕ ಗಾತ್ರದವು. ಆದುದರಿಂದ ಚುಟುಕು ಕವಿಪತ್ನಿಯರು ದಯವಿಟ್ಟು ಮುಂದೆ ಬನ್ನಿ'' ಎಂದು ಸುಬ್ಬಣ್ಣ ಹೇಳಿದೊಡನೆ ಗುಂಪು ಗುಂಪಾಗಿ ಚುಟುಕು ಕವಿಪತ್ನಿಯರು ಧಾವಿಸಿಬಂದರು. ರಾಜ್ಯದಲ್ಲಿ ಚುಟುಕು ಸಾಹಿತ್ಯ ಪರಿಷತ್ತು ಹುಟ್ಟಿಕೊಂಡ ಮೇಲಂತೂ ಚುಟುಕು ಕವಿಗಳು ಕಾಂಗ್ರೆಸ್ ಮೆದೆಯಂತೆ ಮೈದಾಳಿಕೊಂಡಿದ್ದರು. ಸುಬ್ಬಣ್ಣ ಕುತೂಹಲದಿಂದ ಪ್ರಶ್ನಿಸಿದರು :

''ನಿಮ್ಮ ಹೆಸರೇನು ?''

''ಮೋಟಮ್ಮ.''

''ನಿಮ್ಮ ಪತಿರಾಯರು ಬರೆಯುವ ಚುಟುಕುಗಳ ಬಗ್ಗೆ ನಿಮಗೆ ಏನು ಅನಿಸುತ್ತಿದೆ ?''

''ನೋಡಿ ಸಾರ್, ನಾನು ಇವರನ್ನು ಮದುವೆಯಾಗಿ ಪಡಬಾರದ ಕಷ್ಟಪಡತಾ ಇದ್ದೀನಿ. ಇವರ ಚುಟುಕುಗಳು ಯಾವಾಗಲೂ ನನ್ನನ್ನೇ

ಗುರಿ ಇಟ್ಟುಕೊಂಡು ಕಟಕಿ ಯಾಡುತ್ತಿವೆ. ಬೇರೆ ಯಾರೂ ಇವರಿಗೆ ಕಾಣಿಸುವುದೇ ಇಲ್ಲ. ನಾನು ಅಂಥಾದ್ದು ಏನು ತಪ್ಪು ಮಾಡಿದ್ದೀನಿ ?''

''ಮೇಡಮ್, ಒಂದೆರಡು ಉದಾಹರಣೆ ಕೊಡ್ತಿರಾ ?''

''ಸುಬ್ಬಣ್ಣೋರೆ, ಈ ಚುಟುಕು ಕೇಳಿ, ಹೇಗೆ ಬರೆದಿದ್ದಾರೆ ನೀವೇ ನೋಡಿ :

ದಿನಾಲು ಕರಿತಾಳೆ ಉದ್ದಿನ ವಡೆ
ಇಳಿಬಿಟ್ಟುಕೊಂಡು ಉದ್ದನ ಜಡೆ

''ಈ ಚುಟುಕು ಕೇಳಿ ನಾನು ಸಿಟ್ಟಿಗೆದ್ದು ನನ್ನ ಕೂದಲನ್ನೇ ಕತ್ತರಿಸಿಕೊಂಡೆ. ಆಗ ಮತ್ತೆ ಹುಟ್ಟಿಕೊಂಡಿತು ನೋಡಿ ಇನ್ನೊಂದು ಚುಟುಕು :

ಸಂಜೆ ಮುಂದೆ ಕರಿತಾಳೆ ಬೋಂಡಾ ವಡೆ
ಚಂದ ಕಾಣಸ್ತಾಯಿಲ್ಲ ಮೊಂಡು ಜಡೆ.

ಆಗ ಸುಬ್ಬಣ್ಣ ಉಕ್ಕಿಬಂದ ನಗೆಯನ್ನು ಬಿಗಿಹಿಡಿದು ಕೇಳಿದ :

''ಅಲ್ಲ ಮೇಡಮ್, ನಿಮ್ಮ ಕೂದಲನ್ನು ಜಡೆ ಹಾಕದೆ ಹಾಗೇಬಿಡ್ರಿ.''

''ಅಯ್ಯೋ ಸುಬ್ಬಣ್ಣವರೆ, ನೀವು ಹೇಳಿದಹಾಗೆ ಮಾಡಿದಾಗ ಮತ್ತೊಂದು ಚುಟುಕು ಎಗರಿಬಂತು :

ಜಿಟ ಜಿಟ ಮಳೆಯಾಗ ಓಣಿ ತುಂಬ ಹುದಲೂ
ಛತ್ರಿಹಾಂಗ ತಿರಗತಾವು ನನ್ನಾಕಿ ಕೂದಲೂ.

''ಅಲ್ರಿ ಮೇಡಮ್, ನಿಮ್ಮ ಕೂದಲನ್ನು ನಿಮ್ಮ ಕವಿ ಪತಿ ಇಷ್ಟೊಂದು ಚನ್ನಾಗಿ ವರ್ಣಿಸಿದರೆ ನಿಮಗೇಕೆ ಸಿಟ್ಟು ಬರುತ್ತೆ ? ಈ ಭಾಗ್ಯ ಯಾರಿಗಿದೆ ಹೇಳಿ ?''

''ಸುಬ್ಬಣ್ಣೋರೆ, ಈ ಚುಟುಕುಗಳನ್ನು ಹೇಗಾದರೂ ಮಾಡಿ ಸಹಿಸಿಕೊಳ್ಳಬಹುದು. ಈ ಚುಟುಕು ಹೆಂಗೆ ಸಹಿಸಿಕೊಳ್ಳಬೇಕು ಹೇಳಿ :

ವೀರೇಂದ್ರ ಹೆಗಡೆ ಅವರದು ಒಂದು ಡೆಂಟಲ್
ಧಾರವಾಡದೊಳಗೆ ಒಂದು ಮೆಂಟಲ್
ನಮ್ಮ ಮನೆಯಾಕೆ ಒಂದು ಕ್ವಿಂಟಲ್

ಎಂದು ಹೇಳುತ್ತ ಮೋಟಮ್ಮ ಬೋರಾಡಿ ಅಳಹತ್ತಿದಳು. ಹಿಂದಿನ ಭಾಗದಲ್ಲಿ ತಲೆ ಮರೆಸಿಕೊಂಡು ಕುಳಿತಿದ್ದ ಮೋಟಮ್ಮನ ಪತಿ ಚುಟುಕು ಕವಿ ಧರ್ಮಣ್ಣ ಮಾರಿಮುಚ್ಚಿಕೊಂಡು ಪರಾರಿಯಾಗಿಬಿಟ್ಟಿದ್ದ.

ಸಂದರ್ಶನಕ್ಕೆ ಬಂದ ಹಲವಾರು ಚುಟುಕು ಕವಿಪತ್ನಿಯರು ತಮ್ಮ ತಮ್ಮ ಗಂಡಂದಿರನ್ನು ಹಿಗ್ಗಾಮುಗ್ಗಾ ಹೀಯಾಳಿಸುತ್ತ ''ಬರಿಯೊ ತಾಕತ್ತಿದ್ದರೆ ದೊಡ್ಡ ಕವನ ಬರೆಯಲಿ, ಶೌಚಕ್ಕೆ ಹೋದಾಗ ಒಂದು ಚುಟುಕು ಕಟ್ಟೋದು, ಒಂದಕ್ಕೆ ಮಾಡುವಾಗ ಎರಡು ಸಾಲು ಬರೆಯೋದು, ಹೀಗೆ ಪುಟಾಣಿ ಬೆಲ್ಲ ತಿನ್ನೋ ಸಣ್ಣ ಹುಡುಗರಂತೆ ಬರೆದರೆ ಕವಿ ಅಂತಾರೇನು ? ಹೋಳಿಗಿ ತುಪ್ಪ ಉಂಡ ಹಾಗೆ ದೊಡ್ಡ ಕವಿಯಾಗಿ ಜಿಗುಟುತನ ತೋರಿಸಲಿ'' ಎಂದು ಎಲ್ಲ ಚುಟುಕು ಕವಿ ಪತ್ನಿಯರು ಸುಬ್ಬಣ್ಣನಿಗೆ ಒಕ್ಕೊರಲಿನಿಂದ ಆಗ್ರಹಪಡಿಸಿದರು.

ನಂತರ ಸುಬ್ಬಣ್ಣ ಆಧುನಿಕ ವಚನಕಾರರ ಪತ್ನಿಯರನ್ನು ಸಂದರ್ಶನಕ್ಕೆ ಆಹ್ವಾನಿಸಿ ಪ್ರಶ್ನಿಸಿದ :

''ಅಮ್ಮಾ ಅವರೆ, ನಿಮ್ಮ ಪತಿ ವಚನಗಳನ್ನು ರಚಿಸುತ್ತಾ ಇರುವುದು ನಿಮಗೆ ಹೇಗೆ ಅನಿಸುತ್ತೆ ?''

''ನೋಡಿ ಸುಬ್ಬಣ್ಣೋರೆ, ವಚನ ಬರಿಯೋ ಗಂಡಸರೆಲ್ಲ ಅರವತ್ತು ವರ್ಷ ದಾಟಿದವರೇ ಉಂಟು. ಅವರಿಗೆ ನಮ್ಮ ವರ್ಣನೆ ಮಾಡಲಿಕ್ಕೆ ಈಗ ಸಾಧ್ಯವೇ ಇಲ್ಲ. ಅದೂ ಅಲ್ಲದೆ ನಮ್ಮಲ್ಲಿಯೂ ವರ್ಣಿಸಿಕೊಳ್ಳಲಿಕ್ಕೆ ಏನು ಉಳಿದಿದೆ ಹೇಳಿ ? ಆದರೂ 'ಅದು ನೋಡಾ ಅಭಿನವ ಸಿದ್ಧ ಇದು ನೋಡಾ ಸ್ವತಂತ್ರ ಸಿದ್ಧ, ಎಂದು ಬರೆದು ಓದಲಿಕ್ಕೆ ಬರ್ತಾರೆ. ಆಗ ನಾವು 'ಯಾವದೂ ಬೇಡ ಹೋಗೊ ಮರುಳ ಪೆದ್ದ' ಎಂದು ನೋವು ಬಂದ ಮಂಡಿ ಒತ್ತಿಕೊಳ್ಳುತ್ತ ಮಲಗಿಬಿಡ್ತೇವೆ.'' ಸುಬ್ಬಣ್ಣ ಇವರ ಅನುಭವ ಕೇಳಿ ನಗುತ್ತ ''ತಾಲಿ ಬಜಾವ್ತೊ ತಾಲಿ ಬಜಾವ್ತೊ'' ಎಂದು ಹೇಳುತ್ತ ''ಮುಂದಿನ ಸರತಿ ನವ್ಯೋದಯ ಕವಿಗಳ ಪತ್ನಿಯರದು. ದಯಮಾಡಿ ಬನ್ನಿ'' ಎಂದೊಡನೆ ಕೇವಲ ನಾಲ್ಕಾರು ಪತ್ನಿಯರು ಬಹಳ ಹಿಗ್ಗಿನಿಂದ ನಗುನಗುತ್ತಾ ಬಂದರು. ಪಳೆಯುಳಿಕೆಯಂತೆ ಉಳಿದಿದ್ದ ಈ ಮುದಿ ವಯಸ್ಸಿನ ಕವಿ ಪತ್ನಿಯರನ್ನು ಪ್ರಶ್ನಿಸುತ್ತ...




''ಮೇಡಮ್ನೋರೆ, ನಿಮ್ಮ ಕವಿ ಪತಿಗಳು ನವೋದಯದ ಜಾಡಿನಲ್ಲಿ ಕವನ ರಚಿಸುತ್ತಾರೆ. ಆ ಕವನಗಳ ಬಗೆಗೆ ನಿಮ್ಮ ಅನಿಸಿಕೆ ಏನು ?'' ಅವರೆಲ್ಲರೂ ಒಮ್ಮೆಲೆ ಮಾತಾಡ ತೊಡಗಿದರು :

''ಸುಬ್ಬಣ್ಣೋರೆ, ನಾವು ನವೋದಯ ಕವಿಗಳ ಪತ್ನಿಯರಾದದ್ದು ನಮ್ಮ ಪೂರ್ವ ಜನ್ಮದ ಪುಣ್ಯ, ನಮ್ಮ ಗಂಡಂದಿರು ನಮ್ಮ ಮೂಗು, ನಮ್ಮ ಕಣ್ಣು, ಕಿವಿ, ನಮ್ಮ ಕೇಶರಾಶಿ, ನಮ್ಮ ಸಪೂರ ಕೈಗಳಲ್ಲಿ ಹೊಳೆಯುವ ಬಳೆಗಳು, ಬೆಂಡಿಕಾಯಿಯಂತೆ ಕಾಣುವ ನಮ್ಮ ಬೆರಳು, ಹೋಳಿಗೆಯಂತೆ ಮೆತ್ತಗಿರುವ ನಮ್ಮ ಅಂಗೈ, ಬಾಯಿ ಹಲ್ಲು, ತುಟಿ, ಸೀರೆ ಜಂಪರುಗಳನ್ನು ಸಾದ್ಯಂತವಾಗಿ ೫೦ ವರ್ಷಗಳಿಂದ ವರ್ಣಿಸುತ್ತ ಕವನ ರಚನೆ ಮಾಡ್ತಾ ಬಂದಿದಾರೆ. ಅವು ಸೊಟ್ಟಾಪಟ್ಟಾ ಇದ್ರೂ ಸಹ ಅಂದವಾಗಿ ನೀಟಾಗಿವೆ ಅಂತಾ ಹೊಗಳತಾರೆ. ಹೀಗಾಗಿ ನಮ್ಮಲ್ಲಿ ಒಂದು ತರ ಥ್ರಿಲ್ ಇರುತ್ತೆ. ಅದಕ್ಕಾಗಿ ಅವರನ್ನು ಪ್ರೀತಿಯಿಂದ ಜೋಪಾನಮಾಡ್ತೇವಿ. ಒಮ್ಮೊಮ್ಮೆ ಇವರು ವರ್ಣನೆ ಮಾಡಿದ್ದು ನನ್ನನ್ನೊ, ಅಥವಾ ಬೇರೆ ಯಾವುಳನ್ನೊ, ಅಂತಾ ಸಂಶಯ ಬರುತ್ತೆ. ಆದ್ರೂ ಕಣ್ಗಾವಲಿನಲ್ಲಿ ಚೆಕ್ ಮಾಡ್ತಾ ಇರ್‍ತೀವಿ. ಕವಿಗೋಷ್ಠಿಗೆ ಒಬ್ಬೊಬ್ಬರನ್ನೇ ಕಳಿಸೊದಿಲ್ಲ, ನಾವೂ ಬೆನ್ನು ಹತ್ತುತ್ತೇವೆ.'' ಸುಬ್ಬಣ್ಣ ಆನಂದದಿಂದ '' ಒಂದೆರಡು ಸ್ಯಾಂಪಲ್ ಹೇಳ್ತಿರಾ ?'' ಎಂದು ಕೇಳಿದ.

ನಾಲ್ವತ್ತು ವರ್ಷದ ಹಿಂದೆ ಮದುವೆಯಾದಾಗ ಗಂಡ ಬರೆದ ಕವನವನ್ನು ನವೋದಯ ಕವಿಪತ್ನಿ ಒಬ್ಬಳು ಎದ್ದುನಿಂತು ಹೆಮ್ಮೆಯಿಂದ ಹೇಳಿದಳು !

ಮೃದುವಾದ ಹೆಜ್ಜೆ ಕಾಲಲ್ಲಿ ಗೆಜ್ಜೆ
ಮೈಭಾರ ಇಲ್ಲ ಒಜ್ಜೆ
ತುಳುಕಿಸುವಿ ಲಜ್ಜೆ ನೀ ಹೂವ ಹೂಜೆ
ಬಳಿಯಿರಲು ಹೊಳೆವ ಕಾಜೆ

''ಆ ಹಾ ಹಾ ಹಾ, ಎಂಥ ವರ್ಣನೆ ಮೇಡಮ್ ಇದು ! ಇಂಥ ಕವನ ರಚಿಸಬೇಕೆಂದರೆ ನನಗೆ ಛಾನ್ಸೆ ಇಲ್ಲ. ಏನು ಮಾಡೋದು ! ನೀವು ಪುಣ್ಯವಂತರು'' ಎಂದು ಸುಬ್ಬಣ್ಣ ಬಾಯಲ್ಲಿ ಜುಳು ಜುಳು ಬಂದ ನೀರನ್ನು ಹುಣಸೆಕಾಯಿ ತಿಂದ ಬಸುರಿ ಹೆಂಗಸಂತೆ ''ಪ್ಚ ಪ್ಚ'' ಅಂತಾ ಬಾಯಿ ಚಪ್ಪರಿಸಿ ನುಂಗಿದ.

ಮತ್ತೊಬ್ಬ ವಿಜಾಪುರದ ಕಡೆಯಿಂದ ಬಂದ ನವೋದಯ ಕವಿಯ ವೃದ್ಧ ಪತ್ನಿ ಎದ್ದು ನಿಂತು ತನ್ನನ್ನು ತನ್ನ ಗಂಡ ವರ್ಣಿಸಿದ ನುಡಿ ಹೇಳತೊಡಗಿದಳು :

ದೃಷ್ಟಿ ದೃಷ್ಟಿಗೆ ತಾಕಿ ನಸುವೆ ಕೈ ಕೈ ಸೋಂಕಿ
ಎದೆಯಲ್ಲಿ ಜುಮ್ಮೆನಲು ರೋಮಾಂಚನ
ಲುಟು ಲುಟುನೆ ನಡೆದಾಗ ಕಿರುಗೆಜ್ಜೆ ಸಪ್ಪಳವು
ಹೆಜ್ಜೇನು ಸವಿದಂತೆ ಮಧು ಸಿಂಚನ.

ಈ ನುಡಿ ಕೇಳಿ ಸುಬ್ಬಣ್ಣ ''ಮೇಡಮ್, ಇದು ಮದುವೆಯಾಗೋದಕ್ಕಿಂತ ಮೊದಲೆ ಬರೆದ ಕವನ ಇರಬೇಕಲ್ಲವೆ ?''

''ಹೌದು ಹೌದು ಸುಬ್ಬಣ್ಣ, ನೀವು ಹೇಳೋದು ನಿಜ. ಹಬ್ಬಕ್ಕೆ ಬಂದಾಗ ಬರೆದಿದ್ದರು. ಅವರ ಹತ್ತಿರ ನಾನು ಆಗಾಗ ಸ್ವಲ್ಪ ಸಮಯ ಸುಳಿಯುತ್ತಿದ್ದಾಗ ಬರೆದದ್ದು'' ಎಂದು ಹದಿವಯದ ಲಜ್ಜೆ ಮುಖದಲ್ಲಿ ತಂದರು. ಮುಂದಿನ ಸಂದರ್ಶನಕ್ಕೆ ರೆಡಿಯಾಗಿ ನಿಂತಿದ್ದ ನವ್ಯ ಕವಿಗಳ ಪತ್ನಿಯರ ಕಡೆ ಸುಬ್ಬಣ್ಣ ಹೊರಳಿ ''ಮೇಡಮ್ ಅವರೆ, ನವೋದಯ ಕವಿಗಳ ಕವನಗಳು ನಿಮಗೆ ಹೇಗೆ ಅನಸ್ತಾಯಿವೆ ?'' ಎಂದು ಕೇಳಿದ. ಆಗ ನವ್ಯ ಕವಿ ಪತ್ನಿಯೊಬ್ಬಳು ಎದ್ದುನಿಂತು,

''ನವೋದಯ ಕವಿಗಳ ಕೈ ಹಿಡಿದ ಹೆಣ್ಣುಗಳ ನಸೀಬದ ಮುಂದೆ ನಮ್ಮ ನಸೀಬ ಏತಕ್ಕೂ ಬೇಡ ಸುಬ್ಬಣ್ಣೋರೆ, ವರ್ಣಿಸಿಕೊಳ್ಳಲಿಕ್ಕೂ ಪೂರ್ವಜನ್ಮದ ಪುಣ್ಯ ಮಾಡಿರಬೇಕು,'' ಎಂದು ಕೈ ಕೈ ಹಿಚುಕಿಕೊಂಡಳು.

ಇದನ್ನು ನೋಡಿದ ಸುಬ್ಬಣ್ಣ ಕನಿಕರಪಟ್ಟು ಸಂತೈಸಿದ. ನವೋದಯ ಕವಿಯ ಪತ್ನಿಯೊಬ್ಬಳು ನವ್ಯ ಕವಿ ಪತ್ನಿಯನ್ನು ಸಮಾಧಾನ ಪಡಿಸುತ್ತ ''ಈಗೆಲ್ಲಿ ಅಂತಹ ಸ್ಫೂರ್ತಿ ಬರಬೇಕಮ್ಮ? ಮಗ್ಗಲು ನಿಂತರೆ ಮುಖ ತಿರುವುತಾರೆ, ಮುಟ್ಟಿದರೆ ಹಾವು ತುಳಿದಂತೆ ಹಾರಿಬೀಳ್ತಾರೆ. ಹೋತಮ್ಮ ಆ ಕಾಲ'' ಎಂದು ಮ್ಲಾನವದನಳಾಗಿ ಕುಳಿತಾಗ ಸುಬ್ಬಣ್ಣ ''ನವೋದಯ ಕವಿಗಳಿಗೆ ಜಯವಾಗಲಿ'' ಎಂದು ಘೋಷಿಸುತ್ತ ಮುಂದಿನ ಪಾಳೆ ನವ್ಯ ಕವಿಗಳ ಪತ್ನಿಯರದು ಎಂದು ಸಾರಿದ.

ನವ್ಯ ಕವಿಗಳ ಪತ್ನಿಯರು ಗಂಭೀರ ವದನೆಯರಾಗಿ ಮುಂದೆ ಬಂದು ನಿಂತರು. ಆಗ ಸುಬ್ಬಣ್ಣ ''ಮೇಡಮ್ ಅವರೆ, ನೀವು ನವ್ಯ ಕವಿಪತ್ನಿಯರು. ಅವರ ಕವನಗಳನ್ನು ಕೇಳಿದಾಗ ನಿಮಗೆ ಹೇಗೆ ಅನಿಸುತ್ತೆ?'' ಎಂದು ಕೇಳಿದ.

''ಸುಬ್ಬಣ್ಣೋರೆ, ನಮ್ಮ ಕವಿಗಳಿಗೆ ಸಿಡುಕುತನ ಬಹಳ. ಇವರಿಗೆ ಶಬ್ದ ಪಾವಿತ್ರ್ಯತೆ ಇರೋದು ಕಡಿಮೆ. ಇದ್ದದನ್ನು ಇದ್ದಂಗೆ ಹೇಳ್ತಾರೆ. ರಾಜಕೀಯ ವ್ಯಕ್ತಿಗಳನ್ನು ಜಾಲಾಡ್ತಾರೆ. ಪ್ರೇಮವನ್ನು ಬೆತ್ತಲೆಯಾಗಿ ಅಭಿವ್ಯಕ್ತಿಗೊಳಿಸುತ್ತಾರೆ. ಇವರು ಮದುವೆಯಾದ ಮೇಲೆ ಹೆಂಡರನ್ನು ಕುರಿತು ಬರೆದದ್ದಂತೂ ಇಲ್ಲವೇ ಇಲ್ಲ. ಗೇಯ ಗೀತೆಗಳನ್ನು ರಚಿಸಲಿಕ್ಕೆ ಸಾಧ್ಯವೇ ಇಲ್ಲ. ಎಲ್ಲೋ ಮಾನ್ಯ ಕಣವಿ ಅಂಥವರು, ಜಿ. ಎಸ್. ಶಿವರುದ್ರಪ್ಪ ಅಂಥವರು, ಚಂಪಾ ಅಂಥವರು ಬೆರಳೆಣಿಕೆಯಷ್ಟು ಕವಿಗಳು ಎರಡೂ ನಿಟ್ಟಿನಲ್ಲಿ ಸಾಧಿಸಿಕೊಂಡಿದ್ದಾರೆ. ಆದರೆ ಕವಿಗೋಷ್ಠಿಗಳಲ್ಲಿ ಇವರದೇ ಮೆಜಾರ್ಟಿ. ಒಂದೊಂದೇ ಸಾಲುಗಳನ್ನು ಕೈಬೆರಳು ಮುರಿಯುತ್ತ ಎರಡು ಮೂರು ಸಲ ಓದಿ ಕೇಳುಗರ ತಲೆಗೆ ಚಿಟ್ಟು ಹಿಡಿಸಿಬಿಡುತ್ತಾರೆ. ಹೀಗಂತಾ ನಾವು ಮನೆಯಲ್ಲಿ ಇವರಿಗೆ ಕವನ ಓದಲಿಕ್ಕೆ ಛಾನ್ಸೆ ಕೊಡೋದಿಲ್ಲ. ಓದಿದರೂ ನಮಗೆ ಅರ್ಥವೇ ಆಗೋದಿಲ್ಲ. ಏನಿದ್ರೂ ಇವರ ಆಟ ಹೊರಗೇ.''

''ಮೇಡಮ್ ಅವರೆ, ನಿಮ್ಮ ನವ್ಯ ಕವಿಯವರ ವೈಯಕ್ತಿಕ ಹವ್ಯಾಸಗಳು ಏನಾದರೂ ಇದ್ದರೆ ತಿಳಿಸುತ್ತೀರಾ?''

''ಅಯ್ಯೋ! ಸುಬ್ಬಣ್ಣೋರೆ, ಏನು ಹೇಳೋದು ಅವ್ರಗಳ ಬಗ್ಗೆ! ಬಿಟ್ರೂ ಬಿಡದೆ ಸಿಗರೇಟ ಸೇದ್ತಾರೆ, ಗುಂಡು ಹಾಕೋದಂತು ಮಾಮೂಲು. ಕವಿಗೋಷ್ಠಿಗೆ ಹೋದರಂತೂ ಮುಗೀತು. ನಾಲ್ಕಾರು ಕವಿಗಳು ಕೂಡಿದರೆ ನಿಜವಾಗಿಯೂ ಅಲ್ಲಿ ಕವಿಗೋಳು ಸೃಷ್ಟಿಯಾಗುತ್ತೆ. ಬಾರು ಎಗರಿ ನೆಗೆದು ಬೀಳೋಹಾಗೆ ಕಿರಚಾಡ್ತಾರೆ. ಆಮಂತ್ರಿಸಿದವರು ಬಿಲ್ಲುಕೊಡುವದಾದರೆ ಬಿಡದೆ ಸಿಕ್ಕಾಪಟ್ಟೆ ಕುಡಿದು ಮಾನ ಮರ್ಯಾದೆ ಹಾಳು ಮಾಡಿಕೊಂಡು ಮನೆಗೆ ಬರುತ್ತಾರೆ. ನಾನು ಎಷ್ಟೋ ಸಲ ಈ ಚಟ ಕಡಿಮೆ ಮಾಡ್ರಿ ಅಂತಾ ಗೋಗರೆದರೂ ನವ್ಯ ಕವಿಯ ಲಕ್ಷಣಾನೇ ಇದು ಎಂದು ಬಾಯಿ ಮುಚ್ಚಿಸುತ್ತಾರೆ.''

''ಆಯ್ತು ಆಯ್ತು ಮೇಡಮ್, ನಿಮಗೆ ಧನ್ಯವಾದಗಳು'' ಎಂದು ಹೇಳಿ ಸುಬ್ಬಣ್ಣ ಬಂಡಾಯ ಕವಿ ಪತ್ನಿಯರನ್ನು ಆಮಂತ್ರಿಸಿದೊಡನೆ ದಲಿತ ಕವಿಪತ್ನಿಯರೂ ಎದ್ದು ನಿಂತು ನಾವೂ ಅವರೂ ಅಕ್ಕ-ತಂಗಿಯರು, ಬಂಡಾಯ ಕವಿ ಮತ್ತು ದಲಿತ ಕವಿ ಇಬ್ಬರೂ ಅಣ್ಣ ತಮ್ಮರು ಇದ್ದಂಗೆ'' ಎಂದು ಮುಂದೆ ಬಂದರು.

''ಹೇಳಿ ಮೇಡಮ್, ಬಂಡಾಯ ಹಾಗೂ ದಲಿತ ಕವಿಗಳ ಪತ್ನಿಯರಾಗಿ ನೀವು ಏನೇನು ಅನುಭವ ಪಡೆದಿದ್ದೀರಿ?''

''ನೋಡಿ ಸುಬ್ಬಣ್ಣೋರೆ, ನಮ್ಮ ಬಂಡಾಯ ಕವಿಗಳು ಮೂಢ ನಂಬಿಕೆಗಳನ್ನು ಅಂಥ ಸಂಪ್ರದಾಯಗಳನ್ನು ವಿರೋಧಿಸುತ್ತಾರೆ. ನಮಗೆ ಮನೆಯಲ್ಲಿ ಪೂಜೆ ಪುನಸ್ಕಾರ ಮಾಡಲು ಪುರಸ್ಕರಿಸುವದಿಲ್ಲ. ಸ್ವಾಮಿಗಳ ಕಾಲಿಗೆ ನಮಸ್ಕಾರ ಮಾಡಬೇಡ ಎಂದು ಹೇಳುತ್ತಾರೆ. ನಾವೇ ಬುದ್ಧಿಹೇಳಿ ಎಷ್ಟೋ ಜನ ವಿಶ್ವವಿದ್ಯಾಲಯದ ಪ್ರೊಫೆಸರುಗಳು ನಿಮ್ಮಷ್ಟೇ ಕಲಿತು ದೊಡ್ಡ ಹುದ್ದೆಯಲ್ಲಿದ್ದರೂ ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಹಾಕುವದಿಲ್ಲೇನು, ಎಂದು ಎಳೆದುಕೊಂಡು ಹೋಗಿ ಸ್ವಾಮಿಗಳ ಮುಂದೆ ನಿಲ್ಲಸ್ತೇವೆ. ಆಗ ಬೇಕು ಬೇಡಾ ಮಣಿದು ನಮಸ್ಕರಿಸಿದಂತೆ ಮಾಡುತ್ತಾರೆ. ಸ್ವಾಮಿಗಳಿಗೆ ಪೂರ್ಣ ಸರೆಂಡರ್ ಆಗಿ ನಮಸ್ಕಾರ ಬರಲಿಲ್ಲ ಅಂತಾ ತಿಳಿದುಬಿಡುತ್ತದೆ. ಮನಸ್ಸಿನಲ್ಲಿ ಸಿಟ್ಟಾಗಿ ಕೃತಕ ಆಶೀರ್ವಾದ ಮಾಡಿ ಕೂಡಲೂ ಹೇಳದೆ ಬೇರೆ ಕಡೆ ನೋಡುತ್ತಾರೆ. ಇವರ ವೈಯಕ್ತಿಕ ಹವ್ಯಾಸಗಳಂತೂ ನವ್ಯ ಕವಿಗಳಿಗಿಂತಲೂ ಒಂದು ಕೈ ಮೇಲು. ಆದರೆ ಸಮಾನತೆ ಬಯಸುತ್ತ ಮೂಢನಂಬಿಕೆ ವಿರೋಧಿಸುತ್ತ ಸಜ್ಜನತೆ, ಮಾನವೀಯತೆ ಬಯಸುವದು ಇವರ ಹೆಗ್ಗಳಿಕೆ.''



ಸುಬ್ಬಣ್ಣ ಎರಡು ಪಂಗಡದವರನ್ನೂ ಅಭಿನಂದಿಸುತ್ತ ಕೊನೆಯದಾಗಿ ಮಹಾ ಕವಿಗಳ ಪತ್ನಿಯರನ್ನು ಸಂದರ್ಶನಕ್ಕೆ ಕೂಗಿದಾಗ ಇಲ್ಲಿಯವರೆಗೂ ಸಹಿಸಿಕೊಂಡು ಕುಳಿತ ಮಕ್ಕಳ ಕವಿ ಪತ್ನಿಯರು ನೀರು ಬಾರದ ಬಡಾವಣೆಯಲ್ಲಿ ಮಹಿಳೆಯರು ಬರಿಗೊಡ ತಕ್ಕೊಂಡು ಮೇಯರ ಮೇಲೆ ಏರಿಹೋದಂತೆ ಸುಬ್ಬಣ್ಣನ ಮೇಲೆ ಕಂಗಾಲಾಗಿ ಏರಿಹೋದರು. ಅವರಲ್ಲಿ ಒಬ್ಬಾಕೆ ''ಯಾಕೋ ಸುಬ್ಬಣ್ಣ, ನಮ್ಮ ಗಂಡರು ಕವಿಗಳಲ್ಲವೇನು? ಮಕ್ಕಳ ಕವನಗಳು ಕವನಗಳಲ್ಲವೇನು? ಸಾಹಿತ್ಯ ಪರಿಷತ್ತಿನವರು, ಸಾಹಿತ್ಯ ಅಕ್ಯಾಡಮಿಯವರು ನಮ್ಮ ಮಕ್ಕಳ ಕವಿಗಳನ್ನು ಅಸ್ಪೃಶ್ಯರಂತೆ ಕಾಣುವ ಹಾಂಗೆ ನೀನೂ ನಮ್ಮನ್ನು ಮತ್ತು ನಮ್ಮ ಪತಿಯರ ಕಾವ್ಯ ರಚನೆಯನ್ನು ತಿರಸ್ಕಾರ ಮಾಡ್ತಿಯಾ? ನಿನ್ನ ನೋಡೆ ಬಿಡ್ತಿವೆ ಒಂದು ಕೈ'' ಎಂದಾಗ ಮಕ್ಕಳ ಕವಿ ಪತ್ನಿಯರ ಕೋಪ ಕಂಡು ಸುಬ್ಬಣ್ಣ ಬೆವೆತು, ಕಂಗಾಲಾಗಿ ಹೋದ. ದೀನ ಸ್ವರದಲ್ಲಿ–

''ತಪ್ಪಾಯ್ತು ತಪ್ಪಾಯ್ತು ಶಿಶು ಕವಿ ಪತ್ನಿಯರೆ, ಮಕ್ಕಳ ಕವಿಗಳು ಕಾವ್ಯ ಸೌಧಕ್ಕೆ ಬುನಾದಿ ಇದ್ದಂತೆ. ಅದರಲ್ಲಿ ನಿಮ್ಮ ಪಾಲೂ ಸಂದಾಯವಾಗಿರುತ್ತದೆ. ಬನ್ನಿಯಮ್ಮ ಬನ್ನಿ'' ಎಂದು ಸುಬ್ಬಣ್ಣ ಮಕ್ಕಳ ಕವಿಪತ್ನಿಯರನ್ನು ಕರೆದು,

''ಹೇಳಿ ತಾಯಿ, ನಿಮ್ಮ ಪತಿ ಮಕ್ಕಳನ್ನೇ ಕುರಿತು ಏಕೆ ಪದ್ಯ ಬರಿತಾರೆ?'' ಎಂದ.

''ನೋಡಿ ಸುಬ್ಬಣ್ಣಾವ್ರೆ, ನಮ್ಮ ಗಂಡಂದಿರು ಕನ್ನಡ ಶಾಲೆ ಮಾಸ್ತರು, ಶಾಲೆಯಲ್ಲೂ ಮಕ್ಕಳು ಗಂಟುಬೀಳುತ್ತವೆ. ಮನೆಯಲ್ಲೂ ಮಕ್ಕಳು ಗಂಟು ಬಿದ್ದಿರ್ತಾವೆ. ಅದಕ್ಕೆ ಮಕ್ಕಳ ಕವನ ಬರೀತಾರೆ.''

''ಆ ಕವನಗಳನ್ನು ಕೇಳಿ ನಿಮಗೆ ಹೇಗೆ ಅನಿಸುತ್ತೆ?''

''ಅದರಲ್ಲೇನು ಮಹಾ ಇದೆ? ಸುಬ್ಬಣ್ಣ, ಮಕ್ಕಳ ಜೊಲ್ಲು, ಮಕ್ಕಳ ಹಲ್ಲು, ಅವರು ತೊಡುವ ಚಡ್ಡಿ, ಪಾಟಿ, ಆಟಿಗೆ ವಸ್ತು ಕುರಿತು ಬರೆಯುತ್ತಾರೆ. ಚಂದ್ರ, ಸೂರ್ಯ, ಮಳೆ ಬಗ್ಗೇನೂ ಬರಿತಾರೆ.''

''ಒಂದೆರಡು ಉದಾಹರಣೆ ಕೊಟ್ಟರೆ ಚೆನ್ನಾಗಿರುತ್ತೆ.''

''ಕೇಳಿ ಸುಬ್ಬಣ್ಣ, ಅವೆಲ್ಲ ನಮಗೆ ಕಂಠಪಾಠ ಆಗಿಬಿಟ್ಟಿವೆ.

ಮಳೆ ಬಂತು ಮಳೆ
ತುಂಬಿ ಹರಿತು ಹೊಳೆ
ತೊಳೆದು ಹೋತು ಕೊಳೆ
ರೈತನ ಮುಖದಿ ಕಳೆ.

''ಆಹಾ, ಎಷ್ಟು ಚೆನ್ನಾಗಿದೆ ಅಲ್ಲರಿ ಕವನ!''

''ಸುಬ್ಬಣ್ಣೋರೆ, ಇದರಲ್ಲಿ ಅಂಥ ಸತ್ವ ಎಲ್ಲಿದೇರಿ? ಮಳೆ, ಹೊಳೆ, ಕೊಳೆ, ಕಳೆ, ಇದೇ ಆಯ್ತು ರಗಳೆ, ನಮ್ಮ ಬಳೆ ಬಗ್ಗೆ ಬರೀಲಿಕ್ಕೆ ಅವರಿಗೆ ಸಾಧ್ಯಾನೇ ಆಗೋಲ್ಲ. ಹೀಗಾಗಿ ನಾವೂ ಅವರ ಗೊಡವೆಗೆ ಹೋಗೋದಿಲ್ಲ. ನಮ್ಮ ಗೊಡವೆಗೆ ಅವರು ಬರೋದಿಲ್ಲ. ಅಷ್ಟೇ ಸಾಕು.''

''ಅಡ್ಡಿಯಿಲ್ಲ, ಮಕ್ಕಳ ಕವಿ ಪತ್ನಿಯರಿಗೆ ಮಕ್ಕಳ ಕವಿಗಿಂತಲೂ ಸ್ವಾಭಿಮಾನ, ಸಿಟ್ಟು ಹೆಚ್ಚಾಗಿದೆಯಲ್ಲ! ಇದೇ ಸಂತೋಷ'' ಎಂದು ಸುಬ್ಬಣ್ಣ ಸಮಾಧಾನಪಡಿಸಿ ಕೊನೆಯದಾಗಿ ಮಹಾ ಕವಿಪತ್ನಿಯರನ್ನು ಸಂದರ್ಶನಕ್ಕೆ ಕರೆದ.

ಕೇವಲ ಬೆರಳೆಣಿಕೆಯಲ್ಲಿ ಇದ್ದ ಮಹಾಕವಿಪತ್ನಿಯರು ಗಜಗಮನೆಯರಾಗಿ ಮುಂದೆಬಂದರು. ಸುಬ್ಬಣ್ಣ ಅವರನ್ನು ಸ್ವಾಗತಿಸುತ್ತ ''ಮೇಡಮ್ಮೋರೆ. ನೀವು ಬಿಡಿ ಕವಿಗಳ ಪತ್ನಿಯರಂತೆ ಚಿಲ್ರೆ ಅಲ್ಲ. ಇಡಿಯಾದ ಮಹಾಕವಿಪತ್ನಿಯರು. ನಿಮ್ಮ

ಸ್ಥಾನಮಾನ ಹೆಚ್ಚು. ದಯವಿಟ್ಟು ನಿಮ್ಮ ಅನುಭವ ಹಂಚಿಕೊಳ್ಳಬೇಕು.''

ಒಬ್ಬ ಮಹಾಕವಿ ಪತ್ನಿ ಎದ್ದುನಿಂತು,

''ಸುಬ್ಬಣ್ಣೋರ, ನೀವು ನಮ್ಮ ಮಹಾಕವಿಗಳನ್ನು ಗುರುತಿಸಿದ್ದು ನಮ್ಮ ಪುಣ್ಯ. ನಮ್ಮ ಮಹಾಕವಿ ನಿಜವಾಗಿಯೂ ಮಹಾಕವಿಗಳೆ ಆಗಿದ್ದಾರೆ. ಇವರ ಕಾವ್ಯ ಇಗೊ ನೋಡಿ ಇಷ್ಟು ದಪ್ಪವಿದೆ. ಒಂದೇ ಕೈಯಿಂದ ಎತ್ತಲಿಕ್ಕೆ ಆಗೋದಿಲ್ಲ. ಈ ಕಾವ್ಯಾ ಬರೀಲಿಕ್ಕೆ ಐದಾರು ವರ್ಷಗಳೇ ಹಿಡಿದವು. ಹಗಲೂ ರಾತ್ರಿ ಯಾವುದೂ ಲೆಕ್ಕಕ್ಕೆ ಇದ್ದಿಲ್ಲ. ಸ್ಫೂರ್ತಿ ಬಂದೊಡನೆ ರಾತ್ರಿ ದೆವ್ವ ಬಡಿದವರಂತೆ ಎದ್ದುಕೂಡುತ್ತಿದ್ದರು. ನಾನು ಕಾಫಿ ಚಹ ಮಾಡಿ ಮಾಡಿ ಸತ್ತುಹೋಗಿದ್ದೇನೆ. ಹಳೆಯ ಕಥೆಯನ್ನೇ ಎರಡನೇ ವರ್ಗದ ಮಕ್ಕಳು ಓದುವಂತೆ ಸರಳ ರಗಳೆಯಲ್ಲಿ ಬರೆದದ್ದೇ ಬರೆದದ್ದು. ಪ್ರಕಟನೆಗಂತೂ ಲಕ್ಷಾನುಲಕ್ಷ ಕೈಬಿಟ್ಟಿದೆ. ವಿಮರ್ಶೆ ಮಾಡಲಿಕ್ಕೆ ಹಲವಾರು ವಿಮರ್ಶಕರು ತುದಿಗಾಲ ಮೇಲೆ ನಿಂತಿದ್ದಾರೆ. ಅವರು ಗೌರವ ಧನದ ಮೇಲೆ ಅಳತೆ ಮಾಡಿ ಹೊಗಳುತ್ತಾರೆ. ಒಟ್ಟಿನಲ್ಲಿ ಮಹಾಕವಿ ಪಟ್ಟ ಇವರಿಗೆ ದಕ್ಕಿದೆ. ಮಹಾಕವಿ ಪತ್ನಿ ಅಂತಾ ನನಗೂ ಕರಿತಾರೆ. ಈ ಮಹಾಕಾವ್ಯವನ್ನು ಮುಂದೆ ಯಾರು ಓದತಾರೊ ಬಿಡತಾರೊ ದೇವರಿಗೆ ಗೊತ್ತು. ಒಟ್ಟಿನಲ್ಲಿ ಪಂಪ, ರನ್ನ, ಕುಮಾರವ್ಯಾಸರ ಸಾಲಿನಲ್ಲಿ ನನ್ನ ಗಂಡ ನಿಂತನಲ್ಲ! ಎಂಬುದೇ ನನಗೆ ಸಂತೋಷ.''

''ಮೇಡಮ್ಮೋರೆ, ನಿಮ್ಮ ಮಹಾಕವಿಗಳು ಬಂದಿದ್ದರೆ ವೇದಿಕೆಗೆ ಕರೆಯಬಹುದೆ ?''

''ಅಯ್ಯೋ, ಅದಕೇನಂತೆ. ಮುದ್ದಾಮಾಗಿ ಬಂದಿದ್ದಾರೆ. ಹಿಂದೆ ಕುಳಿತಿದ್ದಾರೆ. ಕರೆಯಿರಿ.

''ದಯವಿಟ್ಟು ಮಹಾಕವಿಗಳು ವೇದಿಕೆಗೆ ಬರಬೇಕು'' ಎಂದು ಸುಬ್ಬಣ್ಣ ಆಹ್ವಾನಿಸಿದೊಡನೆ ಮಹಾಕವಿಗಳು ಗಂಭೀರರಾಗಿ ವೇದಿಕೆಗೆ ಬಂದರು. ಅವರು ಹೆಜ್ಜೆ ಹಾಕಿದಂತೆ ಸಭೆಗೆ ರೋಮಾಂಚನವಾಗಿ ಮಹಾಕವಿಗಳಿಗೆ ''ಜಯ ಹೊ, ಜಯ ಹೊ, ನಿಮ್ಮ ಮಹಾಕಾವ್ಯವನ್ನು ನಾವೂ ಓದಬೇಕು'' ಎಂದು ಸಭಿಕರು ಕೂಗ ತೊಡಗಿದರು. ಆಗ ಮಹಾಕವಿಗಳು ಸಭೆಗೆ ಕೈ ಮುಗಿದು ಮಹಾಕಾವ್ಯವನ್ನು ಎತ್ತಿ ತೋರಿಸುತ್ತ ''ನಿಮ್ಮ ಆಸಕ್ತಿ ಮತ್ತು ಪ್ರೋತ್ಸಾಹಗಳೇ ನನ್ನ ಕಾವ್ಯ ಶಕ್ತಿಗೆ ಸ್ಫೂರ್ತಿ. ನಿಮಗಿಷ್ಟು ಆಸೆಯಿದ್ದಮೇಲೆ ಒಂದೊಂದು ಪ್ರತಿಯನ್ನು ಗೌರವ ಪ್ರತಿಯಾಗಿ ತೆಗೆದುಕೊಂಡುಹೋಗಿ ನನ್ನನ್ನು ಮುಕ್ತ ಗೊಳಿಸಬೇಕು'' ಎಂದು ಮಹಾಕವಿಗಳು ವಿನಂತಿಸಿ ಕೊಂಡಾಗ ಕಾವ್ಯಾಸಕ್ತರು ಓದಲಿಕ್ಕೆ ತೆಗೆದುಕೊಂಡರೆ ನಿರಾಸಕ್ತರು ನಿದ್ರೆ ತೆಗೆಯುವಾಗ ತಲೆದಿಂಬಿಗೆ ಬಂದೀತೆಂದು ಹೊತ್ತುಕೊಂಡು ನಡೆದರು. ಸುಬ್ಬಣ್ಣ ಅಭಿನಂದನೆ ಹೇಳುತ್ತಿರುವಂತೆ ಸಭೆ ಮಟಾಮಾಯವಾಯ್ತು.


**ಎಂ. ಡಿ. ಗೋಗೇರಿ**
ನವ ಅಯೋಧ್ಯಾನಗರ, ಹುಬ್ಬಳ್ಳಿ - ೨೪


# ಇಲ್ಲಿ ಜೈಲಲ್ಲಿ



ಇಲ್ಲಿ ಜೈಲಲ್ಲಿ ನಾನು
ಗಲ್ಲು ಕುಣಿಕೆಯ ಎಣಿಕೆಯಲ್ಲಿದ್ದಾಗ...

ಮಳೆ ಬಿದ್ದು ಹೊಲ ಕರೆಯುತ್ತಿದ್ದ ಒಂದು ದಿನ
ಪೇಟೆಯಲ್ಲಿ ಗೊಬ್ಬರಕ್ಕೆ ಜಗಳ.
ಬೀಜಕ್ಕೆ ಒದರಾಟ. ಮದ್ದಿಗೆ ಪರದಾಟ.
ಅಂಗಡಿ ಸಾಹುಕಾರನ ಮುಖ ಧೋತರಕ್ಕೆ ಇನ್ನೂ

ಮಳೆಗಾಲದ ಕೆಸರು ಹಾಗೇ ಇರಲಿಲ್ಲ.
ಸರಕಾರವ ಕರೆದಿದ್ದಕ್ಕೆ ರಾದ್ಧಾಂತವಾಗಿ
ಟಾರು ರಸ್ತೆ ತುಂಬ ಕಲ್ಲು, ಇಟ್ಟಿಗೆ.
ಒಡೆದ ಶಟರುಗಳ ಬೀಗ. ಕುಂಡೆ ಮೇಲೆ ಲಾಠಿ ಬಾಸುಳೆ.
ದಿನ ದಿನವೂ ಏರಿದ ಕಾವು, ಸಿಟ್ಟು, ಹತಾಶೆ, ಹಠ.
ಆ ವರ್ಷ ಬೆಳೆಯೊಳಗೆ ಹೊಕ್ಕಿಕೊಂಡಿತು ಭೂತ.
ಊರು ಬಿಟ್ಟು ಓಡತೊಡಗಿದೆ. ಅಡಗಿಕೊಂಡೇ ಯುದ್ಧ.
ಹಸಿವೇ ತಂತ್ರ. ಬಡತನವೇ ಆಯುಧ.
ಕಣ್ಣೇ ಬಿಟ್ಟೆ ಕಾಡೇ ಗೂಡೇ... ಅವ್ರ ಬಿಟ್ಟ್ ಇವರ್ಯಾರ್ ?

ಹಸಿರು ಬೆಟ್ಟಗಳ ಬೆಳದಿಂಗಳ ಹೊಳೆಗಳ
ಬಗೆಗೆ ಅದೇನು ತಾನೇ ಹೇಳಲಿ. ರಕ್ತ, ರಕ್ತ, ರಕ್ತ,
ಉಜ್ಜಿದಷ್ಟೂ ಉಜ್ವಲ. ಗೆಳೆಯರ ಹೆಣ ಹೊತ್ತು ನಾಚಿ
ಸೊರಗಿದ ಹೆಗಲಿಗೆ ಬಂದೂಕು ಭಾರ.

ಎಳೆ ಎಳೆ ಕಣ್ಣುಗಳು ಸಿನೆಮಾ ನಟಿಯರ
ಕನಸುಗಳಾಡುವ ಅಂಗಳ
ಫಲಕದೊಳಗೆ ತುಳುಕುವುದರ ರಹಸ್ಯ ಕಾಣುವ ತವಕ
ತೀರುವ ಮೊದಲೇ ಬೀದಿಯಲ್ಲಿ ಹೆಣ.
ಒಂದು ಕಾಂಡಕ್ಕೆ ಇನ್ನೊಂದು ಉತ್ತರ. ಬಲಿದಾನ.
ಮತ್ತೆ ಓಟ. ಬಾಂಬು. ಕತ್ತಿ. ಕೆಸರಲ್ಲಿ ಕಾವಲು, ನಿಂತೇ ನಿದ್ದೆ.

ಇಲ್ಲಿ ಜೈಲಲ್ಲಿ ನಾನು
ಗಲ್ಲು ಕುಣಿಕೆಯ ಎಣಿಕೆಯಲ್ಲಿದ್ದಾಗ...
ಯಾರ ನೆನಪುಗಳಿಗೆ ಏನು ಮೌಲ್ಯ.
ಯಾವ ಸರಿತಪ್ಪುಗಳ ಗಣಿತಕ್ಕೆ ಅರ್ಥ.

ದಿನದಿನವೂ ಹೊಸ ರಂಜನೆಯ ಬಿಗಿಯಪ್ಪುಗೆಯಲ್ಲಿ
ಟೀವಿ ಮುಂದೆ ಮುದ್ದೆಯಾಗಿ ನನ್ನ ಊರೇ ಮುದುಡಿದ್ದರೆ,
ಸಾವಕಾಶ ಜೈಲುಗಳಲ್ಲಿ ದಟ್ಟಣೆ
ನೆಲದಲ್ಲಿ ನೂರು ಮೈಲಿಯಡಿ ಗುಡುಗುಡುವ ಸದ್ದು.


**ಡಾ|| ಕಮಲಾಕರ ಭಟ್**
೨, ವೃದ್ಧೇಶ್ವರ್ ಕಾಲನಿ ಪೈಪ್‌ಲೈನ್ ರಸ್ತೆ, ಸಾವೇಡಿ, ಅಹಮದ್‌ನಗರ - ೪೧೪೦೦೨, ಮಹಾರಾಷ್ಟ್ರ

# ಹೊಸತು, ಹೊಸತು, ಅದಕ್ಕದು ಸಹಜವೇ ?

ಸ. ರಾ. ಸುಳಕೂಡೆ

ಜಗದೊಳಗೆ ಮಾನವನ ಬದುಕು ಸ್ವತಂತ್ರ ಅನ್ನುವವರಿದ್ದಾರೆ, ಅತಂತ್ರವೆನ್ನುವವರೂ ಅಸಂಖ್ಯರಾಗಿದ್ದಾರೆ. ಧರ್ಮದ ಕವಚ ತೊಟ್ಟವರು ಇಲ್ಲಿರುವುದು ಸುಮ್ಮನೆ, ಅಲ್ಲಿದೆ ನಮ್ಮ ಮನೆ ಎಂದು ಹಲವು ಹತ್ತು ಬಗೆಯಾಗಿ ಚಿತ್ರಿಸುತ್ತಲೆ ನಡೆದಿದ್ದಾರೆ. ಮನುಷ್ಯ ಸರ್ವತ್ರ ಅತಂತ್ರ, ಕಾಲದ ಮಹಿಮೆ ಅನಂತ ಎಂಬ ಪ್ರತೀತಿ ಮನುಷ್ಯ ಪ್ರಯತ್ನವನ್ನು ಅಲ್ಲಗಳೆಯುತ್ತಲೇ ನಲಿಯುತ್ತಲಿದೆ. ಇಷ್ಟೆಲ್ಲ ಆತಂಕ, ದುಗುಡ, ನಿರುತ್ಸಾಹ, ನಿರಾಶೆ, ಅಪನಂಬಿಕೆಗಳ ನಡುವೆಯೂ ಮನುಷ್ಯ ಅಗಾಧ ಅದ್ಭುತ ಸಾಹಸ ಮೆರೆಯುತ್ತಿದ್ದಾನೆ, ನಿತ್ಯ ಒಂದಿಲ್ಲೊಂದು ಹೊಸತನ ಹೊಸತು ಹೊಸತು ಎನ್ನುವ ಹಂಬಲಕ್ಕೆ ಒಳಗಾಗಿಯೂ ಮುನ್ನಡೆದಿದ್ದಾನೆ. ಜಗತ್ತು ದುಃಖದ ಸಾಗರವೆನ್ನುವ ಭಾಷೆಯನ್ನು ಬದಲಿಸುವಷ್ಟು ಪ್ರಬಲನಾಗುತ್ತ ನಡೆದಿದ್ದಾನೆ. ಆಧುನಿಕ ಯುಗದ ವಿಜ್ಞಾನವು ಮಾನವನನ್ನು ಪರ್ಯಾಯ ಸೃಷ್ಟಿಕರ್ತನ ಸ್ಥಾನಕ್ಕೆ ತಂದು ನಿಲ್ಲಿಸಿದೆ. ಈ ತೆರನಾದ ಪ್ರವೃತ್ತಿ, ಪ್ರತಿಭೆ, ಚಿಕಿತ್ಸಕತೆ, ಸಂಶೋಧನೆ, ಸಿದ್ಧಿ, ಒಂದಿಲ್ಲೊಂದು ಹೊಸತನ ಹೊಳವಿಗೆ ಮನುಕುಲವನ್ನು ನೂಕುತ್ತಲಿದೆ. ಹೊಸತು ಹೊಸತು ಎಲ್ಲೆಡೆ ಜಗಮಗಿಸುವ ಸುದ್ದಿ. ಬಣ್ಣ, ವರ್ಣರಂಜಿತ ಗುಂಗು ಮಾನವನ ಮನಸ್ಸಿನೊಳಗೆ ಎಬ್ಬಿಸಿರುವ ಅನಂತ ತರಂಗ, ತರಂಗಗಳ ನೋಟ, ವಿಸ್ಮಯ, ನಿಬ್ಬೆರಗಲ್ಲವೇ ?

ಮನುಷ್ಯನ ಕುತೂಹಲವೇ ಹೊಸತಿನ ಹೊಸ್ತಿಲೆಂದು ಹೇಳಬಹುದಾಗಿದೆ. ಕುತೂಹಲವು ನಿರೀಕ್ಷೆ, ಪರೀಕ್ಷೆ, ಪರಿಣಾಮ ಎಲ್ಲವನ್ನೂ ಒಳಗೊಂಡಿದೆ. ವಿಂಗಡನೆ, ವಿಶ್ಲೇಷಣೆ ಮಾನವ ಬದುಕನ್ನು ಎತ್ತರಿಸುತ್ತವಲ್ಲದೆ ವೈವಿಧ್ಯತೆಗೆ ಥಳಕು - ಬೆಳಕು ಚೆಲ್ಲುತ್ತವೆ. ಸೃಷ್ಟಿಯ ಕ್ಷಣಗಳು ನಿರಂತರ ಬದಲಾವಣೆಗೆ ಶ್ರೀಕಾರ ಹಾಕುತ್ತವೆ. ಬದಲಾವಣೆ ಸೃಷ್ಟಿಯ ನಿಯಮವೆಂದು, ನಿತ್ಯನೂತನವನ್ನೇ ನಂಬಿಕೊಂಡು ಬದುಕಲಾಗದಲ್ಲವೇ ?

ಇವತ್ತಿನ ವಿದ್ಯಮಾನಗಳು ಬಹಳಷ್ಟು ವೇಗವನ್ನು ಗಳಿಸಿಕೊಂಡಿವೆ. ನಿನ್ನೆಯ ವಿಚಾರ, ಸಾಮಗ್ರಿ, ಸವಲತ್ತು, ಸೌಕರ್ಯಗಳು ಇಂದು ಅಪ್ರಸ್ತುತವಾಗುವ ಸಾಧ್ಯತೆಗಳೇ ಆಗಿರುತ್ತವೆ. ಜಾಗತೀಕರಣದ ತೋಳ ತೆಕ್ಕೆಯೊಳಗೆ ಸಕಲವೂ ತೂಗುತ್ತಲಿರುವುದರಿಂದ ಹಳೆಯದು, ಹೊಸತು, ಹೊಸತು-ಹಳೆಯದು ಲೆಕ್ಕ ಹತ್ತದ ಸ್ಥಿತಿ ಇದೆ. ಶಹರ, ಗ್ರಾಮೀಣ ಪ್ರದೇಶಗಳಲ್ಲೂ ಲಗ್ಗೆ ಹಾಕಿರುವ ಪ್ರಚಾರ ಸಂಪರ್ಕ ಸಾಧನಗಳಿಂದಾಗಿ ಪ್ರತಿಯೊಬ್ಬರೂ ಹೊಸ ಹೊಸ ಅಭಿರುಚಿಗಳನ್ನು ಬೆಳೆಸಿಕೊಳ್ಳತೊಡಗಿದ್ದಾರೆ. ಪ್ರಸಿದ್ಧ ಕಂಪನಿಗಳು ಆಕರ್ಷಕವಾಗಿ ವರ್ಣರಂಜಿತ ಹೊದಿಕೆ ತೊಡಿಸಿ ಸಾಮಗ್ರಿ ಮಾರಾಟಕ್ಕಿಡುವ ಪ್ರವೃತ್ತಿಯನ್ನು ಗ್ರಾಹಕ ಅರ್ಥ ಮಾಡಿಕೊಳ್ಳುವಷ್ಟು ಪುರಸತ್ತು ಹೊಂದಿಲ್ಲ. ಗ್ರಾಹಕ ಹೊಸ ಹೊಸತನಕ್ಕೆ ಮುಗಿಬೀಳುತ್ತಿರುವುದರಿಂದ ಬಹುರಾಷ್ಟ್ರೀಯ ಕಂಪನಿಗಳು ನಿತ್ಯ ನೂತನ ಹೆಸರಿನೊಳಗೆ ಎಲ್ಲವನ್ನೂ ಮುಚ್ಚಿಹಾಕುತ್ತ ಹೋಗುತ್ತಿವೆ. ಗ್ರಾಹಕ ಹಕ್ಕುಗಳು, ಗ್ರಾಹಕ ಜಾಗೃತಿ ಹೆಚ್ಚಾಗುತ್ತಿದ್ದರೂ ಬಹುರಾಷ್ಟ್ರೀಯ ಕಂಪನಿಗಳ ಗತ್ತು ಗಮ್ಮತ್ತುಗಳನ್ನು ಮೀರಿ ನಿಲ್ಲಲಾಗುತ್ತಿಲ್ಲ. ಸಣ್ಣ ಸಣ್ಣ ಪಟ್ಟಣಗಳಲ್ಲಿ ಇಂದು 'ಮಾಲ್'ಗಳನ್ನು ಕೇವಲ 'ಗುಣಮಟ್ಟ'ವೆಂಬ ಹೊಸ ತಾಕತ್ತಿನಲ್ಲಿ ಮಾರಾಟ ಕೇಂದ್ರೀಕೃತವಾಗುತ್ತಿರುವುದು ಸಾಮಾನ್ಯ ಜನರ ಉದ್ಯೋಗ ಕಸಿದುಕೊಳ್ಳುವ ಹುನ್ನಾರವೇ ಆಗಿದೆ. ಭಾರತೀಯರಲ್ಲಿ ಮುಂಧೋರಣೆ ಮತ್ತು ಮುಂಜಾಗ್ರತೆಯ ಕೊರತೆಯನ್ನು ಚೆನ್ನಾಗಿ ಬಳಸಿಕೊಳ್ಳುತ್ತಿರುವ ಬಹುರಾಷ್ಟ್ರೀಯ ಕಂಪನಿಗಳು ರೈತರನ್ನು, ಕೂಲಿಕಾರರನ್ನು, ಕಿರುಕುಳ ವ್ಯಾಪಾರಸ್ಥರ ಬದುಕನ್ನು ಅತ್ಯಂತ ದುರ್ದೆಶೆಗೆ ಗುರಿ ಮಾಡಿವೆಯೆಂದರೆ ತಪ್ಪಾಗಲಾರದು. ಬಡವರಂತೂ ಹೊಸ ಹೊಸತೆಂದು ಬೆನ್ನುಹತ್ತಿ ಹಳವಂಡಕ್ಕೆ ಗುರಿಯಾಗುತ್ತಿದ್ದಾರೆ.

ಸ್ವಾತಂತ್ರ್ಯಾನಂತರದಲ್ಲಿ ದೇಶದ ರೈತರು ಸ್ವಾವಲಂಬಿಗಳಾಗಿ ಬದುಕುವ ಸ್ವಾತಂತ್ರ್ಯವನ್ನೇ ಕಳೆದುಕೊಂಡಿದ್ದಾರೆ. ಸುಧಾರಿತ ಬೀಜ, ನವೀನ ತಳಿ, ಹೆಚ್ಚಿನ ಇಳುವರಿ ಎಂಬ ಪ್ರಚಾರಕ್ಕೆ ಒಳಗಾದ ರೈತರು ದೇಶಿ ತಳಿಗಳನ್ನೇ ಹೊಸಕಿಹಾಕಿದರು. ರಸ ಗೊಬ್ಬರದ ಬಳಕೆಯಲ್ಲಿ ವಿವೇಚನೆ ಮರೆತ ರೈತರು ಭೂಮಿಯ ಸತ್ವವನ್ನೇ ಹಾಳುಮಾಡಿಕೊಂಡಿದ್ದಾರೆ. ರೈತಾಪಿ ಜನರೊಂದಿಗೆ ಕುಲಕಸಬುಗಾರರು ತಮ್ಮ ಕಸುಬುಗಳನ್ನು ತೊರೆದು ಇನ್ನಾವುದೋ ಕೆಲಸದಲ್ಲಿದ್ದಾರೆ. ಇಂದು ಗ್ರಾಮೀಣ ಜನತೆ ತಮ್ಮ ಸಂಗೀತ, ಸಾಹಿತ್ಯ, ಆಟ ನೋಟಗಳಲ್ಲಿನ ಜನಪದ ಸೊಗಡನ್ನೇ ಕೆಡಿಸಿಕೊಂಡಿದ್ದಾರೆ.

ನಮ್ಮ ದೇಶದಲ್ಲಿ ಅಸಂಖ್ಯ ದೇವರು ಧರ್ಮಗಳಿವೆ. ಅದರಂತೆ ಧಾರ್ಮಿಕ ನಡಾವಳಿಗಳಿವೆ. ಪ್ರತಿಯೊಬ್ಬರ ಮನೋಕಾಮನೆಗಳನ್ನು ಪೂರೈಸುವ ವಿಧ-ವಿಧ ದೇವರುಗಳ ಪ್ರವರ್ತಕರೂ ಇದ್ದಾರೆ. ಇಷ್ಟಾದರೂ ಮಾನವನ ಮರುಳುತನ ದೂರಾಗಿಲ್ಲ, ಹೊಸ ಹೊಸ ದೇವರು, ಪ್ರವಾದಿಗಳು, ಪುಣ್ಯ ಪುರುಷರು ಹೊಸ ಹೊಸ ಹೆಸರಿನಲ್ಲಿ ಪ್ರತಿಷ್ಠಾಪನೆಗೊಳ್ಳುತ್ತಿದ್ದಾರೆ. ಉಸಿರಾಟಕ್ಕೂ ತಾಲೀಮು, ತರಬೇತಿ ನೀಡುವ ಹೊಸ ಹೊಸ ತಂತ್ರಗಾರರು ಭರ್ಜರಿ ವ್ಯಾಪಾರ ನಡೆಸಿದ್ದಾರೆ. ಗುಂಪು ಗುಂಪಿಗೆ ಗುರುಗಳು ಗಾಳ ಹಾಕುತ್ತಿದ್ದಾರೆ. ಈ ಹೊಸ ಸುಳಿ ಮಾನವನ ಮರ್ಯಾದೆ-ಮಾನ ಹರಾಜು ಹಾಕುತ್ತಿದ್ದರೂ ಎಲ್ಲವನ್ನು ತಾಳಿಕೊಳ್ಳುವ ಹೊಸ ತಾಳ್ಮೆ ಪಸರಿಸುತ್ತಲಿದೆ. ಇದು ಮಾನವ ಬದುಕಿನ ನೈಜತೆಗೆ ಸದಾ ಧಕ್ಕೆಯನ್ನುಂಟುಮಾಡುತ್ತಲಿದೆ. ಮಾನವ ಎಂದಿನಂತೆ ವೇಷ-ಭೂಷಣಗಳಿಂದ ಪ್ರಭಾವಿತನಾಗುತ್ತಿದ್ದಾನೆ. ಎಷ್ಟು ವೇಷ ಭರ್ಜರಿಯಾಗಿರುತ್ತದೆಯೋ ಅಷ್ಟು ಪ್ರಭಾವ ಹೆಚ್ಚಾಗುತ್ತಲಿದೆ. ಇಂದಿನ ದಿನಮಾನಗಳಲ್ಲಿ ವೇಷಧಾರಿಗಳಿಗೆ ನವನವೀನ ತಾಲೀಮು ಸಿಗುತ್ತಲಿದೆ. ಜನರ ಸಂಕಟಗಳು, ಆಸೆ ಆಕಾಂಕ್ಷೆಗಳು, ಕಠಿಣ ಪ್ರಸಂಗಗಳು, ಬಡತನ, ನಿರುದ್ಯೋಗ ಹೆಚ್ಚಾದಂತೆ ಈ ನವೀನ ವೇಷಧಾರಿಗಳ ಸಂಖ್ಯೆ ಹೆಚ್ಚಾಗಲು ವೇದಿಕೆ ಸಿಗುತ್ತದೆ. ನವನವೀನ ವೇಷಧಾರಿಗಳಾಗಿರುವ ಪ್ರತಿಯೊಬ್ಬರೂ ಒಂದಿಲ್ಲೊಂದು ಕಲಬೆರಕೆ ಕಾರ್ಯದಲ್ಲಿಯೇ ನಿರತರಾಗಿದ್ದಾರೆ. [illegible]

> ನಮ್ಮ ದೇಶದಲ್ಲಿ ಅಸಂಖ್ಯ ದೇವರು ಧರ್ಮಗಳಿವೆ. ಅದರಂತೆ ಧಾರ್ಮಿಕ ನಡಾವಳಿಗಳಿವೆ. ಪ್ರತಿಯೊಬ್ಬರ ಮನೋಕಾಮನೆಗಳನ್ನು ಪೂರೈಸುವ ವಿಧ-ವಿಧ ದೇವರುಗಳ ಪ್ರವರ್ತಕರೂ ಇದ್ದಾರೆ. ಇಷ್ಟಾದರೂ ಮಾನವನ ಮರುಳುತನ ದೂರಾಗಿಲ್ಲ, ಹೊಸ ಹೊಸ ದೇವರು, ಪ್ರವಾದಿಗಳು, ಪುಣ್ಯ ಪುರುಷರು ಹೊಸ ಹೊಸ ಹೆಸರಿನಲ್ಲಿ ಪ್ರತಿಷ್ಠಾಪನೆಗೊಳ್ಳುತ್ತಿದ್ದಾರೆ. ಉಸಿರಾಟಕ್ಕೂ ತಾಲೀಮು, ತರಬೇತಿ ನೀಡುವ ಹೊಸ ಹೊಸ ತಂತ್ರಗಾರರು ಭರ್ಜರಿ ವ್ಯಾಪಾರ ನಡೆಸಿದ್ದಾರೆ. ಗುಂಪು ಗುಂಪಿಗೆ ಗುರುಗಳು ಗಾಳ ಹಾಕುತ್ತಿದ್ದಾರೆ. ಈ ಹೊಸ ಸುಳಿ ಮಾನವನ ಮರ್ಯಾದೆ - ಮಾನ ಹರಾಜು ಹಾಕುತ್ತಿದ್ದರೂ ಎಲ್ಲವನ್ನು ತಾಳಿಕೊಳ್ಳುವ ಹೊಸ ತಾಳ್ಮೆ ಪಸರಿಸುತ್ತಲಿದೆ. ಇದು ಮಾನವ ಬದುಕಿನ ನೈಜತೆಗೆ ಸದಾ ಧಕ್ಕೆಯನ್ನುಂಟುಮಾಡುತ್ತಲಿದೆ. ಮಾನವ ಎಂದಿನಂತೆ ವೇಷ-ಭೂಷಣಗಳಿಂದ ಪ್ರಭಾವಿತನಾಗುತ್ತಿದ್ದಾನೆ.

ಕಂಗೊಳಿಸುತ್ತಿದ್ದಾರೆ. ಅವರ ಹಿಂದೆ, ಮುಂದೆ ಝುಗಝುಗಿಸುವ ವೃತ್ತಾಂತಗಳಿಗೆ ತಂತ್ರ-ಮಂತ್ರಗಳಿವೆ, ಎಲ್ಲಕ್ಕೂ ಮಿಗಿಲಾಗಿ ಈ ಜಗತ್ತಿಗೆ ಜನಕ್ಕೆ ಹೊಸದೊಂದನ್ನು ಪರಿಚಯಿಸುತ್ತಿದ್ದೇವೆ ಎಂಬ ಭ್ರಮೆ ಹುಟ್ಟಿಸುತ್ತಿದ್ದಾರೆ. ಬದುಕಿಗೆ ಚೈತನ್ಯ ನೀಡುವ ಪ್ರತಿ ಹೆಜ್ಜೆ ಒಂದು ಅರ್ಥದಲ್ಲಿ ಬಡವರಿಗೆ, ಕೂಲಿಗಾರರಿಗೆ, ಅಸಹಾಯಕರಿಗೆ ಅಸಹ್ಯ ತರುವಂತಿದೆ. ಈ ತೆರನಾದ ಹೊಸತನ ಬದುಕಿಗೆಂದೂ ಪೂರಕವಾಗದಲ್ಲವೇ ?

ಭಾರತ ಪುರಾತನಕ್ಕೆ ಹೆಸರುವಾಸಿಯಾಗಿದೆ. ಭಾರತೀಯರ ನರನಾಡಿಯಲ್ಲಿ ಪರಂಪರೆಯು ನಲಿ-ನಲಿ ದಾಡುತ್ತಿದೆ. ಪರಂಪರೆಯ ಕೋಟೆಗಳು, ದೇವಾಲಯಗಳು, ಶಾಸನಗಳು, ಶಿಲೆಗಳು, ಕಲಾಕೃತಿಗಳು, ಧಾರ್ಮಿಕ, ಆಧ್ಯಾತ್ಮಿಕ ಗ್ರಂಥಗಳು ಸಾಕಷ್ಟಿವೆ. ಮಾನವ ಕುಲದ ಬೆಳವಣಿಗೆಯಲ್ಲಿ ಎಲ್ಲ ಹಂತಗಳ ಕುರುಹುಗಳಿರುವುದು ಭಾರತೀಯರಿಗೆಲ್ಲ ಹೆಮ್ಮೆಯ ಸಂಗತಿಯಾಗಿದೆ. ಇಂಥ ಅಭೂತಪೂರ್ವ ಸಂಸ್ಕೃತಿ, ಕಲೆ - ಸಾಹಿತ್ಯ - ಸಂಗೀತ ಹೊಂದಿರುವ ಭಾರತ ಪ್ರಗತಿಗೆ ವಾಹಕವಾಗದೆ ನರಳುತ್ತಿರುವುದು ಹೊಸದೇನಲ್ಲ. ಈ ಸ್ಥಿತಿಗತಿಗಳನ್ನು ಅವಲೋಕಿಸಿದ ಸ್ವಾಮಿ ವಿವೇಕಾನಂದರು ಹೀಗೆ ಹೇಳಿದ್ದಾರೆ – ''ತಮ್ಮ ಪುಸ್ತಕಗಳಲ್ಲಿ ಕಂಡ, ವ್ಯಾಸಂಗಗಳಲ್ಲಿ ಕಂಡ, ಕನಸುಗಳಲ್ಲಿ ಕಂಡ ಭಾರತವೇ ತಲೆ ಎತ್ತಬೇಕೆಂದು ಅನೇಕರು ಇಷ್ಟಪಡುತ್ತಿರಬಹುದು. ಆದರೆ ನನ್ನ ಆಸೆ ಎಂದರೆ ಭಾರತವು ತನ್ನ ಹಿಂದಿನ ಶ್ರೇಷ್ಠ ಅಂಶಗಳನ್ನೂ ಇಂದಿನ ಶ್ರೇಷ್ಠ ಗುಣಗಳನ್ನೂ ಸ್ವಾಭಾವಿಕವಾಗಿ ಅಳವಡಿಸಿಕೊಂಡು ಪುನರ್ನಿರ್ಮಾಣವಾಗಬೇಕು. ಅಂದರೆ ನಮ್ಮ ಹೊಸ ವ್ಯವಸ್ಥೆ ಆಂತರಿಕ ಬೆಳವಣಿಗೆಯಾಗಿರಬೇಕು.'' ಭಾರತ ಪ್ರಕಾಶಿಸಬೇಕು, ಭಾರತ ಅಭಿವೃದ್ಧಿಶೀಲ ರಾಷ್ಟ್ರಗಳ ಪಂಕ್ತಿಗೆ ಸೇರಬೇಕು ಎಂಬ ಆಕಾಂಕ್ಷೆ ಇಟ್ಟುಕೊಂಡು ಹೊರಟಿರುವ ನಾವು ಪ್ರಬುದ್ಧತೆ ಸಾಧಿಸುವ ನಿಟ್ಟಿನಲ್ಲಿ ಯಾವುದೇ ಹೊಸ ಹೆಜ್ಜೆ ಹಾಕದಷ್ಟು ಜಡಗೊಂಡಿದ್ದೇವೆ. ದೇಶದಲ್ಲಿ ಎಲ್ಲಿ ನೋಡಿದಲ್ಲಿ ಸಂಶಯ, ಅಪನಂಬಿಕೆ, ಹಣದ ದಾಹ, ದಬ್ಬಾಳಿಕೆ ತಾಂಡವ ರೂಪ ತಾಳಿನಿಂತಿವೆ. ಕೇರಿಗೊಬ್ಬ, ಊರಿಗೊಬ್ಬ ನಿಯಂತ್ರಕ-ಶೋಷಕ, ಸೂತ್ರಧಾರ, ಯಾವುದೇ ಭಯವಿಲ್ಲದೆ ರಾಜ, ಮಹಾರಾಜರಂತೆ ಮೆರೆದಾಡುತ್ತಿದ್ದಾರೆ. ವ್ಯಕ್ತಿತ್ವ ನಿರ್ಮಾಣದ ಸೂಚಕವಾದ ಆಂತರಿಕ ಬೆಳವಣಿಗೆಯು ಈ ನವಸಾಮ್ರಾಜ್ಯದಲ್ಲಿ ಕಮರುತ್ತಲಿದೆ, ಪ್ರಜಾತಾಂತ್ರಿಕ ಮೌಲ್ಯಗಳು ಅಪಹಾಸ್ಯಕ್ಕೆ ಗುರಿಯಾಗುತ್ತಲಿವೆ.

ಬಡವರ ದೀನ ದಲಿತರ ಉದ್ಧಾರಕ್ಕಾಗಿ, ನಿರುದ್ಯೋಗಿಗಳಿಗೆ ಕೆಲಸ ಕೊಡುವುದಕ್ಕಾಗಿ ಸ್ವಾತಂತ್ರ್ಯ ಪಡೆದ ನಂತರ ಪ್ರಚಲಿತಕ್ಕೆ ತಂದ ಯೋಜನೆಗಳು, ಕಾರ್ಯಕ್ರಮಗಳ ಪಟ್ಟಿಯನ್ನು ಅವಲೋಕಿಸಿದರೆ ಹೊಸ ಹೊಸ ಕಾರ್ಯಕ್ರಮಗಳ ಹೆಸರು ಸೇರಿದ್ದು ಮಾತ್ರ ದಿಟವಾಗಿ ಕಾಣುತ್ತದೆ. ಒಬ್ಬ ಉನ್ನತ ಅಧಿಕಾರಿ ಸೇವೆಗೆ ಸೇರಿದ ದಿನಮಾನದಲ್ಲಿ ಅತ್ಯಂತ ಗುರಿಬದ್ಧ ಯೋಜನೆ, ಅವನ ನಿವೃತ್ತಿ ದಿನಮಾನದಲ್ಲಿ ಇನ್ನೊಂದು ಹೆಸರಿನಡಿ ಚಾಲ್ತಿಯಲ್ಲಿರುತ್ತದೆ. ಯಾವುದೇ ಯೋಜನೆ ಹೊಸದೆಂದು ಘೋಷಣೆಯೊಂದಿಗೆ ಹೊಸ ಹಗರಣ, ಭ್ರಷ್ಟಾಚಾರ, ದುರುಪಯೋಗ ಹೊತ್ತುಕೊಂಡು ಬರುತ್ತದೆಂದರೆ ತಪ್ಪಾಗಲಾರದು. ನಮ್ಮಲ್ಲಿ ಪ್ರಾಮಾಣಿಕತೆಯ ಕೊರತೆ ಇದೆ. ಒಂದು ಕಚೇರಿಯಲ್ಲಿ ಕಳುವು ಆಗುತ್ತದೆಂದರೆ ನಮ್ಮ ಸಾರ್ವಜನಿಕ ಬದುಕು ಅಷ್ಟರಮಟ್ಟಿಗೆ ಅಧಃಪತನಗೊಂಡಿದೆಯೆಂದರ್ಥ. ಸಾರ್ವಜನಿಕ ಆಡಳಿತ ಸುಧಾರಣೆ ಹೊಸ ಹೆಜ್ಜೆಗಳಿಗಾಗಿ ಅನೇಕ ಆಯೋಗಗಳು ಅಧ್ಯಯನಗಳು ನಡೆದು, ಅವುಗಳ ಶಿಫಾರಸ್ಸಿನಂತೆ ಅನೇಕ ಹೊಸ ಆಯಾಮ ಸವಲತ್ತು ಜಾರಿಗೆ ತಂದರೂ ಹೇಳಿಕೊಳ್ಳುವ ಸಾಧನೆ ಸಾಧ್ಯವಾಗುತ್ತಿಲ್ಲ. ಸತ್ಯ, ಪ್ರಾಮಾಣಿಕತೆ, ಜವಾಬ್ದಾರಿತನ, ನಿಷ್ಠೆ ನಮ್ಮಲ್ಲಿ ಇರದಿದ್ದರೆ ವ್ಯವಸ್ಥೆ ಬರುವುದಾದರೂ ಹೇಗೆ? ಭಾರತದಲ್ಲಿ ಹೊಸತನಕ್ಕೆ ದುಂಬಾಲು ಬಿದ್ದಿರುವ ಸಂಗತಿಗಳತ್ತ ಗಮನ ಹರಿಸಿದರೆ ನಮ್ಮ ಜನ ಎತ್ತ ಸಾಗಿದ್ದಾರೆ ಎಂಬ ವಿಷಾದ ಹೊರಹೊಮ್ಮದಿರಲಾರದು.

* ಒಂದು ಗ್ರಾಮಕ್ಕೆ ಸರಕಾರವು ಎರಡು ಯೋಜನೆಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಂಡು ತಿಳಿಸಲು ಸೂಚಿಸಿತು. ಒಂದು ಯೋಜನೆ ಊರಿಗೆ ಸರ್ವಋತು ಸಂಚಾರಕ್ಕೆ ಯೋಗ್ಯವಾದ ರಸ್ತೆ, ಇನ್ನೊಂದು ದೂರದರ್ಶನ ಸೆಟ್ಟು ಕೊಡುವುದಾಗಿತ್ತು. ಗ್ರಾಮದ ಜನರೆಲ್ಲರೂ ಕೂಡಿಕೊಂಡು ದೂರದರ್ಶನ ಸೆಟ್ಟು ಬೇಕೆಂದು ಆಗ್ರಹಿಸಿದರಲ್ಲದೆ ಸರಕಾರಕ್ಕೆ ಹಾಗೆ ತಿಳಿಸಲು ಪಟ್ಟು ಹಿಡಿದರು. ಅದರಂತೆ ದೂರದರ್ಶನ ಸೆಟ್ಟು ಗ್ರಾಮಕ್ಕೆ ಬಂತು. ಚಿತ್ರದಲ್ಲಿರುವ ರಂಗುರಂಗಿನ ರಸ್ತೆ, ಹೊಸ ಹೊಸ ಗಗನಚುಂಬಿ ಕಟ್ಟಡ, ವೇಷಭೂಷಣ, ನೃತ್ಯ ನೋಡಿಕೊಂಡು ಹೊಸತನದ ಹಬ್ಬ ಆಚರಿಸಿದರು.

* ಸರಕಾರದ ಲಕ್ಷಗಟ್ಟಲೇ ಪರಿಹಾರದ ಧನ ಪಡೆದ ಒಬ್ಬ ಒಂದು ರೇಡಿಯೋ ಖರೀದಿಸಿದ. ಒಂದು ಆಕಾಶವಾಣಿ ಕೇಂದ್ರದಲ್ಲಿ ಅಚ್ಚ ಹೊಸ ಹಾಡೊಂದು ಮೂಡಿಬಂದಿತು. ಆ ಹಾಡಿನ ಗುಂಗಿನಲ್ಲಿ ಮುಳುಗಿ ಹೋದ. ಮರುದಿನ ಅದೇ ಸಮಯಕ್ಕೆ ಅದೇ ಹಾಡು ಕೇಳಲು ರೇಡಿಯೋ ಹಚ್ಚಿದ. ಆ ಹಾಡು ಮೂಡಿ ಬರಲಿಲ್ಲ. ಸಿಟ್ಟಿಗೆದ್ದು ಆ ರೇಡಿಯೋ ಜಜ್ಜಿಹಾಕಿದ.

* ಒಂದೊಂದು ಕಂಪನಿ ಅವಧಿ-ಅವಧಿ, ಅವಕಾಶ, ಮನುಷ್ಯ ಪ್ರವೃತ್ತಿ ನೋಡಿಕೊಂಡು ರಿಯಾಯಿತಿ, ಒಂದಕ್ಕೆ ಎರಡು, ಎರಡಕ್ಕೆ ನಾಲ್ಕು ಎಂದು ಘೋಷಣೆ ಮಾಡುವುದೇ ತಡ, ಹೊಸತು, ಹೊಸತು ಎಂಬ ಮಂತ್ರಕ್ಕೆ ಮುಗಿಬೀಳುವವರನ್ನು ನಿಯಂತ್ರಿಸಲಾಗದು.

* ದೂರದರ್ಶನದಲ್ಲಿ ರಾಶಿಗೊಂದು ಲಾಕೇಟು, ಹರಳು, ಇದೊಂದು ಹೊಸ ಪ್ರಯೋಗ, ಗ್ಯಾರಂಟಿ, ಪರಿಣಾಮವಾಗದಿದ್ದರೆ ಹಣ ಮರಳಿ ಕೊಡಲಾಗುವುದೆಂಬ ಸಂಗತಿ ಪ್ರಸಾರಕ್ಕೆ ಮರುಳಾಗಿ ಹೋದವರೆಲ್ಲ ಹೊಸತನ ಬಯಕೆ ಹೊಂದಿದವರೇ ಆಗಿರುತ್ತಾರೆ.

* ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಹೊಸ ಬಡಾವಣೆಯೊಳಗೆ ವ್ಯಾಪಾರ ಮಳಿಗೆಯೊಂದು ಹಣ ದ್ವಿಗುಣದ ಸಂಸ್ಥೆ ತೆರೆಯುತ್ತದೆ. ಇಂಥ ಅನೇಕ ಮಳಿಗೆ, ಸಂಸ್ಥೆಗಳ ಬಗ್ಗೆ ಜಾಗರೂಕರಾಗಲು ಯಾವಾಗಲೂ ತಿಳಿ ಹೇಳಿದರೂ, ಇನ್ನೊಮ್ಮೆ ಪ್ರಯತ್ನಿಸೋಣ ಎಂಬುವವರು ಇದ್ದೇ ಇರುತ್ತಾರೆ. ಇಂಥವರನ್ನು ಮೋಸ ಮಾಡುವವರು ಹೊಸತು, ಹೊಸತನದ ಪ್ರಚಾರದಲ್ಲಿರುತ್ತಾರೆ.

* ಅತ್ಯಂತ ನವೀನ, ಈಗ ಪೇಟೆಗೆ ಬಿಡುಗಡೆ ಎಂಬ ಅಬ್ಬರ ಪ್ರಚಾರಕ್ಕೆ ಇದ್ದ ವ್ಯವಸ್ಥೆಯನ್ನು ಮಾರಾಟ ಮಾಡಿ ಹೊಸದಕ್ಕೆ ಕೈ ಚಾಚುತ್ತಾರೆ. ಇವರ ಮನೋಗತ ಯಾವತ್ತು ನವೀನ ವಸ್ತು ಹೊಂದುವಲ್ಲಿ ಪ್ರಥಮರಾಗಿರಬೇಕೆಂಬುದಾಗಿರುತ್ತದೆ.

ನಮ್ಮ ದೇಶ ಬಹುರಾಷ್ಟ್ರೀಯ ಕಂಪನಿಗಳ ಕೈಗೊಂಬೆಯಾಗುವತ್ತ ದಾಪುಗಾಲು ಹಾಕುತ್ತಲಿದೆ. ದೇಶಿತನದಿಂದ ಬಹಳಷ್ಟು ದೂರ ಕ್ರಮಿಸಿರುವ ನಾವು ಕೃತಕ - ಕೃತ್ರಿಮ ವಸ್ತುಗಳನ್ನು ಬಳಸುತ್ತ ಹೋಗುತ್ತಿದ್ದೇವೆ. ಹೊಸ ಮನೋಭಾವ ಇರಬೇಕು, ಯಾವುದೂ ಅತಿಯಾಗಬಾರದು. ವಿದೇಶೀಯ ಆಹಾರ-ವಿಹಾರ ವಸ್ತ್ರ ಅನುಕರಿಸು

ತ್ತಿರುವ ನಾವು ಇನ್ನೂ ಪೂರ್ಣ ಬತ್ತಲೆಯಾಗಿ ಸ್ವೇಚ್ಛಾರಿಗಳಾಗಿಲ್ಲ ಎಂಬುದು ಗಮನಿಸಬೇಕಾದ ಸಂಗತಿ.

ಹೊಸತು, ಹೊಸತು ಬಂದಿದೆ, ಬಂದಿದೆ ಎಂದು ಬೊಬ್ಬೆ ಹಾಕಿದ ಮಾತ್ರಕ್ಕೆ ಹಳೆಯದೆಲ್ಲ ತಿರಸ್ಕರಿಸಲ್ಪಡುತ್ತದೆ, ಆಕರ್ಷಣೆಯಿಂದ ದೂರಾಗಿ ಹೋಗುತ್ತದೆ, ಅದಕ್ಕೇನೂ ಕೆಲಸವಿರುವುದಿಲ್ಲ, ಎಲ್ಲವೂ ಮುಗಿದೆ ಹೋಯಿತೆಂದು ಭಾವಿಸುವುದು ಅಸಹಜತೆಯೇ ಆಗುತ್ತದೆ. ಎಲ್ಲ ಕಾಲದ ಮನಸ್ಸುಗಳು ಬದುಕು ಕಟ್ಟುವಲ್ಲಿ ಹಳೆಯದು, ಪುರಾತನದಿಂದ ಪ್ರೇರಣೆ ಪಡೆದುಕೊಂಡಿವೆ. ಪ್ರತಿ ಹಂತದಲ್ಲೂ ಹೊಸತು, ಹೊಸತು ಇರಬೇಕೆಂಬುದು ಮನುಷ್ಯ ಸಹಜ ಲಕ್ಷಣವೂ ಅಲ್ಲ. ಸೂರ್ಯ ಎಂದಿನಂತೆ ಬರುತ್ತಾನೆ, ಮುಳುಗುತ್ತಾನೆ. ಹಗಲು-ರಾತ್ರಿಗಳು ನಿರಂತರ. ವಿಶ್ವದ ಅನೇಕ ವಿದ್ಯಮಾನಗಳಲ್ಲಿ ಒಂದು ವಿಶಿಷ್ಟ ವ್ಯವಸ್ಥೆ ಇದೆ. ಈ ವ್ಯವಸ್ಥೆ ನಾವೀನ್ಯತೆಗಿಂತಲೂ ವಿನಯ ವಿದ್ಯೆಯನ್ನು ಬಯಸುತ್ತದೆ. ನಾವು ಎಷ್ಟು ಮಾನವೀಯ ಮತ್ತು ವಿನಯಶೀಲರಾಗಿ ಸಹಕಾರ ಮನೋಭಾವ ತಾಳುತ್ತೇವೋ ಅಷ್ಟು ಸಹಜತೆಯಿಂದ ಬದುಕಲು ಸಾಧ್ಯವಾಗುತ್ತದೆ. ಹೊಸತು - ಹಳೆಯದೆಂಬ ಗೊಂದಲಗಳೂ ನಿವಾರಣೆಗೊಳ್ಳುತ್ತವೆ. ದೇಹಕ್ಕೆ ನಾವೆಷ್ಟೇ ನವನವೀನ ಬಟ್ಟೆ ಬರೆ ಹಾಕಿದರೂ ದೇಹ ದೇಹವಾಗಿರಬೇಕಾಗುತ್ತದೆ. ಮಾನವನ ದೇಹದಲ್ಲಿ ಇರುವ ಜೀವಕ್ಕೆ ಹೊಸತು-ಹಳೆಯದರ ಪರಿವೆ ಇರುವುದಿಲ್ಲ ಎಂಬ ಸತ್ಯ ಸಂಗತಿ ಅರಿವಿಗೆ ಬಂದಾಗ ಎಲ್ಲವೂ ಒಂದೆಂಬ ಬೆಳಕು ಗೋಚರಿಸುತ್ತದೆ. ಜಗತ್ತಿನ ವಿಜ್ಞಾನ ಸಕಲವೂ ಪಂಚ ಮಹಾಭೂತಗಳನ್ನು ಅವಲಂಬಿಸಿದೆ ಎಂದು ಹೇಳಿದೆ. ಪಂಚಮಹಾಭೂತಗಳನ್ನು ಒಂದಕ್ಕೊಂದು ಸೇರಿಸಿ ರಸಾಯನ ತಯಾರಿಸಬಹುದು, ಇನ್ನೊಂದು ರೂಪ ಕೊಡಬಹುದು. ಆದರೆ ಪಂಚಮಹಾಭೂತಗಳಿಗೆ ಪರ್ಯಾಯ ಪಂಚಮಹಾಭೂತಗಳನ್ನು ತಯಾರಿಸಲಾಗದು. ಹೊಸತು ಹೊಸತು ಮೂಲದಲ್ಲಿ ಒಂದೇ ಆಗಿರುತ್ತದೆಂಬ ಸತ್ಯ ನಮ್ಮದಾಗಬೇಕಾದರೆ ಅರಿವೇ ಗುರುವಾಗಬೇಕಲ್ಲವೆ ?

ಮಾನವನ ಬದುಕು ಸಮತೋಲನ ಸಹಜತೆಗೆ ದಿಕ್ಕಾಗಬೇಕಾದರೆ ಹೊಸತು ಹೊಸತು ವಿವೇಕದಿಂದ ಕೂಡಿಕೊಂಡಿರಬೇಕಾಗುತ್ತದೆ. ಮಾನವ ಸಹ – ಮಾನವರೊಂದಿಗೆ ಮಾನವೀಯವಾಗಿ ವ್ಯವಹರಿಸುವಂತಾಗ ಬೇಕು. ಮಾನವ ಬದುಕಿಗೆ ಮಧುರತೆ, ಸಹಜತೆ, ಸಹೋದರತ್ವ, ಸಹಕಾರ ತರುವ ದಿಕ್ಕಿನ ಪ್ರತಿ ಹೆಜ್ಜೆ ದೃಢವಾದಾಗ ಹೊಸತು-ಹಳೆಯದರ ತಿಕ್ಕಾಟಕ್ಕೆ – ಅವಕಾಶವೇ ಇರದು.

ಸ. ರಾ. ಸುಳಕೂಡೆ
೧೩೯, ಶ್ರೀ ಬಸವೇಶ್ವರ ಬಡಾವಣೆ
ರಾಮತೀರ್ಥ ನಗರ, ಬೆಳಗಾವಿ - ೫೯೦ ೦೧೬

# ಆಟ ಮುಗಿದು ಹೋಗಿದೆ



ಆ ಮನೆಯಲ್ಲಿ ಸಾವು ಬಂದುಹೋಗಿ ಮೂರೇ ಮೂರು ದಿನಗಳಾಗಿವೆಯೆಂದು ಯಾರು ಬೇಕಾದರೂ ಊಹಿಸಬಹುದಿತ್ತು. ಕತ್ತಲ ಮೂಲೆಯಲ್ಲಿಟ್ಟ ಖಾಲಿ ಗೊಬ್ಬರ ಚೀಲಗಳು ಅಣಕಿಸುತ್ತಿರುವಂತೆ ಭಾಸವಾಗುತ್ತಿತ್ತು, ಕಳೆದ ಯುಗಾದಿಯ ದಿನ ಮಾವಿನ ಎಲೆಗಳನ್ನು ಒಂದೊಂದಾಗಿ ಸೇರಿಸಿ ಕಾಸಿ ಕಡ್ಡಿ ಚುಚ್ಚಿ ಮಾಡಿದ ಬಾಗಲ ತೋರಣವೀಗ ಫಳ ಫಳ ಸಪ್ಪಳ ಮಾಡುತ್ತಿದೆ. ಈ ಸಲ ಎರಡು ಚೀಲವಾದರೂ ಗೊಬ್ಬರ ಬೇಕೆಂದು ಕಾದು ರಾತ್ರಿಯಲ್ಲಿ ಅಲ್ಲಿಯೇ ಮಲಗಿದ್ದವನಿಗೆ ತಾನು ಸಾಲುಗಟ್ಟಿ ನಿಂತಿರುವುದು ಸಾವಿಗಾಗಿ ಎಂಬುದು ಜಗತ್ತಿಗೆ ತಿಳಿದಿದ್ದು ಮರುದಿನವೇ.

ರಾತ್ರಿಯಿಂದಲೂ ಕಾದು ಸುಸ್ತಾದವರ್‍ಯಾರೋ ಕಚೇರಿಗೆ ಕಲ್ಲುತೂರಿದ್ದರು. ಅಷ್ಟು ಸಾಕಿತ್ತು. ಪೊಲೀಸರ ಕೈಗಳಲ್ಲಿನ ಬಂದೂಕುಗಳು ಸಿಡಿಯಲು. ಸಾಲುಗಟ್ಟಿ ನಿಂತವನು ಹಾಗೇ ಕೆಳಕ್ಕೆ ಕುಸಿದುಬಿದ್ದಾಗ ಹಿತ್ತಲಿನ ಎತ್ತುಗಳಿಗೆ ನೀರು ಕುಡಿಸುವ ಸಮಯ ನೆನಪಾದರೂ ಏಳಲಾಗದೆ ಅವನು ನೆಲಕ್ಕೊರಗಿದ್ದ.

ಟೀವಿಯೊಂದು ಆ್ಯಕ್ಷನ್ ಸಿನಿಮಾದಂತೆ ಇದನ್ನೆಲ್ಲ ಚಿತ್ರೀಕರಿಸಿತ್ತು. ಪದೇ ಪದೇ ಬಿತ್ತರಿಸಿದ ದೃಶ್ಯಗಳಿಂದಾಗಿ ಚಿತ್ರ ನೋಡಿದ ಮಗು ತನ್ನಪ್ಪನಂತೆ ತಾನು ಗೋಲಿಬಾರಿನಾಟ ಆಡಲು ಗೆಳೆಯನ ಕರೆಯಿತು.

''ಬಾರೋ ಆಟವಾಡೋಣ.''

''ಯಾವ ಆಟ... ?'' ಗೆಳೆಯ ಕೇಳಿದ.

''ಗೋಲಿಬಾರಿನಾಟ.''

ನಾನು ಅಪ್ಪನಂತೆ ಗೊಬ್ಬರಕ್ಕಾಗಿ ಸಾಲುಗಟ್ಟಿ ನಿಂತಿರುತ್ತೀನಿ. ನೀನು ಪೊಲೀಸರಂತೆ ಬಂದೂಕು ಸಿಡಿಸುತ್ತಿ, ನಾನು ಸತ್ತು ಬೀಳುತ್ತೀನಿ, ಅಪ್ಪನಂತೆ – ಇದೇ ಆಟ ಗೋಲಿಬಾರಿನಾಟ ಎಂದು ಮಗುವಿನ ಧ್ವನಿ ಕೇಳಿ ಅತ್ತು ಅತ್ತು ಕೆಂಪಾದ ಕಣ್ಣುಗಳು ಬೆಳಕಿನತ್ತ ಹೊರಳುತವೆ.

ಮಗು ಗೋಲಿಬಾರಿಗೆ ಸತ್ತಂತೆ ಬಿದ್ದು ಮತ್ತೆ ಎದ್ದುಬರುವುದನ್ನು ನೋಡುತ್ತಿದ್ದಾಳೆ.

ಮೂಲೆಯಲ್ಲಿ ಕುಳಿತ ಅಜ್ಜಿ ತನ್ನ ಮಗ ಬಂದಾನೆಂದು ಅಂಗಳದ ಕಡೆಗೆ ಕಣ್ಣು ಹಾಯಿಸಿದ್ದಾಳೆ.

ಮೂಕ ಎತ್ತುಗಳು ಹಿತ್ತಲಿನ ಗೋದಲಿಯಲ್ಲಿ ಮೇವು ತಿನ್ನದೆ ಯಜಮಾನ ಬಂದನೆಂದು ಅಂಗಳದೆಡೆಗೆ ಮುಖ ಮಾಡಿ ನಿಂತಿವೆ. ಆದರೆ... ಆಟ ಮುಗಿದುಹೋಗಿದೆ.

ಬಿ. ಶ್ರೀನಿವಾಸ್
ಶಿರಸ್ತೇದಾರ್, ಜಿಲ್ಲಾ ನ್ಯಾಯಾಲಯ, ಹಾವೇರಿ



# ಒಬಾಮಾ ಮತ್ತು ಮಾಧ್ಯಮಗಳು

ಅಮೆರಿಕಾದ ಅಧ್ಯಕ್ಷ ಒಬಾಮಾ ಪ್ರತಿ ತಿಂಗಳೂ ರಾಷ್ಟ್ರದ ಬೇರೆ ಬೇರೆ ನಗರಗಳಲ್ಲಿ ನಾಗರಿಕರ ಸಭೆಗಳನ್ನು ಉದ್ದೇಶಿಸಿ ಮಾತನಾಡುವ ಹೊಸ ಸಂಪ್ರದಾಯವನ್ನು ಆರಂಭಿಸಿದ್ದಾರೆ. ರಾಷ್ಟ್ರೀಯ ಆರ್ಥಿಕ ಸಮಸ್ಯೆಗಳನ್ನು (ಅಥವಾ ಹಿಂಜರಿತವನ್ನು) ಕುರಿತಂತೆ ಜನಕ್ಕೆ ಸಾಂತ್ವನ ಹೇಳುವುದು ಮತ್ತು ಭರವಸೆ ನೀಡುವುದು ಅವರ ಮುಖ್ಯ ಉದ್ದೇಶ. ಜೊತೆಗೆ ಭಯೋತ್ಪಾದನೆ, ರಾಷ್ಟ್ರೀಯ ಆರೋಗ್ಯ ಯೋಜನೆ, ಮುಂತಾದುವನ್ನೂ ಪ್ರಸ್ತಾಪಿಸುತ್ತಾರೆ, ವಿವರಿಸುತ್ತಾರೆ ಮತ್ತು ಬೆಂಬಲ ಕೋರುತ್ತಾರೆ. ಅಮೆರಿಕಾದ ಮಾಧ್ಯಮಗಳು ಒಬಾಮಾ ಕುರಿತಂತೆ ಕಟು ಟೀಕೆ ಮಾಡಲಾರಂಭಿಸಿರುವುದರ ಹಿನ್ನೆಲೆಯಲ್ಲಿ ಜನರ ನಡುವೆ ಹೋಗಲು ಈ ಪ್ರಯತ್ನ ಅಗತ್ಯವಾಗಿದೆ. ಆರೋಗ್ಯದ ಕ್ಷೇತ್ರವು ಅಮೆರಿಕಾದಲ್ಲಿ ಹಲವು ದಶಕಗಳಿಂದ ಬಿರುಸಿನ ವ್ಯಾಪಾರಕ್ಕೆ ತುತ್ತಾಗಿದೆ. ವೈದ್ಯರನ್ನು ಕಾಣುವುದು ಮತ್ತು ಚಿಕಿತ್ಸೆ ಪಡೆಯುವುದು ನಾಗರಿಕರಿಗೆ ಒಂದು ರೀತಿಯ ಭಯದ ಅನುಭವವಾಗಿದೆ. ಅಷ್ಟು ವೆಚ್ಚ ಭರಿಸಲು ಕಷ್ಟವೆಂದು ವಿಮೆ ಪಡೆಯುವುದು ಸರ್ವತ್ರ ವ್ಯಾಪಕವಾಗಿದೆ. ವಿಮಾ ಕಂಪನಿಗಳು ಹೇಗೂ ಹಣ ತುಂಬುತ್ತವಾದ್ದರಿಂದ ಅನಗತ್ಯವಾದ ನೂರು ಪ್ರಯೋಗಾಲಯ ಪರೀಕ್ಷೆಗಳನ್ನು ವಿಧಿಸುವುದು ಸಾಮಾನ್ಯವಾಗಿದೆ. ಇದಕ್ಕೆ ಪರಿಹಾರವೆಂಬಂತೆ ಒಬಾಮಾ ತಮ್ಮ ದೇಶದಲ್ಲಿ ಬ್ರಿಟನ್ ಮಾದರಿಯ ರಾಷ್ಟ್ರೀಯ ಆರೋಗ್ಯ ಯೋಜನೆಯನ್ನು ಜಾರಿಗೊಳಿಸುವ ತೀರ್ಮಾನ ಪ್ರಕಟಿಸಿದ್ದಾರೆ. ಮಾಧ್ಯಮಗಳು ಇದರ ಮೇಲೆ ಗದಾಪ್ರಹಾರ ಮಾಡಲು ಬ್ರಿಟನ್ನಿನ ಮಾದರಿಯನ್ನು ವಿಪರೀತವಾಗಿ ಖಂಡಿಸಲು ಮುಂದಾಗಿವೆ. ಬ್ರಿಟನ್ನಿನ ಪ್ರಧಾನಿ ತಮ್ಮ ದೇಶದ ಆರೋಗ್ಯ ಯೋಜನೆಯನ್ನು ಸಮರ್ಥಿಸಲು ಈಚೆಗೆ ಹಲವು ಹೇಳಿಕೆಗಳನ್ನು ನೀಡಿದ್ದಾರೆ.



"ಆ ಯೋಜನೆ ಇಲ್ಲದಿದ್ದರೆ ನಾನು ಬದುಕುಳಿದು ಪ್ರಧಾನಿಯ ಸ್ಥಾನಕ್ಕೆ ಬರುವುದು ಅನುಮಾನಾಸ್ಪದವಾಗಿರುತ್ತಿತ್ತು" ಎಂದು ಬ್ರೌನ್ ಒಂದೆಡೆ ಹೇಳಿದರೆಂದು ವರದಿಯಾಗಿದೆ.

ಇಷ್ಟೆಲ್ಲಾ ರಂಪ ಏಕಾಗುತ್ತಿದೆ? ಒಬಾಮಾ ಆರೋಗ್ಯ ಯೋಜನೆಯು ಸರ್ಕಾರದ ಅಥವಾ ಸಾರ್ವಜನಿಕ ವಲಯದ ಒಂದು ಪ್ರಭಾವಶಾಲಿ ವ್ಯಾಪಕ ಕಾರ್ಯಕ್ರಮವಾಗಲಿದೆ. ಖಾಸಗಿತನವೊಂದೇ ಶ್ರೇಷ್ಠವೆಂಬ ಘೋಷಣೆಯನ್ನು ತನ್ನದಾಗಿರಿಸಿಕೊಂಡಿರುವ ಅಮೆರಿಕಾದಲ್ಲಿ ಇದು ಕೂಡದೆಂದು ಖಾಸಗಿ ವಲಯದ ಮತ್ತು ಸ್ವಲ್ಪಮಟ್ಟಿಗೆ ವೈದ್ಯರ ಹಾಗೂ ವಿಮಾ ಕಂಪನಿಗಳ ತಗಾದೆ. ವಿಮಾ ಕಂಪನಿಗಳ ಆದಾಯ ಕಡಿಮೆಯಾಗಿ ಅದರಿಂದ ಸರಣಿ ದುಷ್ಪರಿಣಾಮಗಳು ಅನಿವಾರ್ಯವೆಂದು ಹೇಳುವ ಮಾಧ್ಯಮಗಳು, ಸರ್ಕಾರಿ ಉಸ್ತುವಾರಿಯಲ್ಲಿ ಆರೋಗ್ಯ ರಕ್ಷಣೆ ಅಸಾಧ್ಯವೆಂದೂ, ಕೇವಲ ಅನಾರೋಗ್ಯದ ಹರಡುವಿಕೆ ಹೆಚ್ಚುವುದೆಂದೂ ವಾದಿಸುತ್ತಿವೆ. ಒಬಾಮಾ ವಿರುದ್ಧ ಪ್ರತಿಭಟನೆಗಳಿಗೆ ಇದೊಂದು ಕಾರಣವೇ ಅಲ್ಲ, ಇನ್ನೊಂದೂ ಇದೆ. ಅಮೆರಿಕಾದ ಶಾಲಾ-ಕಾಲೇಜುಗಳಲ್ಲಿ ಮತ್ತು ಇತರೆಡೆ ಸ್ವಚ್ಛಂದವಾಗಿ ಆಯುಧಗಳನ್ನು ಬಳಸಿ ವಿದ್ಯಾರ್ಥಿ-ಅಧ್ಯಾಪಕರನ್ನು ಕೊಲ್ಲುವುದು ಹೆಚ್ಚುತ್ತಿದೆ. ಬಂದೂಕುಗಳನ್ನು ಹೊತ್ತು ತಿರುಗುವ ಮಂದಿಯಿಂದ ನಗರಗಳಲ್ಲಿ ಮತ್ತು ಪಟ್ಟಣಗಳಲ್ಲಿ ಆತಂಕದ ವಾತಾವರಣ ಹರಡಿದೆ. ಇದನ್ನು ತಡೆಗಟ್ಟುವುದು ಅವಶ್ಯಕವೆಂದು ಒಬಾಮಾ ನುಡಿದಿದ್ದಾರೆ. ಅದನ್ನು ಕಾರ್ಯಗತಗೊಳಿಸಲು ಬಂದೂಕುಗಳ ನಿಯಂತ್ರಣಕ್ಕಾಗಿ ಕಾನೂನು ತರುವುದಾಗಿ ಸೂಚನೆ ನೀಡಿದ್ದಾರೆ. ಇದು ನಾಗರಿಕರ ಸ್ವಾತಂತ್ರ್ಯದ ಹರಣ, ಸಂವಿಧಾನದ ಮೊದಲನೆಯ ತಿದ್ದುಪಡಿಗೆ ವಿರುದ್ಧವಾದ್ದು, ಒಬಾಮಾ ಹಿಟ್ಲರನಂತೆ ವರ್ತಿಸುವ ದಿನಗಳು ದೂರವಿಲ್ಲ, ಎಂಬಿತ್ಯಾದಿ ಟೀಕೆಗಳು ಹೇರಳವಾಗಿ ಬರುತ್ತಿವೆ. ಅನೇಕ ಭಿತ್ತಿಪತ್ರಗಳಲ್ಲಿ ಒಬಾಮಾನಿಗೆ ಹಿಟ್ಲರ್ ಮುಖವಾಡ ತೊಡಿಸಿ ಅವನ್ನು ಬೀದಿಗಳಲ್ಲಿ ಹೊತ್ತು ತಿರುಗುವುದು ಮತ್ತು ಒಬಾಮಾ ಭಾಷಣ ನೀಡಲು ಹೋದ ಕಡೆಗಳಲ್ಲಿ ಅದನ್ನು ಪ್ರದರ್ಶಿಸುವುದು ಮಾಮೂಲಿಯಾಗಿದೆ. ಅಂತೆಯೇ, ಬಂದೂಕುಗಳನ್ನು ಹಿಡಿದು ಒಬಾಮಾ ಭಾಷಣ ಮಾಡುವ ಸಭಾಂಗಣದ ಹೊರಗೆ ನೂರಾರು ಮಂದಿ ನಿಲ್ಲುತ್ತಾರೆ. (ಸಭಾಂಗಣದೊಳಕ್ಕೆ ಅವನ್ನು ಕೊಂಡೊಯ್ಯುವಂತಿಲ್ಲವೆಂಬ ಕಾನೂನಿನಿಂದಾಗಿ ಅವರು ಹೊರಗಡೆ ನಿಲ್ಲುತ್ತಾರೆ). "ಕೆನಡಿಗೆ ಒದಗಿದ ಕೇಡು ನಿನಗೂ ಒದಗಿದರೆ ಯಾರು ಜವಾಬ್ದಾರರು" ಎಂದು ಪ್ರಶ್ನಿಸುವ ಭಿತ್ತಿಪತ್ರಗಳು ಒಂದೆರಡು ಕಡೆಗಳಲ್ಲಿ ಒಬಾಮನಿಗೆ ಎಚ್ಚರಿಕೆ ನೀಡುವ ರೂಪದಲ್ಲಿ ಬಂದಿವೆ. ಜನಾಂಗೀಯ ದ್ವೇಷದ ಕುರುಹು ಇದರಲ್ಲೆಲ್ಲಾ ಸ್ಪಷ್ಟವಾಗಿದೆ. ಕರಿಯ ಒಬಾಮಾ ಎಂಬ ಕಾರಣವಲ್ಲದೆ, ಆತನ ಸರ್ಕಾರದ ನೀತಿಗಳು "ಕಮ್ಯುನಿಸ್ಟ್" ಮಾದರಿಗೆ ಹತ್ತಿರವಾಗಿವೆ ಎಂಬ ಮಾಧ್ಯಮಗಳ ಕೂಗು ಪ್ರತಿಭಟನೆಗಳಿಗೆ ಪ್ರಚೋದನೆ ನೀಡುತ್ತಿದೆ. ಅಮೆರಿಕಾದಲ್ಲಿ ರಂಗ ಅಧ್ಯಕ್ಷನಾದರೇನು, ಸಿಂಗ ಅಧ್ಯಕ್ಷನಾದರೇನು, ಆ ದೇಶದ ಆಕ್ರಮಣಕಾರಿ ನೀತಿ ಒಂದೇ ಆಗಿರುತ್ತದೆಂಬ ಭಾವನೆ ಇದ್ದಾಗ್ಗೂ, ಒಬಾಮಾನಿಂದ ವಿಶ್ವವು ಭಿನ್ನವಾದದ್ದನ್ನೇನೋ ನಿರೀಕ್ಷಿಸುತ್ತಿದೆ. ಅಂತಹ ನಿರೀಕ್ಷೆ ಇರಿಸಿಕೊಂಡಿರುವ ಅಮೆರಿಕಾದ ಪ್ರಜೆಗಳೂ ವಿಪುಲವಾಗಿದ್ದಾರೆ. ಆದರೆ ಆತನನ್ನು ಸಹಿಸದ ಮತ್ತು ಆರ್ಥಿಕ ಹಿಂಜರಿತವನ್ನು ತಡೆಯಲು ಆತ ಅನುಸರಿಸುವ ಕ್ರಮಗಳನ್ನು ಒಪ್ಪದ ಪ್ರಜಾವರ್ಗವೂ ದೊಡ್ಡದಾಗಿದೆ. ಇದೆಲ್ಲಾ ಮುಂದಿನ ದಿನಗಳಲ್ಲಿ ಯಾವ ರೂಪ ಪಡೆಯುತ್ತದೆಂದು ಕಾದುನೋಡಬೇಕು.

*   *   *

ಇರಾಕಿನಲ್ಲಿ ಅಮೆರಿಕಾ ಮತ್ತು ಅಮೆರಿಕಾ ಕೈಗೂಸು ಸರ್ಕಾರದ ವಿರುದ್ಧದ ಪ್ರತಿರೋಧವು ಮತ್ತೆ ಉಲ್ಬಣಿಸುತ್ತಿರುವಂತೆ ಆಫ್ಘಾನಿಸ್ತಾನದ ಪರಿಸ್ಥಿತಿಯೂ ಹತೋಟಿ ಮೀರಿಹೋಗುವ ಸಮಯ ಬರುತ್ತಿದೆಯೆಂದು ಭಾಸವಾಗುತ್ತಿದೆ. ನ್ಯಾಟೋ ಕೂಟದ ಸೈನ್ಯದ ತುಕಡಿಗಳನ್ನು ಆ ದೇಶದ ಜನ ಎಂದೂ ಸ್ವಾಗತಿಸಲಿಲ್ಲ. ಈಗಿನ ವಿಶೇಷವೇನೆಂದರೆ, ಆ ದೇಶದ ಅಮೆರಿಕಾ - ಬೆಂಬಲಿತ ಸರ್ಕಾರ ಸಹ ಈ ಸೈನ್ಯದ ತುಕಡಿಗಳ ಕಾರ್ಯಾಚರಣೆಯನ್ನು ಪ್ರಶ್ನಿಸಲಾರಂಭಿಸಿದೆ. ಯಾವಾಗಲೂ ತಾಲಿಬಾನರನ್ನು ದೂಷಿಸುವ ಅಮೆರಿಕಾ, ಶಸ್ತ್ರಾಸ್ತ್ರಗಳ ಪ್ರಯೋಗವೊಂದನ್ನು ಬಿಟ್ಟು ಅವರನ್ನು ಹಿಮ್ಮೆಟ್ಟಿಸಲು ಬೇರೇನಾದರೂ ಕ್ರಮಗಳು ಅಗತ್ಯವೇ ಎಂಬ ಪ್ರಶ್ನೆಯನ್ನೇ ಹಾಕಿಕೊಳ್ಳುವುದಿಲ್ಲ. ಜನರನ್ನು ಸಂತುಷ್ಟಿಗೊಳಿಸದೆ ತಾಲಿಬಾನರನ್ನು ಬಡಿದು ಹಾಕುವುದು ಅಸಾಧ್ಯವೆಂದು ಅಮೆರಿಕಾ ಒಪ್ಪದಿರುವುದರಿಂದ ಅಮೆರಿಕಾವನ್ನು ವಿರೋಧಿಸುವ ಎಲ್ಲ ಆಫ್ಘನರನ್ನೂ "ದೇಶ ವಿರೋಧಿಗಳು" ಎಂದು ಬಣ್ಣಿಸುತ್ತದೆ. ಇವರೆಲ್ಲಾ ತಮ್ಮ ಸ್ವಂತದ ದೇಶವನ್ನೇ ನಾಶಪಡಿಸಲು ಹೊರಟಿದ್ದಾರೆಂದು ವಿಶ್ವವು ನಂಬಬೇಕೆ? ಈ ಮಧ್ಯೆ ಆಫ್ಘಾನಿಸ್ತಾನದಲ್ಲಿ ಚುನಾವಣೆ ನಡೆದಿದೆ. ತಾನೇ ಅಧ್ಯಕ್ಷನನ್ನಾಗಿ ತಂದುಕೂಡಿಸಿದ ಹಮೀದ್ ಕರ್ಜೈ ಗೆದ್ದರೂ ಒಂದೇ, ಸೋತರೂ ಒಂದೇ, ಯಾವುದರಿಂದಲೂ ತನಗೆ ಅನುಕೂಲವಿಲ್ಲವೆಂಬ ಹತಾಶೆಯ ಹಂತವನ್ನು ಅಮೆರಿಕಾ ತಲುಪಿದೆ. ಅಮೆರಿಕಾದ ಆಕ್ರಮಣವನ್ನು ಸ್ವಾಗತಿಸಿದ್ದ ಹಮೀದ್ ಈಗ ಅಮೆರಿಕಾ ಪರವಾಗಿ ಅಷ್ಟೊಂದು ಉತ್ಸುಕತೆ ಮತ್ತು ಶ್ರದ್ಧೆಯನ್ನು ಪ್ರಕಟಿಸುತ್ತಿಲ್ಲ. ಇರಾಕಿನ ನಗರಗಳಿಂದ ತನ್ನ ಸೈನ್ಯವನ್ನು ಹಿಂತೆಗೆದುಕೊಂಡರೂ ಅಮೆರಿಕಾದ ಬಗ್ಗೆ ಜನರ ಉಗ್ರ ಭಾವನೆಯು ಕಡಿಮೆಯಾಗಿಲ್ಲದಿರುವುದು ಒಂದು ಪೇಚಿನ ಪ್ರಸಂಗ; ಅದರ ಜೊತೆಗೆ ಆಫ್ಘಾನಿಸ್ತಾನದ ಕಗ್ಗಂಟನ್ನು ಬಿಡಿಸಲಾಗುತ್ತಿಲ್ಲ. ಆಂತರಿಕ ಅಸಮತೋಲನದ ಜೊತೆ ಇವೂ ಸೇರಿ ಒಬಾಮಾ ಸರ್ಕಾರವು ಸಹನೆಯನ್ನು ಕಳೆದುಕೊಳ್ಳುತ್ತಿದೆ. ಅದರಿಂದ ವಿಶ್ವದಲ್ಲಿ ಬೇರಾವ ಪರಿಣಾಮಗಳನ್ನು ಎದುರಿಸಬೇಕಾಗುವುದೋ ಎಂದು ಜನ ಕೈ ಕೈ ಹಿಸುಕಿಕೊಳ್ಳತೊಡಗಿದ್ದಾರೆ. ■

# ಮರಳಿ ಬಂದಾಳೆ ಮಗಳು

ಮಹಿಳಾ ಕೋರ್ಟ್

ಮನೆಯೆಂಬುದು ಹೆಣ್ಣಿಗೆ ಅತ್ಯಂತ ಸುರಕ್ಷಿತ ಸ್ಥಳ. ಕುಟುಂಬವೆಂಬುದು ಹೆಣ್ಣಿಗಿರುವ ಬಲವಾದ ಆಧಾರ.

ಶರೀಫ್ ಉನ್ನಿಸಾ ೧೯೯೩ರಿಂದ ೨೦೦೩ರವರೆಗಿನ ಹತ್ತು ವರ್ಷ ಅವಧಿಯಲ್ಲಿ ತನ್ನ ಇಬ್ಬರು ಹೆಣ್ಣುಮಕ್ಕಳ ಸಾವಿಗೆ ಸಾಕ್ಷಿಯಾದವರು.

ಮೊದಲ ಮಗಳ ಗಂಡನ ಮನೆಯವರು ಹಬ್ಬಕ್ಕೆ ರೂ. ೫೦೦ಅನ್ನು ತವರುಮನೆಯಿಂದ ತೆಗೆದುಕೊಂಡು ಬರಲು ಪೀಡಿಸಿದರು. ತಂದೆ ಇಲ್ಲದ, ಬಡ ತಾಯಿಯ ನಾಲ್ಕು ತಮ್ಮ ತಂಗಿಯರ ಹಿರಿಯಕ್ಕಳಾಗಿ ಆಕೆಗೆ ಅದನ್ನು ಪೂರೈಸಲು ಸಾಧ್ಯವಿರಲಿಲ್ಲ. ಜಗಳ ರಂಪ ತೆಗೆದು ಗಂಡನ ಮನೆಯವರು ಸೊಸೆ ನಸೀಮ್ ಉನ್ನಿಸಾಳನ್ನು ಸುಟ್ಟು ಹಾಕಿದರು. ಶರೀಫ್ ಉನ್ನೀಸಾ ದುಃಖ, ಭಯ ಆಘಾತಗಳಿಂದ ದಿಕ್ಕು ತೋಚದೆ ಹೋದಳು. ಪೊಲೀಸ್ ಸ್ಟೇಷನ್, ಕೋರ್ಟ್ ಅಲೆಯಲು ಅವಳಿಗೆ ಬೆಂಬಲವೂ ಇರಲಿಲ್ಲ, ಹಣವೂ ಇರಲಿಲ್ಲ. ದಿನನಿತ್ಯ ಹತ್ತು ಬಾಯಿಗಳಿಗೆ ತಿನ್ನಿಸಲು ಅವಳಿಗೆ ೨೪ ಗಂಟೆ ಸಾಲದಿರುವಾಗ ನ್ಯಾಯ ಕೇಳುವುದೇ ಅತೀ ದುಬಾರಿಯಾಯಿತು. ಮಗಳ ಕೊಲೆ ಎಫ್ಐಆರ್ ಹಂತಕ್ಕಿಂತಲೂ ಮುಂದೆ ಹೋಗಲೇ ಇಲ್ಲ. ಹತ್ತು ವರ್ಷಗಳ ನಂತರ ಅಂದರೆ, ೨೦೦೩ರಲ್ಲಿ ಶರೀಫ್ ಉನ್ನಿಸಾಳ ಇನ್ನೊಬ್ಬ ಮಗಳು ಶಬನಾಸ್ ಬಾನು ತನ್ನ ಪತಿಯ ಮನೆಯವರ ವರದಕ್ಷಿಣೆ ಕಿರುಕುಳಕ್ಕೆ ಕೊಲೆಯಾದಳು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಸಾವಿನೊಂದಿಗೆ ಸೆಣಸುತ್ತಿದ್ದ ಮಗಳು ತಾಯಿಯೊಂದಿಗೆ ಎಲ್ಲ ಸತ್ಯಗಳನ್ನೂ ಹೇಳಿದ್ದಳು. ಅವಳನ್ನು ಹಿಂಸಿಸಿ ಬೆಂಕಿ ಹಚ್ಚಿದ್ದನ್ನು ಹೇಳಿದಳು. ಎರಡು ಮೂರು ದಿನಗಳ ನಂತರ ಆಕೆ ಸುಟ್ಟಗಾಯಗಳಿಂದ ಸತ್ತುಹೋದಳು. ಶರೀಫುನ್ನಿಸಾ ಈ ಬಾರಿ ಅಪಾರ ಸಿಟ್ಟನ್ನು ತನ್ನ ಹೊಟ್ಟೆಯೊಳಗಿಟ್ಟುಕೊಂಡಿದ್ದಳು. ಅಳಿಯನನ್ನು ಕಂಡಾಕ್ಷಣ ಮೈಮೇಲೆ ದೆವ್ವ ಬಂದಂತೆ ಅವನನ್ನು ಹೊಡೆದು, ಪರಚಿ ಬಟ್ಟೆಗಳನ್ನು ಹರಿದುಹಾಕಿದಳು. ತಿರುಗಿಬಿದ್ದ ಅವನ ಕೈ ಕಚ್ಚಿದಾಗ ತನ್ನ ಹಲ್ಲುಗಳನ್ನೂ ಮುರಿದುಕೊಂಡಳು. ಪೊಲೀಸ್ ಅವನನ್ನು ಕರೆದೊಯ್ದಾಗಲೇ ಅವಳಿಗೆ ಸಿಟ್ಟು ಇಳಿದಿದ್ದು. ದುಃಖ ಉಮ್ಮಳಿಸಿ ಭೋರೆಂದು ಅತ್ತಳು. ತಬ್ಬಲಿ ಮೊಮ್ಮಗಳ ಮುಖದಲ್ಲಿನ ಜೀವದಾಸೆಯನ್ನು ತನ್ನದಾಗಿಸಿಕೊಂಡು ಇಂದಿಗೂ ನೆನಪು ನೆಚ್ಚಿ ಬದುಕುತ್ತಿದ್ದಾರೆ ಶರೀಫ್ಉನ್ನಿಸಾ ಅವರು.

ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ವಾರ್ಷಿಕ ಸರಾಸರಿ ಇಪ್ಪತ್ತೈದು ಸಾವಿರ ಕೊಲೆಗಳು ಆಗುತ್ತಿವೆ.

ವಿವಾಹ, ಕುಟುಂಬಗಳು ಹೆಣ್ಣುಮಕ್ಕಳಿಗೆ ಎಷ್ಟು ಸುರಕ್ಷಿತ ? ವರದಕ್ಷಿಣೆ ಎಂಬುದು ತಮ್ಮ ಹೆಣ್ಣುಮಕ್ಕಳಿಗೆ ನೀಡುವ ಉಡುಗೊರೆಯೆಂದಾಗಲಿ, ಅವಳಿಗೆ ಗೌರವ ದೊರಕಿಸಿ ಕೊಡುವ ಒಂದು ಸಣ್ಣ ಗ್ಯಾರಂಟಿ ಎಂದಾಗಲಿ ಉಳಿದಿಲ್ಲ. ದಿಢೀರ್ ದುಡ್ಡಿನಾಸೆಗೆ ಕೊಲೆ ಮಾಡಲು ಹಿಂಜರಿಯದ ಈ ದುರಾಸೆಯ ಸಂಸ್ಕೃತಿ ಅತ್ಯಂತ ಅಪಾಯಕಾರಿಯಾದದ್ದು.

ಡಾ|| ಮಿತು ಖುರಾನಾ ಚಿಕ್ಕ ವಯಸ್ಸಿನ ತಾಯಿ. ಗಂಡನ ಕುಟುಂಬ ಬಲವಾಗಿ ನಂಬುವ ಜ್ಯೋತಿಷಿಯೊಬ್ಬನು ಮಿತುವಿನ ಗಂಡನಿಗೆ ಒಂದೇ ಒಂದು ಗಂಡು ಸಂತಾನವಿದೆಯೆಂದು ಭವಿಷ್ಯ ನುಡಿದಿದ್ದ. ಮಿತು ಬಸುರಿಯಾಗಿದ್ದಾಗ ಸ್ಕ್ಯಾನಿಂಗ್‌ನಲ್ಲಿ ಹೆಣ್ಣುಮಗು ಎಂದು ತಿಳಿದ ಕ್ಷಣದಿಂದ ಅವಳ ನರಕಯಾತನೆ ಶುರುವಾಯಿತು. ಈ ಮಗುನನ್ನು ಗರ್ಭಪಾತ ಮಾಡಬೇಕೆಂದು ಗಂಡನ ಮನೆಯವರು ಮಿತುವನ್ನು ಹಿಂಸಿಸತೊಡಗಿದರು. ಡಾ|| ಮಿತು ಖುರಾನಾ ತನ್ನ ತವರಿನ ರಕ್ಷಣೆಯಲ್ಲಿ ಹೆಣ್ಣುಮಗುವಿನ ತಾಯಿಯಾದಳು. ಈ ಹೆಣ್ಣುಮಗು ಇದ್ದಷ್ಟು ದಿನ ತಮಗೆ ಗಂಡು ಸಂತಾನವಾಗಲಾರದೆಂದು ಬಲವಾಗಿ ನಂಬಿದ್ದ ಗಂಡನ ಮನೆಯವರು ಒಂದಿಲ್ಲೊಂದು ಉಪಾಯ ಹೂಡಿ ಆ ಹೆಣ್ಣುಮಗುವನ್ನು ಸಾಯಿಸಲು ಯತ್ನಿಸಿದರು. ಪ್ರತಿಬಾರಿಯೂ ಮಿತು ಮಗುವನ್ನು ರಕ್ಷಿಸಿಕೊಂಡು ತನ್ನ ವಿವಾಹವನ್ನು ರಕ್ಷಿಸಿಕೊಳ್ಳಲು ಯತ್ನಿಸುತ್ತಿದ್ದಳು. ಒಂದು ದಿನ ಅತ್ತೆ ಮನೆಯಲ್ಲಿ ಅವಳ ಪುಟ್ಟ ಮಗಳನ್ನು ಮಹಡಿಯಿಂದ ತಳ್ಳಿಬಿಟ್ಟರು. ಅಂದು ಜಾಗೃತವಾದ ಮಿತು ತನ್ನ ಕಂದಮ್ಮನನ್ನು ಎತ್ತಿಕೊಂಡು ಹೊರನಡೆದಳು. ಮಿತುವಿನ ಗಂಡ ತನಗೆ ಒಂದೇ ಒಂದು ಗಂಡು ಸಂತಾನವೆಂದು ಭವಿಷ್ಯ ನುಡಿದಿದ್ದ ಜ್ಯೋತಿಷಿಯನ್ನು ಗೌರವಿಸಿದಷ್ಟು ತನ್ನ ಹೆಂಡತಿಯನ್ನು

**ಚಿತ್ರ ಅಯ್ಯರ್**

**ಕೈಗಾರಿಕೀಕರಣ ಹೆಚ್ಚಿದಂತೆಲ್ಲ ಭೂಮಿಯನ್ನೇ ನೆಚ್ಚಿದ್ದ ಕುಟುಂಬಗಳು ನೆಲಕ್ಕುರುಳತೊಡಗಿದ್ದಾವೆ. ಲಕ್ಷ ಸಂಖ್ಯೆಗಳಲ್ಲಿ ಮಹಿಳಾ ಉದ್ಯೋಗಿಗಳು ಸೃಷ್ಟಿಯಾಗುತ್ತಿದ್ದಾರೆ. ದೇಶದ ಆರ್ಥಿಕ ಪ್ರಗತಿಗೆ ಮಹಿಳೆಯರ ಶ್ರಮ ಅವಶ್ಯವಾಯಿತು. ಈ ನೌಕರಿ, ಸಂಬಳ ಮಹಿಳೆಯರನ್ನು ಸಬಲರನ್ನಾಗಿ ಮಾಡುತ್ತಿದೆಯೇ ? ಸಂಪಾದಿಸಿದ ಹಣದ ಶೇ. 90 ಭಾಗ ಮದುವೆಯ ಖರ್ಚಿಗೆಂದೂ, ಆಗಾಗ್ಗೆ ಗಂಡನ ಮನೆಯವರನ್ನು ಸಮಾಧಾನಗೊಳಿಸಲು ಕಂತುಗಳಲ್ಲಿ ವರದಕ್ಷಿಣೆಯನ್ನೂ (ಸಂಬಳ ರೂಪದಲ್ಲಿ) ಪೂರೈಸುವುದೇ ಆಗಿದೆ. ಸಬಲೀಕರಣದ ನೆರಳಿನಲ್ಲಿ ಹೆಣ್ಣು ಸಾಲಗಾರಳೂ ಆಗುತ್ತಿದ್ದಾಳೆ.**





ಗೌರವಿಸಲಿಲ್ಲ. ಮಿತಿಮೀರಿದ ಮೌಢ್ಯ, ಕ್ರೌರ್ಯಗಳನ್ನು ಬೆಳೆಸಿಕೊಂಡಿದ್ದ ಅವನ ಜೊತೆ ಸಂಸಾರ ಮಾಡುವುದಾದರೂ ಹೇಗೆ ? ಮಗು ಹೆಣ್ಣಾಗಿ ಹುಟ್ಟಿದ್ದು ಯಾರ ತಪ್ಪು ?

ಸಕ್ಕೂಬಾಯಿ ಹಂಚಿಕೊಂಡ 'ಕೇವಲ ಹೆಂಗಸರ ಮಾತು' ಬೆಚ್ಚಿಬೀಳಿಸಿತು. ತನ್ನ ಸಮುದಾಯದಲ್ಲಿ ಹುಡುಗಿಯ ವಯಸ್ಸು ಹೆಚ್ಚಿದಂತೆಲ್ಲ ಹೆಚ್ಚು ವರದಕ್ಷಿಣೆ ಹೊಂಚಬೇಕು ಎಂಬ ದಿಗಿಲಿನಿಂದಲೇ ಪುಟ್ಟ ಹೆಣ್ಣುಮಕ್ಕಳಿಗೆ ವಿವಾಹ ಮಾಡಲಾಗುತ್ತಿದೆ. ಇದು ವಿದ್ಯಾವಂತರು ನಂಬಿಕೊಂಡು ಖಂಡಿಸುವ 'ಮೂಢ ಪದ್ಧತಿ' ಅಲ್ಲ. ವರದಕ್ಷಿಣೆಯ ಬೇಡಿಕೆಗಾಗಿ; ಅದನ್ನು ಪೂರೈಸಲಾಗದ ಬಡತನಕ್ಕಾಗಿ ಎಂದು ತಿಳಿಮಾತಿನಲ್ಲಿ ಆಕೆ ಹೇಳುತ್ತಿದ್ದಾಗ ನಮಗೆ ನಾಚಿಕೆಯಾಗಿತ್ತು.

* ಒಂದಾನೊಂದು ಕಾಲದಲ್ಲಿ ಉಡುಗೊರೆ ಎಂದು ಸುರಕ್ಷತೆಗೆ ಎಂದೋ ಕೊಡುತ್ತಿದ್ದ 'ವರದಕ್ಷಿಣೆ' ಈಗ ಪದ್ಧತಿಯಾಗಷ್ಟೇ ಉಳಿದಿಲ್ಲ. ಆಧುನಿಕ ಭಾರತದಲ್ಲಿ ದಿಢೀರ್ ದುಡ್ಡು ಮಾಡುವ ಸುಲಭ ಉಪಾಯ.
* ವಿದ್ಯಾವಂತರು ಬೇರೆ ಬೇರೆ ರೂಪಗಳಲ್ಲಿ ಹೆಚ್ಚು ವರದಕ್ಷಿಣೆ ಕೊಡುತ್ತಿದ್ದಾರೆ. ಇದು ತಮ್ಮ ಅಂತಸ್ತಿನ ಪ್ರಶ್ನೆ ಎಂದು ವಿದ್ಯಾವಂತ ಹೆಣ್ಣುಮಕ್ಕಳೂ ಸಹ ನಂಬುತ್ತಿದ್ದಾರೆ.
* ಹೆಚ್ಚುತ್ತಿರುವ ವರದಕ್ಷಿಣೆ ಪಿಡುಗು ಹೆಣ್ಣು ಹೆತ್ತವರಿಗೆ ದೊಡ್ಡ ಸಮಸ್ಯೆ ಎಂದಾದಲ್ಲಿ ಹೆಣ್ಣು ಹುಟ್ಟುವುದನ್ನೇ ತಪ್ಪಿಸಲು ವಿಜ್ಞಾನ, ತಂತ್ರಜ್ಞಾನಗಳೂ ಶೀಘ್ರವಾಗಿ ಮುಂದುವರೆಯುತ್ತಿವೆ. ನಗರ ಅಥವಾ ಹಳ್ಳಿಗಳಲ್ಲಿ ಕೇವಲ ರೂ. ೨೦೦ಕ್ಕೆ ಹೆಣ್ಣು ಭ್ರೂಣಹತ್ಯೆಗಳನ್ನು ಕ್ಲಿನಿಕ್‌ಗಳಲ್ಲೇ ಮಾಡಲಾಗುತ್ತಿದೆ. ಭಾರತದಲ್ಲಿ ಸುಮಾರು ೨೦ ಲಕ್ಷ ಹೆಣ್ಣು ಭ್ರೂಣಗಳನ್ನು ಪ್ರತಿವರ್ಷ ಗರ್ಭಪಾತ ಮಾಡಲಾಗುತ್ತಿದೆ.
  ಅಲ್ಟ್ರಾಸಾನಿಕ್ ಮೆಶೀನ್‌ಗಳಿಗೆ ಅಭಿವೃದ್ಧಿಯ ಕಿರೀಟ.

ರೈತರ ಆತ್ಮಹತ್ಯೆ ಕುರಿತಂತೆ ರಂಜನಾ ಪಾಡಿ ಅವರ ಸಮೀಕ್ಷೆಯ ವಿವರಗಳು ಬೆಚ್ಚಿಬೀಳಿಸುವಂಥದ್ದು. ಉತ್ತರ ಭಾರತದ ಬಹಳಷ್ಟು ಸಮುದಾಯಗಳಲ್ಲಿ ವರದಕ್ಷಿಣೆ ಬೇಡಿಕೆ ಮಿತಿಮೀರಿದ್ದು, ಹಳ್ಳಿಗಳಲ್ಲಿರುವ ರೈತರು ಬೀಜಗಳಿಗೆಂದೋ, ಕುರಿಸಾಗಾಣಿಕೆಗೆಂದೋ, ಗೊಬ್ಬರಕ್ಕೆಂದೋ ಸಾಲ ಮಾಡಿ ತಮ್ಮ ಹೆಣ್ಣುಮಕ್ಕಳ ಮದುವೆ ಮಾಡುವುದು ಸಾಮಾನ್ಯವಾಗಿಬಿಟ್ಟಿದೆ. ತನ್ನ ತಂಗಿಯ ಮದುವೆಗೆಂದು ಎರಡು ಲಕ್ಷ ರೂಪಾಯಿಗಳಷ್ಟು ಸಾಲ ಮಾಡಿ ಅದನ್ನು ತೀರಿಸುವ ಯಾವ ದಾರಿಯನ್ನೂ ಕಾಣದೆ ಅಣ್ಣನೊಬ್ಬ ಮರಕ್ಕೆ ನೇಣುಹಾಕಿಕೊಂಡ ಘಟನೆ ನಮ್ಮ ಅಂತರಾತ್ಮವನ್ನು ಕೆಣಕುತ್ತದೆ.

ತಮಿಳುನಾಡಿನ ಅನೇಕ ಗಾರ್ಮೆಂಟ್ ಫ್ಯಾಕ್ಟರಿಗಳಲ್ಲಿ ಹೊಸದೊಂದು ಪ್ಯಾಕೇಜ್ ಡೀಲ್ ಸೃಷ್ಟಿಯಾಗಿದೆ. ಹೆಸರು 'ಸುಮಂಗಲಿ ತಿಟ್ಟಂ'. ತಮ್ಮ ಫ್ಯಾಕ್ಟರಿಗಳಲ್ಲಿ ಎರಡು ವರ್ಷ ಸತತವಾಗಿ ದುಡಿದರೆ ಆ ಯುವತಿಯ ಮದುವೆ ಖರ್ಚೆಂದು ಸ್ವಲ್ಪ ವರದಕ್ಷಿಣೆ ಹಣ, ಬೆಳ್ಳಿ ಸಾಮಾನು, ಪಾತ್ರೆ ಪಗಡಿ ಮತ್ತು ಜವಳಿ ಕೊಡಲಾಗುವುದೆಂದು ಪ್ಯಾಕೇಜ್ ಡೀಲ್. ದಿನಂಪ್ರತಿ ೧೨ ಗಂಟೆಗೂ ಮೀರಿ, ವಾರದ ರಜೆಯೂ ಇಲ್ಲದೆ, ತಿಂಗಳ ಸಂಬಳವನ್ನು ಕಣ್ಣಾರೆ ನೋಡದೆ ದೂರದೂರುಗಳಿಗೆ ವಲಸೆ ಬಂದು ಹಾಸ್ಟೆಲ್‌ಗಳೆಂಬ ದೊಡ್ಡಿಗಳಲ್ಲಿ ಸಾವಿರಾರು ಯುವತಿಯರು ಬದುಕು ಸವೆಸುತ್ತಿದ್ದಾರೆ. ತಮ್ಮ ವಿವಾಹದ ಅಥವಾ ತಂಗಿಯರ ವಿವಾಹದ ಖರ್ಚಿಗೆಂದು ಜೀತ ಮಾಡುತ್ತಿದ್ದಾರೆ. 'ಸುಮಂಗಲಿ ತಿಟ್ಟಂ' ನ ಕಾಂಟ್ರಾಕ್ಟ್ ಮುಗಿದರೆ ಕೈಗೆ ಬಿಡಿಗಾಸೂ ಇಲ್ಲ.

ಕೈಗಾರಿಕೀಕರಣ ಹೆಚ್ಚಿದಂತೆಲ್ಲ ಭೂಮಿಯನ್ನೇ ನೆಚ್ಚಿದ್ದ ಕುಟುಂಬಗಳು ನೆಲಕ್ಕುರುಳತೊಡಗಿದ್ದಾವೆ. ಲಕ್ಷ ಸಂಖ್ಯೆಗಳಲ್ಲಿ ಮಹಿಳಾ ಉದ್ಯೋಗಿಗಳು ಸೃಷ್ಟಿಯಾಗುತ್ತಿದ್ದಾರೆ. ದೇಶದ ಆರ್ಥಿಕ ಪ್ರಗತಿಗೆ ಮಹಿಳೆಯರ ಶ್ರಮ ಅವಶ್ಯವಾಯಿತು. ಈ ನೌಕರಿ, ಸಂಬಳ ಮಹಿಳೆಯರನ್ನು ಸಬಲರನ್ನಾಗಿ ಮಾಡುತ್ತಿದೆಯೇ ? ಸಂಪಾದಿಸಿದ ಹಣದ ಶೇ. ೬೦ ಭಾಗ ಮದುವೆಯ ಖರ್ಚಿಗೆಂದೂ, ಆಗಾಗ್ಗೆ ಗಂಡನ ಮನೆಯವರನ್ನು ಸಮಾಧಾನಗೊಳಿಸಲು ಕಂತುಗಳಲ್ಲಿ ವರದಕ್ಷಿಣೆಯನ್ನೂ (ಸಂಬಳ ರೂಪದಲ್ಲಿ) ಪೂರೈಸುವುದೇ ಆಗಿದೆ. ಸಬಲೀಕರಣದ ನೆರಳಿನಲ್ಲಿ ಹೆಣ್ಣು ಸಾಲಗಾರಳೂ ಆಗುತ್ತಿದ್ದಾಳೆ.

**ಹೆಂಗಸರು ಯಾವ ಜಾತಿ ?**

ಮಧುಕರ ಹೆಬ್ಬಾರರು ಮೇಲ್ಜಾತಿಗೆ ಸೇರಿದ ೪೦ರ ಗಡಿ ದಾಟುತ್ತಿರುವ ಅವಿವಾಹಿತರು, ಬೇಸಾಯವನ್ನೇ ನೆಚ್ಚಿ ತಮ್ಮ ಹಳ್ಳಿಯಲ್ಲೇ ಬದುಕು ಸವೆಸಬೇಕೆಂಬ ತಮ್ಮ ತೀರ್ಮಾನದಿಂದ ತಮಗೆ ತಮ್ಮ ಸಮುದಾಯದಲ್ಲಿ ಹೆಣ್ಣು ಸಿಕ್ಕಲಿಲ್ಲವೆಂದು ನೊಂದುಕೊಂಡರು. ಈ ಪರಿಸ್ಥಿತಿ ತನ್ನೊಬ್ಬನದೇ ಅಲ್ಲ. ಇದೊಂದು ಸಾಮಾಜಿಕ ದುರಂತವಾಗಿ ಹಬ್ಬುತ್ತಿದೆ. ತನ್ನ ಊರಿನಲ್ಲಿ ಕೆಲವು ವರ್ಷಗಳಿಂದ ಕೆಳಜಾತಿಯ ಹೆಣ್ಣು ಮಕ್ಕಳನ್ನು ಮೇಲ್ಜಾತಿಗೆ 'ಪರಿವರ್ತನೆ' ಮಾಡಿ ಅವರನ್ನು ಅವರ ಸಮುದಾಯಗಳಿಂದ ಸಂಪೂರ್ಣ ದೂರವಾಗುವಂತೆ ಸಂಸ್ಕಾರ ಮಾಡಿ ಆ ಹೆಣ್ಣುಮಕ್ಕಳೊಂದಿಗೆ ವಿವಾಹ ಮಾಡಿಸಲಾಗುತ್ತಿದೆ ಎಂಬ ಮಧುಕರ ಅವರ ಮಾತುಗಳು ನಮ್ಮ ಮನಃಸಾಕ್ಷಿಯನ್ನು ಇರಿಯುತ್ತವೆ. ವರದಕ್ಷಿಣೆ ಕೊಡಲಾಗದ ಬಡ ಕುಟುಂಬಗಳು ಹೀಗೆ ತಮ್ಮ ಹೆಣ್ಣು ಮಕ್ಕಳನ್ನು 'ತ್ಯಾಗ' ಮಾಡಲು ಸಜ್ಜಾಗಿದ್ದಾರೆ ಎಂದು ಅವರು ವಿಷಾದಿಸಿದರು.

ವರದಕ್ಷಿಣೆ ಕೊಡುವುದು ಮತ್ತು ತೆಗೆದುಕೊಳ್ಳುವುದು ಕೆಲವು ಶ್ರೀಮಂತ ಕುಟುಂಬಗಳ ಪ್ರತಿಷ್ಠೆಯ ಸಂಕೇತವಾಗಿತ್ತು. ದೇಶ ಮುಂದುವರೆದಂತೆ ಈ ಪ್ರತಿಷ್ಠೆಯ ಸಂಕೇತಗಳೂ ಬೆಳೆದು ಉಳಿದ ಮಧ್ಯಮ ಹಾಗೂ ಬಡ ಕುಟುಂಬಗಳನ್ನೂ ಆವರಿಸಿಕೊಳ್ಳುತ್ತಿವೆ. ಎಷ್ಟೋ ತಳ ಸಮುದಾಯಗಳು ಸ್ತ್ರೀಧನ, ತೆರ, ಮೆಹರ್, ಕನ್ಯಾಶುಲ್ಕದಂತಹ 'ಪದ್ಧತಿ'ಗಳನ್ನು ಅನುಸರಿಸುತ್ತ ತಮ್ಮ ಹೆಣ್ಣುಮಕ್ಕಳಿಗೆ ಗೌರವದ ಸ್ಥಾನವನ್ನು ಭದ್ರಪಡಿಸುತ್ತಿದ್ದವು. ಆರ್ಥಿಕ, ರಾಜಕೀಯ ಮುಖ್ಯವಾಹಿನಿಗೆ ಇವರನ್ನು ಸ್ಥಿತ್ಯಂತರಗೊಳಿಸುವ ಪ್ರಕ್ರಿಯೆಯಲ್ಲಿ ಬಲಿಷ್ಠರ ಅನಿಷ್ಟವಾಗಿದ್ದ 'ವರದಕ್ಷಿಣೆ'ಯ ಏಕಮುಖ ಪದ್ಧತಿಯನ್ನು ರವಾನಿಸಲಾಯಿತು.

* ಈಗ ಎಲ್ಲ ಜಾತಿಗಳಲ್ಲಿ, ಎಲ್ಲ ಧರ್ಮಗಳಲ್ಲಿ ವರದಕ್ಷಿಣೆ ಪಿಡುಗು ತಳವೂರಿದೆ.
* ದಲಿತ ಮತ್ತು ಗಿರಿಜನ ಸಮುದಾಯಗಳೂ ಸಹ ವರದಕ್ಷಿಣೆ ದಾಳಿಗೆ ತತ್ತರಿಸಿಹೋಗಿವೆ.

ಈಗ ಅಲ್ಲಲ್ಲಿ ಹಲವಾರು ತಾಲ್ಲೂಕುಗಳಲ್ಲಿ ನಾರಿ ಅದಾಲತ್, ಮಹಿಳಾ ಪಂಚಾಯತ್‌ಗಳು ತಲೆ ಎತ್ತುತ್ತಿವೆ. ಹಿಂಸೆ, ದೌರ್ಜನ್ಯಕ್ಕೊಳಗಾದ ಮಹಿಳೆಯರಿಗೆ ಸಕ್ರಿಯ ಬೆಂಬಲವನ್ನು ಇವು ನೀಡುತ್ತವೆ. ಮಹಿಳೆಯರ ಸಬಲೀಕರಣದ ನಿಜವಾದ ಅರ್ಥವನ್ನು ವಿಸ್ತರಿಸುವಲ್ಲಿ ನಿರಂತರ ತೊಡಗಿಸಿಕೊಂಡ ಈ ನಾರಿ ಅದಾಲತ್, ಮಹಿಳಾ

ಪಂಚಾಯತ್‌ಗಳು ನೊಂದ ಹೆಣ್ಣು ಮಕ್ಕಳಿಗೆ ಸಾಂತ್ವನದ ಆಸರೆ ನೀಡುತ್ತಿವೆ.

ಇವ್ಯಾವುದೂ ಕಾಲ್ಪನಿಕ ಕತೆಗಳಲ್ಲ, ಎಲ್ಲವೂ ಸತ್ಯ ಘಟನೆಗಳು. ಇವುಗಳನ್ನು ಹಂಚಿಕೊಂಡ ಸ್ನೇಹಿತರು: ಕವಿತ, ಬಿಸ್ಮಾಯತಿ ಪಾತ್ರೊ, ಶರೀಫ ಉನ್ನಿಸಾ, ಸಬೀನಾ ಖಾತುನ್, ಸಿದ್ದಮ್ಮ, ರಮಾದೇವಿ, ಸುಪ್ವಿ, ಅನಿತ, ಸಕ್ಕೂಬಾಯಿ, ಸಫೀನಾ , ಡಾ|| ಮಿತು ಖುರಾನಾ, ತನ್ವಿ ಸಕ್ಸೇನಾ, ತೆರೇಸಿಯಮ್ಮ, ಸೆಲ್ವಿ, ಅಂಜನಾ, ನವೀಸಾ, ರಂಜನಾ ಪಾಡಿ, ಶಿವಪ್ರಭ, ಮಧುಕರ ಹೆಬ್ಬಾರ, ಡಾ|| ಫಾತಿಮಾ, ಸಿದ್ದಮ್ಮ, ಪನ್ನ ಕಾಜಲ್, ಪೂರ್ಣಿಮಾ – ಇನ್ನೂ ಅನೇಕರು. ಬೆಂಗಳೂರಿನ 'ವಿಮೋಚನ' ಹಾಗೂ 'ಏಷ್ಯಾ ಮಹಿಳಾ ಮಾನವಹಕ್ಕುಗಳ ಪರಿಷತ್ತು' ಆಯೋಜಿಸಿದ್ದ 'ಮಹಿಳಾ ನ್ಯಾಯಾಲಯ'ದಲ್ಲಿ ಹಂಚಿಕೊಂಡ ಕತೆಗಳಿವು, ಕಾಳಜಿಗಳು ಇವು.

ಜುಲೈ ೨೮ರಂದು ಕ್ರೈಸ್ಟ್ ವಿಶ್ವವಿದ್ಯಾಲಯದಲ್ಲಿ ನಡೆದ 'ರಾಷ್ಟ್ರಮಟ್ಟದ ಮಹಿಳಾ ನ್ಯಾಯಾಲಯದಲ್ಲಿ' ಪಾಲ್ಗೊಂಡಿದ್ದ ಜ್ಯೂರಿಗಳು (ತೀರ್ಪುಗಾರರು) ಜಸ್ಟೀಸ್ ಕೃಷ್ಣ ಅಯ್ಯರ್, ಕಮಲಾ ಭಾಸಿನ್, ವೀಣಾ ಓಡೆನ್‌ಬರ್ಗ್, ಶಿವ ವಿಶ್ವನಾಥನ್, ಮಲ್ಲಿಕಾ ಸಾರಾಭಾಯಿ ಹಾಗೂ ವಂದನಾ ಶಿವ.

ಇದು ಒಂದು ಕಾರ್ಯಕ್ರಮವಷ್ಟೇ ಆಗಿರಲಿಲ್ಲ, ಒಂದು ಪ್ರಕ್ರಿಯೆಯೂ ಹೌದು. ಈ ನಿಟ್ಟಿನಲ್ಲಿ ಕಳೆದ ಒಂದು ತಿಂಗಳ ಕಾಲ ಹಲವಾರು ಜಿಲ್ಲೆಗಳಲ್ಲಿ ಸಾರ್ವಜನಿಕ ವಿಚಾರಣೆಗಳು, ಕಾರ್ಯಾಗಾರಗಳು, ಚರ್ಚಾಗೋಷ್ಠಿಗಳು, ಕವನ ಸ್ಪರ್ಧೆ, ನಾಟಕ ಪ್ರದರ್ಶನ, ಸಿನಿಮಾ, ಉತ್ಸವಗಳು ಹಾಗೂ ಕ್ರಿಯಾತ್ಮಕ ಸಂವಾದಗಳೂ ನಡೆದವು.

ಜುಲೈ ೨೬ರಂದು ಮಾನವೀಯತೆಯನ್ನು ಪೋಷಿಸುವ ಮಹಿಳೆಯರು ಹಾಗೂ ಪುರುಷರು ಕಪ್ಪು ಉಡುಪು ಧರಿಸಿ ಮಹಾತ್ಮಾ ಗಾಂಧಿಯ ನೆರಳಿನಲ್ಲಿ ನಿಂತು ಜಗತ್ತಿನಾದ್ಯಂತ ನಡೆಯುತ್ತಿರುವ ಅನ್ಯಾಯ, ದೌರ್ಜನ್ಯಗಳನ್ನು ಖಂಡಿಸಿದರು.

ಜುಲೈ ೨೭ರಂದು ಮಹಿಳಾ ನ್ಯಾಯಾಲಯಕ್ಕೆ ಪೂರಕವಾಗಿ ಆರು ದುಂಡು ಮೇಜಿನ ಸಭೆಗಳನ್ನು ನಡೆಸಲಾಯಿತು.

ಸಮೂಹ ಮಾಧ್ಯಮ, ಜಾಗತೀಕರಣ, ಕಾನೂನು, ವಿಜ್ಞಾನ ಮತ್ತು ತಂತ್ರಜ್ಞಾನಗಳ ಅಡ್ಡಪರಿಣಾಮಗಳ ಬಗ್ಗೆ ತೀವ್ರವಾಗಿ ಚರ್ಚಿಸಲಾಯಿತು.

ಜುಲೈ ೨೮ರಂದು ನ್ಯಾಯಾಲಯಕ್ಕೆ ಚಾಲನೆ ಇತ್ತ ಜಸ್ಟೀಸ್ ಕೃಷ್ಣ ಅಯ್ಯರ್ ಅವರು ವರದಕ್ಷಿಣೆ ಪದ್ಧತಿಗೆ ಮರಣದಂಡನೆಯನ್ನು ವಿಧಿಸಿದರು. ಜುಲೈ ೨೮ರಂದು ದೇಶಾದ್ಯಂತ 'ವರದಕ್ಷಿಣೆ ವಿರೋಧಿ ದಿನವನ್ನು' ಆಚರಿಸಲು ಕರೆ ನೀಡಿದರು.

ಜುಲೈ ೨೯ರಂದು ಕೋರ್ಟ್ ನಂತರದ ಸಮುದಾಯ ಸಂವಾದದಲ್ಲಿ ಪಾಲ್ಗೊಂಡಿದ್ದವರು ಭವಿಷ್ಯದ ಕಾರ್ಯ ಚಟುವಟಿಕೆಗಳ ಬಗ್ಗೆ ಚಿಂತನ ಮಂಥನ ನಡೆಸಿದರು.

ಪ್ರಚಲಿತ ಯಾವುದೇ ಕಾನೂನು ಸಹ ಈ ಹೆಚ್ಚುತ್ತಿರುವ ದೌರ್ಜನ್ಯಕ್ಕೆ ಕಡಿವಾಣ ಹಾಕುವಲ್ಲಿ ವಿಫಲತೆ ಕಂಡಿದೆ. ಭ್ರಷ್ಟಾಚಾರ, ಪುರುಷಪ್ರಧಾನ ಮೌಲ್ಯಗಳು ಒಂದೆಡೆಯಾದರೆ, ಮತ್ತೊಂದೆಡೆ ಕಾನೂನಿನ ಜಗತ್ತಿಗೂ ವಾಸ್ತವಿಕ ಬದುಕಿಗೂ ಇರುವ ಅಜಗಜಾಂತರ ವ್ಯತ್ಯಾಸ. ಹಕ್ಕು ಹಾಗೂ ಸಬಲೀಕರಣದ ಅಂಗವು ಹಾಗೂ ಹೋರಾಟಗಳು ಮಹಿಳೆಯರಿಗೆ ನ್ಯಾಯ ದೊರಕಿಸಿ ಕೊಟ್ಟಿವೆಯೇ ? 'ನ್ಯಾಯ'ದ ವಿವಿಧ ಆಯಾಮಗಳೇನು ? ಹತ್ತು ಹಲವು ವಿಶಿಷ್ಟ ಸಂಸ್ಕೃತಿಗಳಲ್ಲಿ ಜೀವಿಸುತ್ತಿರುವ ಮಹಿಳೆಯರಿಗೆ ಏಕ ಮುಖ ನ್ಯಾಯ ಎಷ್ಟರ ಮಟ್ಟಿಗೆ ನ್ಯಾಯ ವೆಂದಾಗುತ್ತದೆ ? ಇವೇ ಮುಂತಾದ ಪ್ರಶ್ನೆಗಳನ್ನು ಈ ಮೂರು ದಿನಗಳ ನ್ಯಾಯಾಲಯದಲ್ಲಿ ಚರ್ಚಿಸಲಾಯಿತು.

ಒಟ್ಟಾರೆ ಎಲ್ಲರಲ್ಲೂ ಒಂದು ಹೊಸ ಚೇತನವೊಂದು ತುಂಬಿತ್ತು. ಹೊಸ ಜಾಗೃತಿಯೊಂದನ್ನು ತಮ್ಮ ಊರುಗಳಿಗೆ ಒಯ್ಯುವುದಾಗಿ ಆಶಿಸಿದರು ಮತ್ತು ಜೀವನ ಪರ್ಯಂತದ ಸ್ನೇಹವನ್ನು ಹಾರೈಸಿದರು.

**ಚಿತ್ರ ಅಯ್ಯರ್**
ನಂ - ೧೪, ೩ನೇ ಮೈನ್, ಬಿಇಎಂಎಲ್ ಲೇಔಟ್
ಬಸವೇಶ್ವರ ನಗರ, ಬೆಂಗಳೂರು - ೭೯

# ಹಂಗಿಲ್ಲದ ಅಂಗಳ



ನಾವು ಕಲ್ಲು ಒಡೆಯುತ್ತೇವೆ
ಯಾರಿಗೂ ಕಲ್ಲು ಹೊಡೆಯುವುದಿಲ್ಲ
ನಾವು ಕಲ್ಲು ಕಟೆಯುತ್ತೇವೆ
ಯಾರೊಬ್ಬರ ಕಣ್ಣಲ್ಲಿ ರಕ್ತ ಬಿಡಿ;
ಹನಿ ಕಣ್ಣೀರು ಬರಿಸುವುದಿಲ್ಲ

ನಾವೇ ಒಡೆದ, ನಾವೇ ಕಟೆದ ಕಲ್ಲುಗಳಿಂದಲ್ಲವೇ
ಇದೇ ನೆಲದ ಮೇಲೆ
ಗುಡಿ, ಗುಂಡಾರ, ಮಠ, ಮಸೀದೆ, ಚರ್ಚು
ಕಟ್ಟೆ, ಕಾಲುವೆ, ಮನೆ, ಮಹಲು
ನಿಮ್ಮ ಮನೆಯೊಳಗಿನ ಜಗುಲಿ ಆಕಾರಗೊಂಡದ್ದು
ಅಷ್ಟೇ ಏಕೆ ?
ನೀವು ಏಕಾಂತದಲಿ ಆಡುತ್ತ ಪಿಸುಮಾತು
ಅಂಗಾತ, ಮುಂಗಾತ
ಮಂಗಾಟ ಆಡುವುದು
ಊಸರವಳ್ಳಿಯಾಗಿ ರೂಪಾಂತರಗೊಳ್ಳುವುದು
ಲೋಕಾಂತವಾಗುವುದು.

ನಾವು ಕಲ್ಲು ಒಡೆಯುತ್ತೇವೆ
ಯಾರೊಬ್ಬರ ಮನಸ್ಸು ಒಡೆಯುವುದಿಲ್ಲ
ನಾವು ಕಲ್ಲು ಕಟೆಯುತ್ತೇವೆ
ಯಾರೊಬ್ಬರ ಕನಸ್ಸು ಕೆಡಿಸುವುದಿಲ್ಲ.

ನಾವು ಕಲ್ಲು ಒಡೆಯುತ್ತೇವೆ
ದೇಶ ಒಡೆಯುವುದಿಲ್ಲ, ಕಟ್ಟುತ್ತೇವೆ
ನಾವು ಕಲ್ಲು ಕಟೆಯುತ್ತೇವೆ
ಕೋಶ ಕೆಡಿಸುವುದಿಲ್ಲ, ಬಿಡಿಸುತ್ತೇವೆ.

ನಾವೇ ಒಡೆದ, ಕಟೆದ ಕಲ್ಲುಗಳಿಂದ
ಗಂಡು, ಹೆಣ್ಣು, ವರ್ಗ, ವರ್ಣ
ಧರ್ಮ, ಭಾಷೆ, ಗಡಿಗಳನು ಬೆಸೆಯುತ್ತೇವೆ
ಚಂದದ ಬಳ್ಳಿ ಚಿಗುರಿಸುತ್ತ
ಚೆಲುವಿನ ಚಿತ್ತಾರ ಬಿಡಿಸುತ್ತೇವೆ
ಹೂವಿನ ಹಂದರ ಹಬ್ಬಿಸುತ್ತೇವೆ.

ನಾವು ಒಡೆದ, ಕಟೆದ ಕಲ್ಲಿನಲಿ
ಕಾಣಬಹುದು, ಅಲ್ಲಮನ ಅನುಭಾವ
ಬಸವಣ್ಣನ ಕಾಯಕ, ದಾಸೋಹ, ಪ್ರಸಾದ
ಸಿದ್ಧರಾಮನ ಕರ್ಮಯೋಗ.

ಉಪವಾಸದಲ್ಲೂ
ನಮ್ಮದು ಹಂಗಿಲ್ಲದ ಅಂಗಳ
ಇಣುಕಿ, ಇಣುಕಿ ನೋಡುತ್ತಾನೆ ಚಂದಿರ.

**ಡಾ|| ಸತ್ಯಾನಂದ ಪಾತ್ರೋಟ**
'ಜಾಜಿ ಮಲ್ಲಿಗೆ' ಸೆಕ್ಟರ್ ನಂ. ೪೨, ಮ.ನಂ. ೪೪
ನವನಗರ, ಬಾಗಲಕೋಟ



ನಭಾವಲೋಕನ

# ಛಾಯಾಗ್ರಾಹಕರಿಗೆ ಸದವಕಾಶಗಳು

**ಹೊ**ಸದೊಂದು ದುರ್ಬೀನು, ದೂರದರ್ಶಕ ಅಥವಾ ಈಚೆಗೆ ಜನಪ್ರಿಯವಾಗಿರುವ ಡಿಜಿಟಲ್ ಕ್ಯಾಮೆರಾಗಳನ್ನು ಕೊಳ್ಳುವವರಿಗೆ ಆಕಾಶ ಯಾವಾಗಲೂ ಕೈಬೀಸಿ ಕರೆಯುತ್ತಿರುತ್ತದೆ. ಮೋಡಗಳು, ಸೂರ್ಯಾಸ್ತ, ಉದಯ, ಚಂದ್ರಗಳಾದ ಮೇಲೆ ಇತರ ಚಿಕ್ಕೆಗಳತ್ತ ಗಮನ ಹರಿಯುತ್ತದೆ. ಗ್ರಹಣಗಳಂತಹ ಅಪೂರ್ವ ಅವಕಾಶಗಳಿಗಂತೂ ಕಾಯಲೇಬೇಕು. ಮೊನ್ನೆಯ ಪೂರ್ಣಗ್ರಹಣ ಇಂತಹವರ ತಾಳ್ಮೆಯನ್ನು ಪರೀಕ್ಷಿಸಿತು. ಆ ಅವಧಿಯಲ್ಲಿ ಅದೆಷ್ಟೊಂದು ಕ್ಯಾಮೆರಾಗಳು ಫಳಗುಟ್ಟಿ ಅದರ ಮಾಲೀಕರ ಪೂರ್ವ ಸಿದ್ಧತೆ ಸಮರ್ಪಕವಾಗಿರಲಿಲ್ಲ ಎಂದು ಸಾರಿ ಹೇಳಿದವು. ಕತ್ತಲಿನಲ್ಲಿ ಚಿತ್ರೀಕರಣ ಮಾಡಬೇಕೆಂಬುದರ ಅರಿವೇ ಇಲ್ಲದಿದ್ದ ಖ್ಯಾತ ನಿರ್ದೇಶಕರ ತಂಡವೊಂದು ಪೂರ್ಣಗ್ರಹಣದ ಅವಧಿಯಲ್ಲಿ ತಬ್ಬಿಬ್ಬಾಗಿ ಒಂದೇ ಒಂದು ಷಾಟ್ ಕೂಡ ಸಿಗದೆ ಕಂಗೆಟ್ಟುಹೋಯಿತು. ಸೆಪ್ಟೆಂಬರ್‌ನಲ್ಲಿ ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶಗಳಿವೆ ಎಂಬುದಕ್ಕೆ ಪೀಠಿಕೆ ಇದು. ಮುಂಗಾರು ದುರ್ಬಲ ವಾಗುತ್ತಿರುವಾಗ ಶುಭ್ರ ಆಕಾಶ ದೊರೆಯುವ ಅವಕಾಶಗಳೂ ಇವೆ.

ಸಂಜೆಯ ಆಕಾಶದಲ್ಲಿ ಪೂರ್ವದಲ್ಲಿ ಕಂಗೊಳಿಸುವ ಚುಕ್ಕೆಯೇ ಗುರು. ಇದನ್ನು ಗುರುತಿಸಲು ಯಾರ ಸಹಾಯವೂ ಬೇಕಿಲ್ಲ. ತಿಂಗಳ ಮೊದಲೆರಡು ದಿನಗಳಲ್ಲಿ ಅದನ್ನು ದುರ್ಬೀನು ಅಥವಾ ದೂರದರ್ಶಕದಿಂದ ನೋಡಿದಿರಾದರೆ ನಾಲ್ಕು ಗೆಲಿಲಿಯನ್ ಉಪಗ್ರಹಗಳು ಗ್ರಹಕ್ಕೆ ಅಂಟಿಕೊಂಡಂತೆ ಕಾಣುವುವು. ೨ರ ಬೆಳಗಿನ ಜಾವ ನಾಲ್ಕೂ ಉಪಗ್ರಹಗಳು ಗ್ರಹದ ನೇರಕ್ಕೆ ಬಂದು ಭೂಮಿಯಿಂದ ಕಾಣದಂತಾಗುವ ಅಪೂರ್ವ ಅವಕಾಶವಿದೆ. ನಾಲ್ಕೂ ಮಾಯವಾಗಿ ಬಿಡುವ ನೋಟ ನಮಗಿಲ್ಲ. ೨ರ ಸಂಜೆ ಅವು ಪುನಃ ಅಂಟಿಕೊಂಡಂತೆ ಕಾಣುವುವು. ಎರಡೇ ದಿನಗಳಲ್ಲಿ ಅವು ಗ್ರಹದಿಂದ ಕ್ರಮೇಣ ದೂರ ಸರಿಯುವುದನ್ನೂ ಕಾಣಬಹುದು. ಈ ಸಂದರ್ಭ ಬಳಸಿ ಶಾಲಾಮಕ್ಕಳಿಂದ ಕೆಲವು ಚಟುವಟಿಕೆಗಳನ್ನು ಮಾಡಿಸಬಹುದು.

ಇನ್ನೊಂದು ಗ್ರಹ ಶುಕ್ರ ಬೆಳಗಿನ ಜಾವ ಕಾಣುವುದು. ಮೊದಲವಾರದಲ್ಲಿ ಇದರ ಚಿತ್ರಗಳನ್ನು ತೆಗೆದರೆ ಪಕ್ಕದಲ್ಲೊಂದು ಕ್ಷೀಣ ಕಾಯ ಕಾಣುವುದು. ಅದೇ ಪ್ರೆಸಿಪಿ ಎಂಬ ನಕ್ಷತ್ರ ಗುಚ್ಛ. ಶುಭ್ರಾಕಾಶದಲ್ಲಿ ಬರಿಗಣ್ಣಿಗೂ ಕಾಣಬಹುದು. ಈ ಬಗ್ಗೆ ಸುಳಿವು ಸಿಗದಿದ್ದರೆ ಧೂಮಕೇತು ಇರಬಹುದು ಎಂಬ ತಪ್ಪು ಕಲ್ಪನೆಯೂ ಬರಬಹುದು.

ಬರಿಗಣ್ಣಿಗೆ ಕಾಣುವ ಇನ್ನೊಂದು ಗ್ರಹ ಮಂಗಳ. ಅದು ಮಿಥುನ ರಾಶಿಯ ಪ್ರಕಾಶಮಾನ ನಕ್ಷತ್ರಗಳಾದ ಪುನರ್ವಸುಗಳೊಡನೆ ತ್ರಿಕೋಣ ರಚಿಸುತ್ತದೆ. ಈ ತ್ರಿಕೋಣದ ಮೂರು ಚುಕ್ಕೆಗಳದ್ದು ಮೂರು ಬೇರೆ ಬೇರೆ ಬಣ್ಣ ಎಂಬುದು ಗಮನಾರ್ಹ. ತಿಂಗಳುದ್ದಕ್ಕೆ ತ್ರಿಕೋಣದ ಆಕಾರವೂ ಬದಲಾಗುವುದನ್ನು ಗಮನಿಸಬಹುದು. ಚಂದ್ರ ಅದನ್ನು ಮರೆಮಾಡುವ ಆಚ್ಛಾದನೆಯೂ ಇದೆ; ಆದರೆ ನಮಗೆ ಈ ನೋಟ ಇಲ್ಲ. ಚಂದ್ರ ಅದನ್ನು ದಾಟಿ ಹೋಗುವುದನ್ನು ಗಮನಿಸಬಹುದು.

ಶನಿಗ್ರಹದ ವಿಶೇಷ ಪ್ರದರ್ಶನವೂ ಉಂಟು. ಅದರ ಉಂಗುರಗಳು ಮಾಯವಾಗಿಬಿಡುವುದೇ ವಿಶೇಷ. ಭೂಮಿ ಉಂಗುರಗಳ ತಲದ ಮೂಲಕ ಹಾದು ಹೋದಾಗ ಹೀಗಾಗುತ್ತದೆ. ಸುಮಾರು ೧೫ ವರ್ಷಗಳಿಗೊಮ್ಮೆ ನಡೆಯುವ ವಿದ್ಯಮಾನ ಇದು. ೧೯೯೬ರಿಂದ ಇಲ್ಲಿಯವರೆಗೆ ನಾವು ಶನಿಗ್ರಹದ ದಕ್ಷಿಣಾರ್ಧವನ್ನು ನೋಡುತ್ತಿದ್ದೆವು. ಇನ್ನು ಮುಂದೆ ಉತ್ತರಾರ್ಧವನ್ನು ನೋಡುವೆವು. ಈ ಘಟನೆ, ಅಂದರೆ ಭೂಮಿ ಉಂಗುರಗಳ ತಲದ ಮೂಲಕ ಹಾದು ಹೋಗುವುದು, ನಡೆಯುವಾಗ ಶನಿ ಸೂರ್ಯನ ನೇರಕ್ಕೆ ಇರುವುದರಿಂದ ನಮಗೆ ಕಾಣುವುದಿಲ್ಲ. ಚಿಂತೆಯಿಲ್ಲ, ಬರುವ ತಿಂಗಳಿನಿಂದ ಅದು ಬೆಳಗಿನ ಜಾವ ಕಾಣುತ್ತದೆ. ಆಗಲೂ ದುರ್ಬೀನು ದೂರದರ್ಶಕಗಳಿಂದ ಅದರ ಉಂಗುರ ಕಾಣುವುದಿಲ್ಲ. ಆದ್ದರಿಂದ ಏನೋ ಎಡವಟ್ಟಾಗಿದೆ ಎಂದುಕೊಳ್ಳಬೇಡಿ.




ಸೆಪ್ಟೆಂಬರ್‌ನ ಯಾವುದೇ ಸಂಜೆ ಆಕಾಶ ಶುಭ್ರವಾಗಿದ್ದೇ ಆದರೆ ಆಕಾಶಗಂಗೆಯನ್ನು ನೋಡಲು ಮರೆಯಬೇಡಿ. ನೆತ್ತಿಯಿಂದ ಸ್ವಲ್ಪ ದಕ್ಷಿಣಕ್ಕೆ ಕಾಣುವ ವೃಶ್ಚಿಕ, ಧನು ಭಾಗದಲ್ಲಿ ಅಸಂಖ್ಯಾತ ನೆಬ್ಯುಲಾಗಳು ಹರಡಿಕೊಂಡಿವೆ. ಅನಿಲ ಮತ್ತು ದೂಳು ಸೇರಿ ಬಿಳಿಯ ನದಿಯ ಹಾಗೆ ಕಾಣುತ್ತದೆ. ಇದರ ಒಂದು ಭಾಗ ಉತ್ತರಕ್ಕೆ ರಾಜಹಂಸ (ಸಿಗ್ನಸ್), ವೀಣಾ (ಲೈರಾ) ಮತ್ತು ಗರುಡ (ಅಕ್ವಿಲಾ) ಮೂಲಕ ಸಾಗುವುದನ್ನು ಗುರುತಿಸಬಹುದು. ೨೨ರಂದು ವಿಷುವ. ಅಂದು ಹಗಲು - ರಾತ್ರಿಗಳ ಅವಧಿ ಒಂದೇ. ಆ ಮುಂದೆ ಹಗಲಿನ ಅವಧಿ ಕಡಿಮೆಯಾಗುತ್ತಾ ಹೋಗುತ್ತದೆ.

### ಖಗೋಳ ದಿನಚರಿ

೨ ಗುರು - ಚಂದ್ರ ಜೋಡಿ *
೩ ಗುರು ಗ್ರಹದ ಉಪಗ್ರಹಗಳ ವಿಶೇಷ ನೋಟ *
೪ ಹುಣ್ಣಿಮೆ ೨೧:೩೩ಕ್ಕೆ
೧೨ ಚಾಂದ್ರಮಾಸದ ಕೊನೆಯ ಪಾದ
೧೪ ಮಂಗಳ - ಚಂದ್ರ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)
೧೬ ಶುಕ್ರ - ಚಂದ್ರ ಜೋಡಿ * : ಭೂಮಿ - ಚಂದ್ರ ನಡುವೆ ಕನಿಷ್ಠ ದೂರ
೧೭ ಶನಿಗ್ರಹದ ಯುತಿ
೧೯ ಅಮಾವಾಸ್ಯೆ ೦೦:೧೪ಕ್ಕೆ
೨೦ ಶುಕ್ರ - ಮಘ ಜೋಡಿ * ; ಬುಧ ಗ್ರಹದ ಯುತಿ; ಬುಧ - ಶನಿ ಜೋಡಿ (ಕಾಣುವುದಿಲ್ಲ)
೨೩ ಶರದ್ವಿಷುವ ೦೨:೪೮ಕ್ಕೆ
೨೬ ಚಾಂದ್ರಮಾಸದ ಮೊದಲ ಪಾದ
೨೮ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೩೦ ಚಂದ್ರ - ಗುರು ಜೋಡಿ *

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

೨ನೆಯ ಸಂಜೆ ಗುರು ಮತ್ತು ಚಂದ್ರ

೩೦ರ ಸಂಜೆ ಚಂದ್ರ ಮತ್ತು ಗುರು

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



# ಯಾವ ಕಾಣಿಕೆ ನೀಡಲಿ ನಿನಗೆ...?

ಡಾ|| ಉದಯ ರವಿ

ಪ್ರತಿ ವರ್ಷ ನಾವು ನಮ್ಮ ಪ್ರೀತಿಯ ವ್ಯಕ್ತಿಗಳ ಮನ ಮೆಚ್ಚಿಸಲು, ಇರುವ ಇಲ್ಲದಿರುವ ಕಾರಣಗಳು, ಸ್ವದೇಶೀ ಕಾರಣಗಳು ವಿದೇಶೀ ಕಾರಣಗಳನ್ನು ಹುಡುಕುತ್ತಾ ಅವರಿಗೆ ಉಡುಗೊರೆ ಕೊಡುತ್ತಿರುತ್ತೇವೆ. ಇದು ಮುಖ್ಯವಾಗಿ ಇನ್ನೂ ಬೆಸೆಯದ ಸಂಬಂಧಗಳಿಗೆ ಇಂಥ ಕಾಣಿಕೆಗಳು ಹೆಚ್ಚು ತಲುಪುತ್ತವೆ. ನಾವು ಯಾವ ಕಾಣಿಕೆ ನೀಡುತ್ತೇವೆ ಎನ್ನುವುದು ನಮ್ಮ ಆರ್ಥಿಕ ಸ್ಥಿತಿಯ ಮೇಲೆ ಅವಲಂಬಿತವಾಗಿದೆ.

ಗಿಡದಿಂದ ಕತ್ತರಿಸಿದ ಉದ್ದ ಕಾಷ್ಠಗಳ ಹೂಗುಚ್ಛ, ಬಂಗಾರದ ಒಡವೆ, ವಜ್ರದ ಆಭರಣ ಇತ್ಯಾದಿ. ಸ್ವದೇಶೀ ಆಪ್ತರಿಗೆ ವಿದೇಶೀ ಭಾವನೆಗಳಲ್ಲಿ ನೀಡುವ ಬಹುರಾಷ್ಟ್ರೀಯ ಆರ್ಚೀಸ್ ಗ್ರೀಟಿಂಗ್ ಕಾರ್ಡಿನಿಂದ ಹಿಡಿದು ವಜ್ರದ ಮಾರಾಟಗಾರರವರೆಗೂ ಆಕ್ರಮಣಕಾರೀ ಜಾಹೀರಾತುಗಳನ್ನು ನೀಡಿ ಜನರ ಜೀವನದ ಆಲೋಚನಾ ಕ್ರಮಗಳನ್ನೇ ನಿಯಂತ್ರಿಸಲಾಗುತ್ತಿದೆ.

ಈ ಗ್ರಾಹಕರಿಗೆ ತಮ್ಮ ಉಡುಗೊರೆಗಳು ಈಸ್ಥಟಿಕ್ ಆದ ಸುಂದರ ಸಂಕೇತಗಳಾಗಿ ಕಾಣುತ್ತವೆಯೇ ವಿನಾ ತಾವು ಪರಿಸರ ನಾಶ, ಕೂಲಿಕಾರರ ಶೋಷಣೆ, ಮತ್ತು ಗಂಭೀರ ಆರೋಗ್ಯ ಸಮಸ್ಯೆಗಳನ್ನು ಈ ಮೂಲಕ ಉತ್ತೇಜಿಸುತ್ತಿದ್ದೇವೆಂದು ಮನವರಿಕೆ ಆಗುತ್ತಿಲ್ಲ. ಈ ಲೇಖನ, ಗಿಡದಿಂದ ಕಡಿದ ಹೂಗಳ ಸಿದ್ಧತೆಯಾಗುವ, ಚಿನ್ನ ಮತ್ತು ವಜ್ರಗಳ ಹಿಂದಿನ ಕರಾಳ ವಸ್ತುಸ್ಥಿತಿಯನ್ನು ತೋರಿಸುವ ಹಾಗೂ ಪರಿಹಾರವನ್ನು ಸೂಚಿಸುವ ಪ್ರಯತ್ನ ಮಾಡುತ್ತದೆ.

**ಈ ಗುಲಾಬಿಯೂ ನಿನಗಾಗಿ . . .**

ಹೂಗಳನ್ನು ಧಾರ್ಮಿಕ, ಜಾನಪದ ಆಚರಣೆಗಳಲ್ಲಿ, ರಾಷ್ಟ್ರೀಯ ಲಾಂಛನಗಳಲ್ಲಿ ಬಳಸುವ ಪದ್ಧತಿ ಮನುಕುಲದ ಆದಿಯಿಂದಲೂ ನಡೆದುಬಂದಿದೆ. ಇಂದು ಪ್ರೇಮ, ಗೆಳೆತನ, ಮಾತಾ-ಪಿತೃ ಭಕ್ತಿ ತೋರಿಸಲು, ಸಭೆ ಸಮಾರಂಭಗಳಲ್ಲಿ ಗೌರವ ಸೂಚಿಸಲು ಹೂಗಳನ್ನು ಬಳಸುತ್ತಿದ್ದೇವೆ. ಉದ್ದದ ಹಸಿರು ಕಾಂಡಗಳನ್ನು ಕತ್ತರಿಸಿ, ಅವುಗಳ ಮುಳ್ಳುಗಳನ್ನು ಹೆರೆದು, ಕೆಲವು ಎಲೆಗಳು ಕಾಣುವಂತೆ ಗುಲಾಬಿ ಹೂಗಳನ್ನು ಸುಂದರವಾಗಿ ಜೋಡಿಸಿ ಪ್ಲಾಸ್ಟಿಕ್ ಮುಸುಕು ಹಾಕಿ ಮಾರಾಟಕ್ಕೆ ಸಿದ್ಧಪಡಿಸಿದ ಹೂಗುಚ್ಛದ ಸೌಂದರ್ಯ ಅದರ ಹಿಂದಿನ ಪರಿಸರ ನಾಶ, ಕಾರ್ಮಿಕರ ದುರುಪಯೋಗವನ್ನು ಮರೆಮಾಚಿಬಿಡುತ್ತದೆ.

ಅಭಿವೃದ್ಧಿಶೀಲ ದೇಶಗಳಲ್ಲಿ ಸಸ್ಯೋದ್ಯಾನಗಳಲ್ಲಿ ದುಡಿಯುತ್ತಿರುವ ಸುಮಾರು ೨,೦೦,೦೦೦ ಕೂಲಿಕಾರರು ಪ್ರತಿದಿನ ವಿವಿಧ ರೀತಿಯ ವಿಷಾನಿಲಗಳಿಗೆ ಗುರಿಯಾಗುತ್ತಿದ್ದಾರೆ. ಇವರು ಎದುರಿಸುತ್ತಿರುವ ಅಪಾಯಕ್ಕೆ ಹೋಲಿಸಿದಾಗ ಅವರ ಗಳಿಕೆ ತೀರಾ ಗೌಣವಾದ್ದು. ಉದಾಹರಣೆಗೆ, ಸರಾಸರಿ ಒಂದು ದಿನದಲ್ಲಿ ಕೊಲಂಬಿಯಾ ಹೂತೋಟದಲ್ಲಿ ಕೆಲಸ ಮಾಡುವ ಹೆಂಗಸೊಬ್ಬಳು, ಸುಮಾರು ೪೦೦ ಅತ್ಯುತ್ತಮ ಹೂಗಳನ್ನು ಬಿಡಿಸುತ್ತಾಳೆ. ಹೂ ಅಂಗಡಿಯಲ್ಲಿ ಇಂತಹ ನಾಲ್ಕು ಹೂಗಳಿಗೆ ಸುಮಾರು ನಾಲ್ಕು ಡಾಲರ್‌ಗಳು. ಇದು ಆಕೆಯ ದಿನಗೂಲಿಗಿಂತ ಹೆಚ್ಚು. ಮಾಲಿಕನ ಆದಾಯ ೪೦೦ ಡಾಲರು, ಅವಳ ಕೂಲಿ ೪ ಡಾಲರು.

**ಹೂ ಉದ್ಯಮ**

ಮೂಲತಃ ಹಾಲೆಂಡ್ ಹಾಗೂ ಕೊಲಂಬಿಯಾದಲ್ಲಿ ಪ್ರಾರಂಭವಾದುದಾದರೂ, ಹೂಕೃಷಿ ಈಗ ಭಾರತವೂ ಸೇರಿದಂತೆ ಕೀನ್ಯಾ, ಜಿಂಬಾಬ್ವೇ, ಈಕ್ವೆಡಾರ್, ಮೆಕ್ಸಿಕೋ, ಚೈನಾ, ಮತ್ತು ಮಲೇಶಿಯಾದಲ್ಲಿ ನಡೆಯುತ್ತಿದೆ. ಡೋಲ್ ಫುಡ್ಸ್ ಕಂಪನಿಯ ಒಂದು ಅಂಗಸಂಸ್ಥೆಯಾದ ಡೋಲ್ ಫ್ರೆಶ್ ಫ್ಲವರ್ಸ್ ಪ್ರಪಂಚದಲ್ಲೇ ಅತ್ಯಧಿಕವಾಗಿ ಹೂ ತಯಾರಿಸುವ ಸಂಸ್ಥೆ.

ಅಮೆರಿಕ, ಜಪಾನ್, ಜರ್ಮನಿ ಇದನ್ನು ಕೊಳ್ಳುತ್ತಿರುವ ಪ್ರಮುಖ ದೇಶಗಳು. ಈಕ್ವೆಡಾರ್ ಮತ್ತು ಕೊಲಂಬಿಯಾ ಇವೆರಡೇ ದೇಶಗಳು ವಿಶ್ವದ ಒಟ್ಟು ಉತ್ಪಾದನೆಯ ಅರ್ಧಭಾಗದಷ್ಟು ಹೂಗಳನ್ನು ಉತ್ಪಾದಿಸುತ್ತವೆ. ಹೂ ಉದ್ಯಮದಲ್ಲಿ ಅಭಿವೃದ್ಧಿಶೀಲ ದೇಶಗಳಲ್ಲಿ ಸುಮಾರು ೧,೯೦,೦೦೦ ಜನ ಕೆಲಸ ಮಾಡುತ್ತಿದ್ದಾರೆ. ಹೂ ಎಂದರೆ ಮುಖ್ಯವಾಗಿ ಗುಲಾಬಿಯೇ. ಈ ಉದ್ಯಮದ ಲಾಭ ಹರಿಯುವುದು ಹೂ ಬೆಳೆಯುವ ದೇಶಗಳ ಹೊರಗಿನ ಬಹುರಾಷ್ಟ್ರೀಯ ಸಂಸ್ಥೆಗಳಿಗೆ. ಇದರಿಂದ ಆಗುವ ಪರಿಸರ ನಾಶ, ಆರೋಗ್ಯ ದುಷ್ಪರಿಣಾಮಗಳನ್ನು ಅನುಭವಿಸುವ ಜನರೇ ಬೇರೆ.

**ಕಾರ್ಮಿಕರ ಆರೋಗ್ಯ**

ಹೂ ಕೃಷಿಯಲ್ಲಿ ಮುಖ್ಯವಾಗಿ ಕೆಲಸ ಮಾಡುವವರು ಹೆಂಗಸರು. ಇವರಿಗೆ ನೀಡುವ ಕೂಲಿ ಕಡಿಮೆ. ಮತ್ತು ಇತರೆ ಸೌಲಭ್ಯಗಳಿಂದಲೂ ವಂಚಿತರಾಗಿರುತ್ತಾರೆ. ವ್ಯಾಲಂಟೈನ್ಸ್ ಡೇ, ಮದರ್ಸ್ ಡೇ ಗಳಂತಹ ಸಂದರ್ಭಗಳ ಮುನ್ನಾ ದಿನಗಳಲ್ಲಿ ಓವರ್ ಟೈಂ ಸೌಲಭ್ಯ ಇಲ್ಲದೆ ದೀರ್ಘಾವಧಿ ಕೆಲಸ ಮಾಡಿಸುವುದು, ಬಾಲ ಕಾರ್ಮಿಕರ ಶೋಷಣೆ, ಬಸುರಿಯರನ್ನು ಕೆಲಸದಿಂದ ಉಚ್ಚಾಟನೆ ಮಾಡುವುದು, ಇವೆಲ್ಲ ಸರ್ವೇಸಾಮಾನ್ಯ.

ಅನೇಕ ಜಾಗೃತ ಪ್ರಜೆಗಳು ಚಿನ್ನವನ್ನು ಕೊಳಕು ವಸ್ತುವೆಂದು ಪರಿಗಣಿಸಿದ್ದಾರೆ. ಶೋಷಣೆ, ಪರಿಸರ ನಾಶ, ಮಾಡದೆ ಪಡೆದ ಚಿನ್ನ ಎಂದು ಸೀಲ್ ಒತ್ತಿದ ಚಿನ್ನವನ್ನು ತಯಾರಿಸುವುದು ಅಸಾಧ್ಯ, ನಂಬಲೂ ಅಸಾಧ್ಯ. ಹೀಗಾಗಿ ಬೇರೆ ಉಡುಗೊರೆಗಳ ಬಗ್ಗೆ ಯೋಚಿಸಬಹುದು. ನಾವು ನೀಡುವ ಉಡುಗೊರೆ ನಮ್ಮ ಪ್ರೀತಿಯನ್ನು ನೆನಪು ಮಾಡಬೇಕೆ ವಿನಾ ಪ್ರಕೃತಿ ನಾಶ, ಕ್ರೌರ್ಯ, ಇತ್ಯಾದಿಗಳನ್ನಲ್ಲ. ಪುನರ್‌ಬಳಸಿದ ಕಾಗದದಲ್ಲಿ ತಯಾರಾದ ಗ್ರೀಟಿಂಗ್ ಕಾರ್ಡ್, ಸಿ.ಆರ್.ವೈ. (ಚೈಲ್ಡ್ ರಿಲೀಫ್ ಅಂಡ್ ಯೂ), ಫುಟ್ ಅಂಡ್ ಮೌತ್ ಆರ್ಟಿಸ್ಟ್ ಇಂತಹ ಸಂಸ್ಥೆಗಳ ಗ್ರೀಟಿಂಗ್ ಕಾರ್ಡ್‌ಗಳು, ವಿಡಿಯೋ ಚಿತ್ರಗಳು, ಮನೆಯಲ್ಲಿ ತಯಾರಿಸಿದ ಆಹಾರ ಖಾದ್ಯಗಳು, ಪುಸ್ತಕ ಉಡುಗೊರೆ, ಗುಡಿಕೈಗಾರಿಕೆ, ಜಾನಪದ ಕಲಾಕೃತಿಗಳು, ಪರಿಸರ ಸಂಸ್ಥೆಗಳಿಗೆ ಒಂದು ವರ್ಷದ ಸದಸ್ಯತ್ವ, ಇಂತಹ ವಿಭಿನ್ನವಾದ, ಪರಿಸರ ಸಮಾಜ ಪರ ಕೊಡುಗೆಗಳ ಬಗ್ಗೆ ಯೋಚಿಸುವುದು ಸೂಕ್ತ.

ಸಾಂಪ್ರದಾಯಿಕ ಕೃಷಿಗಿಂತಲೂ ಇಲ್ಲಿ ಕೆಲಸ ಹೆಚ್ಚು ಸ್ಥಿರ, ವರ್ಷಾದ್ಯಂತ ಕೆಲಸ, ಎಂದು ಉದ್ಯಮಿಗಳು ಹೇಳುತ್ತಾರೆ. ಆದರೆ, ಈ ಕೃಷಿಯಿಂದ ಸ್ಥಳೀಯರಿಗೆ ಆಹಾರ ಧಾನ್ಯಗಳನ್ನು ಉತ್ಪಾದಿಸಲು ಜಾಗವಿರದೆ ಪೌಷ್ಟಿಕಾಂಶಗಳ ಕೊರತೆ ಉಂಟಾಗುತ್ತದೆ ಮತ್ತು ಆಹಾರ ಧಾನ್ಯಗಳ ಬೆಲೆ ದುಬಾರಿಯಾಗುತ್ತದೆ. ಹೂ ಕೃಷಿಗೆ ಅಪಾರ ಪ್ರಮಾಣದಲ್ಲಿ ನೀರು ಬೇಕಾಗುತ್ತದೆ. ಇದರ ಪರಿಣಾಮವಾಗಿ ವಿಶ್ವದ ಅನೇಕ ಕಡೆ, ಹೂ ಕೃಷಿ ವಲಯಗಳಲ್ಲಿ ಭೂಜಲದ ಮಟ್ಟ ಕುಸಿದಿದೆ.

ಕೀಟನಾಶಕಗಳನ್ನು ಅತ್ಯಧಿಕವಾಗಿ ಬಳಸುವ ಕೃಷಿ ಎಂದರೆ ಹೂ ಕೃಷಿ. ಬೆಚ್ಚನೆಯ ಗ್ರೀನ್ ಹೌಸ್‌ನಿಂದಾಗಿ ಕೀಟಗಳು ಹೊರಗುಳಿಯುತ್ತವೆ, ಆದರೆ ಕೀಟನಾಶಕಗಳ ಪ್ರಮಾಣ ಅಧಿಕವಾಗಿದ್ದು, ಕೂಲಿಗಳ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ.

ತೃತೀಯ ವಿಶ್ವದಲ್ಲಿ ಹೂ ಬೆಳೆಸಲು ಉಪಯೋಗಿಸುತ್ತಿರುವ ಕೀಟನಾಶಕಗಳು, ಗೊಬ್ಬರ, ಫಂಗಿಸೈಡ್‌ಗಳನ್ನು ಮತ್ತು ಸಸ್ಯ ಬೆಳವಣಿಗೆ ವರ್ಧಕಗಳಲ್ಲಿನ ಅರ್ಧ ಭಾಗದಷ್ಟು ಔಷಧಗಳನ್ನು ಅಮೆರಿಕದಲ್ಲಿ ಬಹಿಷ್ಕರಿಸಲಾಗಿದೆ. ಇಲ್ಲವೇ, ಅವುಗಳಿಗೆ ಪರೀಕ್ಷೆಯಲ್ಲಿ ಪರವಾನಗಿ ನೀಡುವುದಿಲ್ಲ. ಇವುಗಳಲ್ಲಿ ಅನೇಕವು ಕ್ಯಾನ್ಸರ್‌ಕಾರಕ ರಾಸಾಯನಿಕಗಳಾಗಿವೆ.

ಕೀಟನಾಶಕಗಳು ಕೃಷಿಯುತ್ಪನ್ನ ಆಹಾರ ಪದಾರ್ಥಗಳಲ್ಲಿ ಕಂಡುಬರುವ ಪ್ರಮಾಣಕ್ಕಿಂತ ಹೂಗಳಲ್ಲಿ ಶೇ. ೫೦ರಷ್ಟು ಹೆಚ್ಚು ಇರುತ್ತವೆ. ಅಮೆರಿಕದಂತಹ ದೇಶಗಳಿಗೆ ಹೂಗಳು ಪ್ರವೇಶಿಸುವಾಗ ಹೂಗಳಲ್ಲಿ ಕೀಟಗಳು ಇವೆಯೇ ಎಂದು ನೋಡುತ್ತಾರೆ. ಆದರೆ ಇದು ಆಹಾರ ಪದಾರ್ಥವಲ್ಲವಾದ್ದರಿಂದ ಇದರಲ್ಲಿ ಕೀಟನಾಶಕಗಳು ಇವೆಯೇ ಎಂದು ಪರೀಕ್ಷಿಸುವುದಿಲ್ಲ.

ಸಸ್ಯೋದ್ಯಮದಲ್ಲಿ ಕೆಲಸ ಮಾಡುವ ಕಾರ್ಮಿಕರಲ್ಲಿ ಶೇ. ೫೦ಕ್ಕೂ ಅಧಿಕ ಜನರಿಗೆ ಕೀಟನಾಶಕಗಳಿಂದ ಉಂಟಾಗುವ ಒಂದಲ್ಲಾ ಒಂದು ಕಾಯಿಲೆ ಇರುವುದು ಕಂಡುಬಂದಿದೆ. ಆರ್ಗನೋಫಾಸ್‌ಫೇಟ್ ಕೀಟನಾಶಕದಿಂದ ಜೊಲ್ಲು ಸ್ರಾವ, ಅನಿರ್ಬಂಧಿತ ಕಣ್ಣೀರು, ದೃಷ್ಟಿ ಮಾಂದ್ಯತೆ, ವಾಕರಿಕೆ, ವಾಂತಿ, ಕಿಬ್ಬೊಟ್ಟೆ ನುಲಿತ, ಮಲಮೂತ್ರಗಳ ನಿಯಂತ್ರಣದಲ್ಲಿ ಅಸಾಮರ್ಥ್ಯ, ಕಫ, ಕೆಮ್ಮು, ದಮ್ಮು, ಬೆವರುವುದು, ಇವು ಸಾಧಾರಣವಾಗಿ ಕಂಡುಬರುವ ರೋಗ ಲಕ್ಷಣಗಳು. ಅಪರೂಪಕ್ಕೆ ಅಲ್ಲಲ್ಲಿ ಇದಕ್ಕೂ ಮೀರಿದಂತಹ ವಿಷಮ ಪರಿಸ್ಥಿತಿಗಳಲ್ಲಿ, ಪಾರ್ಶ್ವವಾಯು, ಸೆಳೆತ, ಹೃದಯ ಕವಾಟ ಮುಚ್ಚಿಹೋಗುವಿಕೆ, ಅಥವಾ ಸಾವು ಕೂಡ ಸಂಭವಿಸಬಹುದು.

ಹೂ ಕೃಷಿ ಕೂಲಿಗಳಿಗೆ ಅಲರ್ಜಿ, ಚರ್ಮರೋಗ, ಹೃದಯ ಸಂಬಂಧಿತ ಖಾಯಿಲೆಗಳು ಸಹ ಬರಬಲ್ಲವು. ಪದೇ ಪದೇ ಮೂತ್ರ ವಿಸರ್ಜನೆಯ ನೆವದಲ್ಲಿ ಕೆಲಸ ಕದಿಯದಿರಲಿ ಎಂದು ಅವರಿಗೆ ಕೆಲಸದ ಮಧ್ಯೆ ಹೋಗುವ ಅನುಮತಿಯನ್ನು ನಿರಾಕರಿಸುತ್ತಾರೆ. ಇದರ ಪರಿಣಾಮವಾಗಿ ಮೂತ್ರದ್ವಾರದ ಸೋಂಕು ಉಂಟಾಗುತ್ತದೆ. ಗುಲಾಬಿ ಮುಳ್ಳನ್ನು ತೆಗೆಯುವಾಗ ಚುಚ್ಚಿಕೊಂಡು ಬ್ಯಾಕ್ಟೀರಿಯ ಹಾಗೂ ಫಂಗಸ್ ಸೆಲ್ಯುಲೈಟಿಸ್, ಅನೇಕಾಂಗ ಕ್ಯಾನ್ಸರ್, ಶಾಶ್ವತ ನರ ದೌರ್ಬಲ್ಯ, ಸ್ಮರಣ ಶಕ್ತಿ ಹಾಗೂ ಮಾನಸಿಕ ಶಕ್ತಿ ಕುಂಠಿತವಾಗುವುದು ಮುಂತಾದವು ಸಂಭವಿಸುತ್ತವೆ.

ಅಮೆರಿಕದಲ್ಲಿ ನಿಷೇಧಿಸಿರುವ, ಆದರೆ ಇಂತಹ ಬೇಸಾಯದಲ್ಲಿ ಬಳಸಲಾಗುತ್ತಿರುವ ಕೀಟನಾಶಕಗಳು ಗರ್ಭಿಣಿ ಸ್ತ್ರೀಯರ ಭ್ರೂಣದ ಮೇಲೆ ಪ್ರಭಾವ ಬೀರುತ್ತವೆ. ಗರ್ಭಧಾರಣೆಯಲ್ಲಿ ವಿಳಂಬ ಅಥವಾ ಭ್ರೂಣ ಮರಣ ಉಂಟಾಗುತ್ತದೆ. ಗಂಡಸರಲ್ಲಿ ಎಂಡೋಕ್ರೈನ್ ಹಾಗೂ ಪುರುಷತ್ವದ ಸಾಮರ್ಥ್ಯ ಕುಂಠಿತವಾಗುತ್ತದೆ.

ದುರಂತವೆಂದರೆ, ಈ ಕೂಲಿಗಳಿಗೆ ತಮ್ಮ ಕಾಯಿಲೆಗೆ ಕಾರಣ ಕೀಟನಾಶಕಗಳು ಎಂದು ಗೊತ್ತೇ ಇರುವುದಿಲ್ಲ. ಇವರ ಮಾಲಿಕರು ಕಾರ್ಮಿಕರಿಗೆ ರಕ್ಷಾ ಕವಚಗಳನ್ನು ನೀಡುವುದು, ವಿಷಾನಿಲ ಬೀರುವ ಕೀಟನಾಶಕಗಳನ್ನು ಅಪಾಯರಹಿತವಾಗಿ ಬಳಸುವ ತಂತ್ರಗಳನ್ನು ತಿಳಿಸುವುದು, ಕೈ ಚೀಲಗಳನ್ನು ನೀಡುವುದು, ಇಂತಹ ಮುಂಜಾಗ್ರತಾ ಕ್ರಮಗಳ ಬಗ್ಗೆ ಯಾವುದೇ ಕಾಳಜಿ ವಹಿಸುವುದಿಲ್ಲ. ದಿಖಾವೆಗೆ ಇವರನ್ನೆಲ್ಲ ನೋಡಿಕೊಳ್ಳಲು ಎಂದು ಒಬ್ಬ ವೈದ್ಯನನ್ನು ಕಂಪನಿ ನೇಮಿಸಿರುತ್ತದೆ, ಆತ ತನ್ನ ಸ್ವಾಮಿನಿಷ್ಠೆ ತೋರಿಸಲು, ಕಾರ್ಮಿಕರಿಗೆ ಬರುವ ಇಂತಹ ರೋಗಗಳಿಗೆ ಕಾರಣ ಕೀಟನಾಶಕಗಳು ಎಂದು ಹೇಳುವುದೇ ಇಲ್ಲ.

**ವಜ್ರ**

ಗ್ರೀಕ್‌ನ 'ಅದಮಾಸ್' ಎಂಬ ಪದದಿಂದ ಇಂಗ್ಲಿಷಿನ 'ಡೈಮಂಡ್' ಪದ ಬಂದಿದೆ. 'ಅದಮಾಸ್' ಎಂದರೆ ಅದಮ್ಯ ಎಂದರ್ಥ! ಮಣಿಸಲು ಸಾಧ್ಯವಿರದ, ನಾಶವಾಗದ, ಎಂಬ ಅರ್ಥವೂ ಇದೆ. ಭೂ ಗರ್ಭದಲ್ಲಿ ಅತ್ಯಧಿಕ ಒತ್ತಡ ಹಾಗೂ ಶಾಖದ ಪರಿಣಾಮವಾಗಿ ಕಾರ್ಬನ್ ವಜ್ರವಾಗಿ ಮಾರ್ಪಡುತ್ತದೆ. ಚರಿತ್ರೆಯಲ್ಲಿ ಇದು ಐಶ್ವರ್ಯ, ಅಧಿಕಾರ, ಪ್ರೇಮ ಮತ್ತು ಮಾಂತ್ರಿಕ ಶಕ್ತಿಗಳಿಗೆ ಪ್ರತೀಕವಾಗಿದೆ. ವಜ್ರವನ್ನು ಅದರ ಹೊಳಪಿಗಾಗಿ ಆಭರಣ ಮಾಡಲು ಬಳಸುತ್ತಾರೆ, ಕಾಠಿಣ್ಯತೆ ಹಾಗೂ ದೀರ್ಘ ಬಾಳಿಕೆಗಾಗಿ ಅದನ್ನು ಕಾರ್ಖಾನೆಗಳಲ್ಲಿ ಬಳಸುತ್ತಾರೆ.

ಸುಮಾರು ಕ್ರಿ.ಪೂ. ೮೦೦ರಲ್ಲೇ ಭಾರತದಲ್ಲಿ ವಜ್ರಗಳನ್ನು ಬಳಸಿದ್ದರು. ಆದರೆ ೧೮೬೭ರಲ್ಲಿ ಭಾರೀ ಪ್ರಮಾಣದಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಇದು ಕಂಡುಬರುವವರೆಗೂ ಇದಕ್ಕಾಗಿ ಗಣಿಗಾರಿಕೆ ನಡೆದಿರಲಿಲ್ಲ. ಇಂದು ಸುಮಾರು ೨೦ ದೇಶಗಳಲ್ಲಿ ವಜ್ರದ ಗಣಿಗಾರಿಕೆ ನಡೆಯುತ್ತಿದೆ.

ಆಸ್ಟ್ರೇಲಿಯ, ಜೈರೆ, ಬೋಟ್ಸ್‌ವಾನಾ, ರಷ್ಯಾ ಮತ್ತು ದಕ್ಷಿಣ ಆಫ್ರಿಕಾ ಇವುಗಳಲ್ಲಿ ಪ್ರಮುಖವಾದವು. ವಜ್ರ ವ್ಯಾಪಾರ ಸಂಸ್ಥೆಗಳಲ್ಲಿ ಪ್ರಮುಖವಾದುವು ಆಂಟ್‌ವರ್ಪ್, ಟೆಲ್‌ಅವೀವ್, ನ್ಯೂಯಾರ್ಕ್, ಮತ್ತು ಮುಂಬಯಿ. ವಜ್ರಕ್ಕೆ ಹೊಳಪು, ಆಕಾರ ನೀಡುವ ಕೆಲಸ ಪ್ರಮುಖವಾಗಿ ಟೆಲ್‌ಅವೀವ್, ಮುಂಬಯಿ ಹಾಗೂ ನ್ಯೂಯಾರ್ಕ್‌ನಲ್ಲಿ ನಡೆಯುತ್ತದೆ. ಇದಕ್ಕೆ ಮುಖ್ಯ ಗ್ರಾಹಕರು ಅಮೆರಿಕ ಹಾಗೂ ಜಪಾನ್ ದೇಶಗಳು. ವಿಶ್ವದ ವಜ್ರ ಮಾರಾಟದಲ್ಲಿ ಶೇ. ೪೮ರಷ್ಟು ನ್ಯೂಯಾರ್ಕ್ ಒಂದರಲ್ಲೇ ನಡೆಯುತ್ತದೆ.

**ವಹಿವಾಟು**

ವಿವಾಹ ನಿಶ್ಚಿತಾರ್ಥಕ್ಕೆ ವಜ್ರದ ಉಂಗುರ ನೀಡುವ ಪದ್ಧತಿ ೧೪೭೭ರಲ್ಲಿ ಪ್ರಾರಂಭವಾಯಿತು. ಆಸ್ಟ್ರಿಯಾದ ಮಾಕ್ಸಿಮಿಲಿಯನ್ ಎಂಬ ರಾಜ ಮೇರಿ ಬರ್ಗಂಡಿಯನ್ನು ವರಿಸಲು ವಜ್ರದುಂಗುರ ನೀಡಿದ. ಆದರೆ ಇದು ಅಂಟುಜಾಡ್ಯವಾಗಿ ಪ್ರಾರಂಭವಾದದ್ದು ೧೯೩೮ರಲ್ಲಿ. ಸಿಸಿಲ್ ರೋಡ್ಸ್ ೧೮೮೮ರಲ್ಲಿ ಸ್ಥಾಪಿಸಿದ ಡಿ ಬೀಯರ್ಸ್ ಕಂಪನಿಯು, 'ವಜ್ರಗಳು ಮನೋವೈಜ್ಞಾನಿಕತೆಗೆ ಅವಶ್ಯ. ವಜ್ರ ದೊಡ್ಡದಾದಷ್ಟೂ ಅದನ್ನು ನೀಡುವವರ ಪ್ರೀತಿ ದೊಡ್ಡದು' ಎಂಬ ಭಾವನೆಯನ್ನು ಜನರಲ್ಲಿ ಮೂಡಿಸಿದ. (''ಯಾರು ಹೆಂಡತೀನ ಪ್ರೀತಿಸ್ತಾರೋ ಅವರು ಪ್ರೆಸ್ಟೀಜ್ ಕೊಳ್ಳುತ್ತಾರೆ'' ಎಂದ ಹಾಗೆ).

ಇದಾದ ಮೂರೇ ವರ್ಷಗಳಲ್ಲಿ ಅಮೆರಿಕದಲ್ಲಿ ಶೇ. ೮೦ರಷ್ಟು ಮದುವೆಗಳ ನಿಶ್ಚಿತಾರ್ಥಗಳಲ್ಲಿ ವಜ್ರದ ಉಂಗುರಗಳನ್ನು ತಮ್ಮ ವಲ್ಲಭೆಯರಿಗೆ ನೀಡಲಾಯಿತು. ೧೯೪೭ರಲ್ಲಿ 'ಸದಾ ಕಾಲಕ್ಕೂ ವಜ್ರಗಳು' ಎಂಬ ಜನಪ್ರಿಯ ಘೋಷಣೆ ಜನ್ಮತಾಳಿತು. ಗ್ರಾಹಕರಿಗೆ ತಮ್ಮ ಎರಡು ತಿಂಗಳ ಸಂಬಳವನ್ನು ಇದಕ್ಕಾಗಿ ಮುಡಿಪಾಗಿಡಲು ಒತ್ತಾಯಿಸಬೇಕೆಂದು ಪ್ರತಿ ಅಂಗಡಿ ಮಾಲಿಕರಿಗೂ ವಜ್ರ ಉದ್ಯಮಿಗಳು ಸೂಚಿಸಿದರು.

೧೯೯೯ರಲ್ಲಿ 'ಅಡ್ವರ್ಟೈಸಿಂಗ್ ಏಜ್ ಮ್ಯಾಗಜೈನ್' ಎಂಬ ಪತ್ರಿಕೆಯ ಪ್ರಕಾರ, ಶತಮಾನದ ಅತ್ಯಂತ ಪರಿಣಾಮಕಾರಿ ಘೋಷಣೆ ಎಂದರೆ, 'ಸದಾಕಾಲಕ್ಕೂ ವಜ್ರಗಳು'. ಏಕೆಂದರೆ ಶೇ. ೯೦ರಷ್ಟು ಜನರ ಮನವೊಲಿಸಿದ ಜನಪ್ರಿಯ ಘೋಷಣೆ ಇದು ಎಂದು ಆ ಪತ್ರಿಕೆ ಪ್ರಕಟಿಸಿತು.


ವಜ್ರಕ್ಕಾಗಿ ಭೂಮಿಯ ಬಗೆತ

## ಲಾಭ-ನಷ್ಟ

ಪ್ರತಿವರ್ಷವೂ ಆಭರಣಗಳಿಗಾಗಿ ೧೨೦ ಮಿಲಿಯನ್ ಕ್ಯಾರಟ್‌ಗಳ ಕಚ್ಚಾ ವಜ್ರವನ್ನು ಗಣಿಗಾರಿಕೆ ಮಾಡಲಾಗುತ್ತಿದೆ. ಇದರ ತೂಕ ೨೪ ಟನ್‌ಗಳಷ್ಟು. ಅಷ್ಟನ್ನು ಹೊರತೆಗೆಯಲು ತಗಲುವ ವೆಚ್ಚ ಎರಡು ಬಿಲಿಯನ್ ಅಮೆರಿಕನ್ ಡಾಲರ್‌ಗಳಿಗಿಂತಲೂ ಕಡಿಮೆ. ಆದರೆ, ಕೊನೆಗೆ ಅದು ಮಾರಾಟವಾಗುವುದು ೫೦ ಬಿಲಿಯನ್ ಅಮೆರಿಕನ್ ಡಾಲರ್‌ಗಳಿಗಿಂತ ಹೆಚ್ಚು. ಈ ಭಾರಿ ಪ್ರಮಾಣದ ಲಾಭಾಂಶ, ಲಕ್ಷಾಂತರ ಗಣಿ ಕಾರ್ಮಿಕರಿಗೆ ಸಿಗುವುದಿಲ್ಲ. ಅವರು ಕೇವಲ ಕೈಗೂ ಬಾಯಿಗೂ ಸಾಕಾಗುವಷ್ಟು ಮಾತ್ರ ಸಂಪಾದಿಸುತ್ತಾರೆ. ಕಡುಬಡವರು ಎಂದಾದರೂ ಒಂದು ದಿನ ಶ್ರೀಮಂತರಾಗುವ ಕನಸು ಕಾಣುತ್ತಾ ಗಣಿಗಳಲ್ಲಿ ಕೆಲಸ ಮಾಡಲು ಮನೆಬಿಟ್ಟು ಬರುತ್ತಾರೆ. ಅಪಾಯಕರ ಹಾಗೂ ಅನಾರೋಗ್ಯ ವಾತಾವರಣದಲ್ಲಿ ದುಡಿದು ಚಿಕ್ಕಾಸು ಗಳಿಸುತ್ತಾರೆ. ಲಾಭದ ಸಿಂಹಪಾಲು ಪಡೆಯುವವರು ಮಧ್ಯವರ್ತಿಗಳು, ವಜ್ರವ್ಯಾಪಾರಿಗಳು ಮತ್ತು ವಿದೇಶೀಯರು.

## ಮಾನವ ಹಕ್ಕು ಉಲ್ಲಂಘನೆ, ದ್ವಂದ್ವ ಭಯೋತ್ಪಾದನೆ

ಪುನರ್ವಸತಿ ಕಲ್ಪಿಸುವ ನೆಪದಲ್ಲಿ ಮೂಲವಾಸಿಗಳ ವಾಸಸ್ಥಾನಗಳನ್ನು ತೆರವು ಮಾಡಿಸಿ, ಜಮೀನು ಆಕ್ರಮಿಸಿಕೊಳ್ಳುವ ಗಣಿ ಮಾಲಿಕರು, ಮಾನವ ಮೂಲಭೂತ ಹಕ್ಕುಗಳ ಉಲ್ಲಂಘನೆ ಮಾಡುತ್ತಿದ್ದಾರೆ.

ಯುದ್ಧ, ಜನಸಂಖ್ಯಾ ಸ್ಫೋಟ, ವನಸಂಹಾರ, ಅವೈಜ್ಞಾನಿಕ ಕೃಷಿ ಮತ್ತು ಮೀನುಗಾರಿಕೆ, ಕಡಿಮೆಯಾಗುತ್ತಿರುವ ಶುದ್ಧ ನೀರಿನ ಪ್ರಮಾಣದಂತಹ ಪರಿಸರ ಸಂಬಂಧಿ ಒತ್ತಡಗಳನ್ನು ಎದುರಿಸುತ್ತಿರುವ ವಸುಂಧರೆಯ ಪತನದ ವೇಗ ಗಣಿಗಾರಿಕೆಯಿಂದ ಇನ್ನಷ್ಟು ತ್ವರಿತವಾಗುತ್ತಿದೆ. ಇದಕ್ಕೆ ಕರ್ನಾಟಕವೂ ಒಂದು ನಿದರ್ಶನ.

ಕಳೆದ ದಶಕದಲ್ಲಿ ಆಫ್ರಿಕಾದಲ್ಲಿ ಅಂಗೋಲ, ಸಿಯೊರಾ ಲಿಯನ್ ಮತ್ತು ಕಾಂಗೋ ಗಣರಾಜ್ಯಗಳಲ್ಲಿ ಅತ್ಯಂತ ಘೋರ ಆಂತರಿಕ ಯುದ್ಧಗಳು ನಡೆದವು. ಇಲ್ಲಿ ಉಗ್ರಗಾಮಿ ಸೈನ್ಯಗಳು ಶಸ್ತ್ರಾಸ್ತ್ರಗಳನ್ನು ಕೊಳ್ಳಲು ಹಣದ ಬದಲು ವಜ್ರಗಳನ್ನು ನೀಡಿದ್ದಾರೆ. ಸಿಯೊರಾ ಲಿಯಾನ್‌ನಲ್ಲಿ ರೆವಲ್ಯೂಷನರಿ ಯುನೈಟೆಡ್ ಫ್ರಂಟ್ ಹತ್ತಾರು ಸಾವಿರ ಜನರನ್ನು ಕೊಂದಿದೆ. ಅವರು ಬಳಸಿದ 'ರುಜು ತಂತ್ರ'ವೆಂದರೆ, ಜನರ ಕೈಗಳು, ಕಾಲು, ತುಟಿ, ಕಿವಿಗಳನ್ನು ಕೊಡಲಿ ಚಾಕುಗಳಿಂದ ಕತ್ತರಿಸಿ ವಿಕೃತಗೊಳಿಸಿ ತಮ್ಮನ್ನು ವಿರೋಧಿಸಿದವರಿಗೆ ಆಗುವ ಶಾಸ್ತಿ ಇದೇ ಎಂದು ಗಾಯದ ರೂಪದಲ್ಲಿ 'ರುಜು' ಮಾಡಿದ ಘಟನೆಗಳಿವೆ. (ಚಿತ್ತರದ ಆಗಸದ ಹಿನ್ನೆಲೆಯಲ್ಲಿ ದೇವರು ರುಜು ಮಾಡಿದಂತೆ!) ವಜ್ರದ ಗಣಿಗಳ ಮೇಲಿನ ತಮ್ಮ ನಿಯಂತ್ರಣವನ್ನು ತೋರಿಸಲು ಹೀಗೆ ಕ್ರೌರ್ಯ ತೋರಿಸುತ್ತಾರೆ.

ಯಾರು ವಜ್ರ ಮಾರುತ್ತಾರೆ, ಅವರಿಗೆ ಅದು ಹೇಗೆ ಸಿಕ್ಕಿತು, ಈ ಹಣದಿಂದ ಅವರೇನು ಮಾಡುತ್ತಾರೆ ಎಂದು ಯಾವ ವ್ಯಾಪಾರಿಯೂ ಯೋಚಿಸುವುದಿಲ್ಲ. ವಿಶ್ವದ ವಜ್ರ ವ್ಯಾಪಾರ ಕೇಂದ್ರಗಳ ಆರ್ಥಿಕ ಬೆಂಬಲ ಒಂದು ಕಡೆ, ಅಸಹಾಯಕವಾಗಿ ಬಾಲಯೋಧರಾಗಿ ಸೇರ್ಪಡೆಯಾಗುವ 'ಉಗ್ರಗಾಮಿಗಳ' ಸೈನ್ಯಬಲ ಒಂದು ಕಡೆ, – ಹಾಗೂ ಗಣಿಗಳಲ್ಲಿ ವಜ್ರ ಹೆಕ್ಕುವ ಕೈದಿ ಕಾರ್ಮಿಕರ ಶ್ರಮವೊಂದು ಕಡೆ – ಈ ಎಲ್ಲದರ ಸಹಾಯದಿಂದ ಆರ್.ಯು.ಎಫ್. ಕೋಟಿಗಟ್ಟಲೆ ಸಂಪಾದಿಸಿತು. ಗಣಿ ಶಿಬಿರದ ಕಾಮಕೈದಿಗಳ ಮೂಲಕ ಹೆಚ್.ಐ.ವಿ. ಸೋಂಕಿಗೆ ಒಳಗಾಗಿ ಏಡ್ಸ್‌ಗೆ ತುತ್ತಾಗಿ ಅನೇಕ ಕೂಲಿಗಳು ಸತ್ತರು. ಪದೇ ಪದೇ ಕಳ್ಳತನದ ಶಂಕೆಯಿಂದಲೋ, ವಜ್ರ ಹುಡುಕದಿದ್ದ ಕಾರಣಕ್ಕೊ ಅಥವಾ ಮೋಜಿಗಾಗಿಯೋ ಅವರ ಹತ್ಯೆ ನಡೆದವು.

ವಿಶ್ವ ಕುಖ್ಯಾತ ಒಸಾಮ ಬಿನ್ ಲಾಡೆನ್‌ನ 'ಅಲ್-ಖೈದ' ಹಾಗೂ ಹಿಜ್‌ಬುಲ್, ಟಾನ್‌ಜಾನಿಯ, ಕೀನ್ಯ, ಲೈಬೀರಿಯ ಮತ್ತು ಸಿಯೊರಾ ಲಿಯೋನ್ ದೇಶಗಳು ನಡೆಸುವ ದೋಚಿದ ವಜ್ರಗಳ ಮಾರಾಟದಿಂದಲೇ ತಮ್ಮ ಭಯೋತ್ಪಾದಕ ಶಿಬಿರಗಳಿಗೆ ಹಣ ಒದಗಿಸಿದ್ದು. ತಮಗೆ ಬೇಕಾದ ವಸ್ತುಗಳನ್ನು ಕೊಳ್ಳಲು ಅಪಾರ ಪ್ರಮಾಣದ ಹಣ, ಮತ್ತು ವಿದೇಶೀ ವಿನಿಮಯ ಹೊತ್ತು ತಿರುಗುವ ತೊಂದರೆ ಇಲ್ಲದೆ, ಬಹಳ ಸುಲಭವಾಗಿ ವಜ್ರಗಳ ಸಾಗಣೆಯಿಂದ ಅವುಗಳನ್ನು ಕೊಳ್ಳುತ್ತಿದ್ದರು. ಅಮೆರಿಕದ ಸರ್ಕಾರೀ ಮೂಲಗಳ ಅಂಕಿ ಅಂಶಗಳ ಪ್ರಕಾರ, ವಿಶ್ವದಾದ್ಯಂತ ನಡೆಯುವ ವಜ್ರದ ವಹಿವಾಟಿನ ಶೇ. ೧೫ರಷ್ಟನ್ನು ಭಯೋತ್ಪಾದಕರು ತಮ್ಮ ಚಟುವಟಿಕೆಗಾಗಿ ನಡೆಸುತ್ತಿದ್ದಾರೆ.







## ಬಂಗಾರದೊಡವೆ ಬೇಕೆ ?

ಆಲಂಕಾರಿಕ ಮೌಲ್ಯದ ಜೊತೆಗೆ ವಿಶ್ವದ ಚರಿತ್ರೆಯುದ್ದಕ್ಕೂ ಸಾಮ್ರಾಜ್ಯಗಳ ಬೆಳವಣಿಗೆ ಮತ್ತು ಆರ್ಥಿಕ ಸಂಸ್ಥೆಗಳ ಉತ್ಕ್ರಾಂತಿಯಲ್ಲಿ ಬಂಗಾರದ ಪಾತ್ರ ಪ್ರಮುಖವಾದುದು. ಕ್ರಿ.ಪೂ. ೪೦೦೦ದಲ್ಲಿ ಪೂರ್ವ ಹಾಗೂ ಮಧ್ಯ ಯೂರೋಪಿನಲ್ಲಿ ಮೊದಲ ಬಾರಿಗೆ ಬಂಗಾರವನ್ನು ಅಲಂಕಾರಕ್ಕಾಗಿ ಬಳಸಲಾಗಿತ್ತು. ಕ್ರಿ.ಪೂ.೧೫೦೦ ವೇಳೆಗಾಗಲೇ ಬಂಗಾರವು ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಪರಿಗಣಿತ ವಿನಿಮಯ ಮಾಧ್ಯಮವಾಗಿತ್ತು. ಕ್ರಿ.ಶ. ೧೮೦೦ರಲ್ಲಿ ಕ್ಯಾಲಿಫೋರ್ನಿಯಾ ಹಾಗೂ ದಕ್ಷಿಣ ಆಫ್ರಿಕಾದಲ್ಲಿ ಬಂಗಾರದ ನಿಕ್ಷೇಪಗಳು ಪತ್ತೆಯಾಗಿ ಅಲ್ಲಿನ ಜನಸಂಖ್ಯೆ ಹಾಗೂ ಆರ್ಥಿಕ ನಕ್ಷೆಗಳನ್ನು ಬದಲಿಸಿಬಿಟ್ಟಿವೆ.

ಇಂದು ವಿಶ್ವದ ಅತ್ಯಧಿಕ ಬಂಗಾರ ಉತ್ಪಾದಕರು ದಕ್ಷಿಣ ಆಫ್ರಿಕಾ, ಅಮೆರಿಕ, ಆಸ್ಟ್ರೇಲಿಯ, ಇಂಡೋನೇಷ್ಯ ಹಾಗೂ ಚೀನಾ. ಪ್ರತಿ ವರ್ಷ ಸುಮಾರು ೨೧ ಬಿಲಿಯನ್ ಡಾಲರ್ ಬೆಲೆಯ ೨೫೦೦ ಟನ್ ಬಂಗಾರವನ್ನು ಭೂ ಗರ್ಭದಿಂದ ತೆಗೆಯಲಾಗುತ್ತಿದೆ. ಇದರಲ್ಲಿ ಶೇ. ೮೫ರಷ್ಟು ಆಭರಣಗಳಾಗಿ ಪರಿವರ್ತಿತವಾಗುತ್ತಿದೆ. ಮದುವೆ ಉಂಗುರ, ಮತ್ತಿತರ ಆಭರಣಗಳು ಮುಖ್ಯವಾಗಿ ಬಂಗಾರದ್ದಾಗಿರುತ್ತದೆ. ವಜ್ರದ ಕಥೆಯಂತೆ ಇಲ್ಲೂ ಭಂಡ ಜಾಹೀರಾತುಗಳ ನೆರವಿನಿಂದ ಇದು ಅನಿವಾರ್ಯ ಅಗತ್ಯವೆಂಬ ಭಾವನೆ ಉಂಟುಮಾಡಿ ಚಿನ್ನವನ್ನು ಜನಪ್ರಿಯಗೊಳಿಸಲಾಗಿದೆ. ಚಿನ್ನದ ವಿಶಿಷ್ಟ ರಾಸಾಯನಿಕ ಹಾಗೂ ಭೌತಿಕ ಲಕ್ಷಣಗಳಿಂದ ಉಳಿದ ಶೇ. ೧೦-೨೦ ಭಾಗವನ್ನು ವಿದ್ಯುನ್ಮಾನ, ದೂರ ಸಂಪರ್ಕ, ಲೇಸರ್, ಮತ್ತು ವಿಮಾನಗಳ ಎಂಜಿನ್ನು ನಿರ್ಮಾಣ, ಮತ್ತು ದಂತ ಚಿಕಿತ್ಸೆಗಳಲ್ಲಿ ಬಳಸಲಾಗುತ್ತದೆ. ಚರಿತ್ರೆಯಲ್ಲಿ ಕ್ಯಾಥರೀನ್ ಡಿ ಮೆಡಿಕಿ ಚಿನ್ನವನ್ನು ವಿಷದಂತೆ ಬಳಸಿದ್ದಳು. ಇಂದು ಚಿನ್ನವನ್ನು ಮಂಡಿ ನೋವಿಗೆ, ಆರ್ಥ್‌ರೈಟಿಸ್ ಸಂಬಂಧಿರೋಗಗಳಿಗೆ ಔಷಧಿಯಾಗಿ ಬಳಸಲಾಗುತ್ತಿದೆ.

ಅಮೆರಿಕದಂತಹ ದೇಶಗಳಲ್ಲಿ ಚಿನ್ನದ ಆಭರಣಗಳ ಬೆಲೆ ಬರೀ ಚಿನ್ನದ ಬೆಲೆಗಿಂತ ನಾಲ್ಕು ಪಟ್ಟು ಇದೆ. ಇಂದು ಭೂ ಗರ್ಭದಲ್ಲಿ ಇರುವ ಒಟ್ಟು ಬಂಗಾರದ ಪ್ರಮಾಣದ ಮೂರು ಪಟ್ಟು ಬಂಗಾರ ವಿಶ್ವದ ವಿವಿಧ ಬ್ಯಾಂಕುಗಳ ಲಾಕರ್‌ಗಳಲ್ಲಿ, ಒಡವೆ ಪೆಟ್ಟಿಗೆಗಳಲ್ಲಿ ಮತ್ತು ಖಾಸಗೀ ಬಂಡವಾಳದಾರರ ಬಳಿ ಶೇಖರಗೊಂಡಿದೆ.

### ವಿಶ್ವದ ಅತ್ಯಂತ ವಿಷಮ ಉದ್ಯಮ

ಪ್ರಪಂಚದ ಅತ್ಯಂತ ಮಾರಣಾಂತಿಕ ಉದ್ಯಮವೆಂದರೆ ಗಣಿಗಾರಿಕೆ. ಗಣಿಗಾರಿಕೆಯಲ್ಲಿ ಪ್ರತಿದಿನ ಪ್ರಪಂಚದಾದ್ಯಂತ ಕನಿಷ್ಠ ೪೦ ಜನರು ಸಾಯುತ್ತಿದ್ದಾರೆ. ಅನೇಕರು ಗಾಯಾಳುಗಳಾಗುತ್ತಿದ್ದಾರೆ. ಗಣಿಗಾರಿಕೆಯಿಂದ ಪರಿಸರ ನಾಶ, ಮಾಲಿನ್ಯ, ಜೀವನೋಪಾಯಕ್ಕೆ ಅವಲಂಬಿಸಿದ್ದ ಸಾಂಪ್ರದಾಯಿಕ ಕಸುಬುಗಳ ನಾಶ, ಹಾಗೂ ಆರೋಗ್ಯ ಹಾನಿ ಉಂಟಾಗುತ್ತಿದೆ.

### ಸಂಪನ್ಮೂಲವೇ ಶಾಪ

ಚಿನ್ನದ ಉತ್ಪಾದನೆ ಗಣಿಗಾರಿಕೆಯನ್ನು ಅವಲಂಬಿಸುವುದರಿಂದಾಗಿ ಆರ್ಥಿಕ ಅಭಿವೃದ್ಧಿ ವಿಳಂಬವಾಗುವುದರ ಜೊತೆಗೆ ಆರ್ಥಿಕತೆ ಕುಂಠಿತಗೊಳ್ಳುತ್ತದೆ.

ಬಡತನ ಹೆಚ್ಚಾಗಿ ಸರ್ಕಾರದಲ್ಲಿ ಲಂಚಗುಳಿತನ ಅಧಿಕವಾಗುತ್ತದೆ. ಇದನ್ನು ಅರ್ಥಶಾಸ್ತ್ರಜ್ಞರು 'ಸಂಪನ್ಮೂಲ ಶಾಪ' ಎಂದು ಕರೆಯುತ್ತಾರೆ. ಸರ್ಕಾರವು ಆದಾಯಕ್ಕೆ ಚಿನ್ನದ ರಫ್ತನ್ನು ಅವಲಂಬಿಸಿದರೆ, ಪರ್‌ಕ್ಯಾಪಿಟ ಬೆಳವಣಿಗೆಯ ಪ್ರಮಾಣ ಕಡಿಮೆಯಾಗುತ್ತದೆ. ಚಿನ್ನದ ಗಣಿಗಾರಿಕೆಯಲ್ಲಿ ಲಾಭವು ಬಂಡವಾಳ ಹೂಡಿರುವ ವಿದೇಶೀಯರಿಗೆ ಹೋಗುತ್ತದೆ. ಸರ್ಕಾರಕ್ಕೂ, ಚಿನ್ನ ದೊರೆಯುವ ಭೂ ಪ್ರದೇಶಕ್ಕೂ ಯಾವುದೇ ಲಾಭವಾಗದು. ನೂರಾರು ವರ್ಷಗಳಿಂದ ಭೂ ಮಾಲಿಕರಾಗಿರುವ ಮೂಲವಾಸಿಗಳಿಗೆ ತಮ್ಮ ಭೂಮಿ ಮೇಲಿನ ಸ್ವಾಧೀನ ತಪ್ಪುತ್ತದೆ. ಮುನ್ಸೂಚನೆಯೂ ಇಲ್ಲದೆ ಅವರ ಎತ್ತಂಗಡಿಯಾಗುತ್ತದೆ. ಸಿಗುವ ಪರಿಹಾರ ಗೌಣ.

ವಿಶ್ವದ ಚಿನ್ನದ ಗಣಿಗಳಲ್ಲಿ ಕಾಲು ಭಾಗ ಪರ್ಯಟನ ತಾಣಗಳು, ಪ್ರಾಕೃತಿಕವಾಗಿ ಸೂಕ್ಷ್ಮವಾದ ರಾಷ್ಟ್ರೀಯ ಉದ್ಯಾನವನಗಳು, ವಿಶ್ವ ಪರಂಪರೆಯ ತಾಣಗಳು ಆಗಿವೆ.

### ಚಿನ್ನ = ಸಯನೈಡ್+ ಪಾದರಸ

ಕೇವಲ .೩೩ ಔನ್ಸ್‌ನಷ್ಟು ೧೮ ಕ್ಯಾರೆಟ್ ಚಿನ್ನ ಪಡೆಯಲು ಕನಿಷ್ಠ ಪಕ್ಷ ೧೮ ಟನ್‌ಗಳಷ್ಟು ಗಣಿ ತ್ಯಾಜ್ಯ ಹೊರಬೀಳುತ್ತದೆ. ಅದಿರಿನಿಂದ ಚಿನ್ನ ತೆಗೆಯಲು ಸಯನೈಡ್ ಬಳಸಲಾಗುತ್ತದೆ. ಗಣಿ ತ್ಯಾಜ್ಯದಲ್ಲಿ ಬೆರೆತ ಈ ಸಯನೈಡ್ ಭೂಜಲವನ್ನು ಕಲುಷಿತಗೊಳಿಸುತ್ತದೆ. ವಿಶ್ವದ ಅತ್ಯಂತ ದೊಡ್ಡ ತೆರೆದ ಗಣಿ ಎಂದೇ ವಿಖ್ಯಾತವಾದ ಗಿನಿಯ ಒಮೈಗಾ ಗಣಿ ನಿಷ್ಕ್ರಿಯವಾದಾಗ, ಮೂರು ಬಿಲಿಯನ್ ಕ್ಯೂಬಿಕ್ ಲೀಟರಿನಷ್ಟು ಸಯನೈಡ್ ಕಲುಷಿತ ನೀರನ್ನು ಒಮ್ಮೆಗೇ ನದಿಗೆ ಬಿಟ್ಟಿದ್ದರಿಂದ ಅದೊಂದು ಪರಿಸರ ದುರ್ಘಟನಾ ತಾಣವಾಗಿ ಪರಿಣಮಿಸಿತು.

೨೦೦೦ದಲ್ಲಿ ರೊಮೇನಿಯಾದ 'ಬಯ ಮಾರಿ' ಚಿನ್ನದ ಗಣಿಯಿಂದ ಹೊರಬಿದ್ದ ೧.೦೦,೦೦೦ ಮೆಟ್ರಿಕ್ ಟನ್‌ಗಳ ಕಲುಷಿತ ನೀರು ಟೈಲಿಂಗ್ ನದಿಯ ಮೀನುಗಳನ್ನು ಕೊಂದು, ತಮ್ಮ ಆಹಾರಕ್ಕಾಗಿ ಮೀನುಗಳನ್ನೇ ಅವಲಂಬಿಸಿದ್ದ ನೀರುನಾಯಿ, ಹದ್ದು ಇತರ ಪ್ರಾಣಿಗಳು ಮೃತಪಟ್ಟು ಜೀವಜಾಲವೇ ಅಸ್ತವ್ಯಸ್ತವಾಯಿತು. ಡ್ಯಾನ್ಯೂಬ್ ನದಿಯ ಅಚ್ಚುಕಟ್ಟಿನ ೨೫ ಮಿಲಿಯನ್ ಜನರ ಕುಡಿಯುವ ನೀರು ಕಲುಷಿತವಾಯಿತು.

೧೯೮೦ರಲ್ಲಿ ಶುರುವಾದ ಅಮೆಜಾನ್ ಬಂಗಾರದ ಬೇಟೆಯಲ್ಲಿ ಕನಿಷ್ಠ ೨೦೦೦ ಟನ್ ಪಾದರಸ ವಿಸರ್ಜನೆಯಾಗಿ ನೀರಿನಲ್ಲಿ ಮಿಥೈಲ್ ಮರ್ಕ್ಯುರಿ ಪ್ರಮಾಣ ಹೆಚ್ಚಿ ಜನರು ನರದೌರ್ಬಲ್ಯ, ಸ್ಮರಣ ಶಕ್ತಿ




"ಕೋಮುವಾದಿಗಳ ಬೀಡು' ಅಂತ ಬೇರೆಯವ್ರು ಹೇಳ್ತಾರಲ್ರೀ....!!

ಕುಂಠಿತವಾಗುವುದು, ಇಂದ್ರಿಯಗಳು ದುರ್ಬಲವಾಗುವಿಕೆ, ನಡುಕ, ಮತ್ತು ಸಮತೋಲನ ಶಕ್ತಿ ಕಳೆದುಕೊಳ್ಳುವ ಕಾಯಿಲೆಗಳಿಗೆ ತುತ್ತಾದರು.

ಚಿನ್ನವನ್ನು ಕರಗಿಸುವುದರಿಂದ ಪರಿಸರಕ್ಕೆ ಹಾನಿಯಾಗುತ್ತದೆ. ಭಾರೀ ಪ್ರಮಾಣದ ಇಂಧನ ಬಳಸಿ ಚಿನ್ನ ಕರಗಿಸುವಾಗ ವರ್ಷಕ್ಕೆ ೧೪೨ ಟನ್‌ಗಳಷ್ಟು ಸಲ್ಫರ್ ಡಯಾಕ್ಸೈಡ್ ಹೊರಬೀಳುತ್ತದೆ. ಈ ಮೊತ್ತ ಇಡೀ ವಿಶ್ವ ಹೊರಚೆಲ್ಲುವ ಒಟ್ಟು ಸಲ್ಫರ್ ಡಯಾಕ್ಸೈಡ್‌ನ ಶೇಕಡ ೧೨ರಷ್ಟು. ಇದರಿಂದ ಪರಿಸರದಲ್ಲಿ ಆಮ್ಲದ ಮಳೆ, ವಾಯು ಮಾಲಿನ್ಯ ಉಂಟಾದರೆ, ಮನುಷ್ಯರು ಚರ್ಮವ್ಯಾಧಿ, ಆಸ್ತಮಾ ಮತ್ತು ಸೀಸ ವಿಷ ಪ್ರಾಶನಗಳಿಗೆ ತುತ್ತಾಗುತ್ತಾರೆ. ಒಂದು ಅಧ್ಯಯನದ ಪ್ರಕಾರ ಶೇ. ೪೦ರಷ್ಟು ಜಲಾಶಯಗಳು ಚಿನ್ನದ ಗಣಿ ಮಾಲಿನ್ಯದಿಂದ ಬಾಧಿತವಾಗಿವೆ.

### ಸ್ತ್ರೀ ಮತ್ತು ಮಕ್ಕಳು

ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಜಲ ಮಾಲಿನ್ಯದ ಪರಿಣಾಮವಾಗಿ, ಮನೆಯ ನೀರಿನ ವ್ಯವಸ್ಥೆಯ ಜವಾಬ್ದಾರಿ ಹೊತ್ತ ಮಹಿಳೆ ಕುಡಿಯುವ ನೀರು ತರಲು ಈಗ ಹೆಚ್ಚು ಹೆಚ್ಚು ದೂರ ನಡೆಯಬೇಕಾಗಿದೆ. ಹೊಲದಲ್ಲಿ ಹೆಂಗಸರು ಕೆಲಸ ಮಾಡಿ ಹಣ ಗಳಿಸುತ್ತಿದ್ದರು. ಅಲ್ಲಿ ಈಗ ಗಣಿಗಳು ಬಂದಿವೆ. ಗಣಿಗಳಲ್ಲಿ ಬರೀ ಗಂಡು ಕಾರ್ಮಿಕರಿಗೆ ಕೆಲಸ. ಹೀಗಾಗಿ ಈಗ ಸ್ತ್ರೀಯರ ಆರ್ಥಿಕ ಶಕ್ತಿ ಕುಂಠಿತವಾಗಿದೆ. ಪರಿಣಾಮವಾಗಿ ಸ್ತ್ರೀಯರು ಆರ್ಥಿಕ, ಶೈಕ್ಷಣಿಕ, ರಾಜಕೀಯ, ಕಾನೂನು, ಈ ಎಲ್ಲ ಅವಕಾಶಗಳಿಂದ ಹೊರಗುಳಿಯುವಂತಾಗಿದೆ.

ಇಷ್ಟೆಲ್ಲ ಶೋಷಣೆ ಮತ್ತು ತೊಂದರೆಗಳನ್ನು ಸೃಷ್ಟಿಸುವ ಕೃಷಿಮಾಡಿದ ಹೂಗಳು, ಚಿನ್ನ ಮತ್ತು ವಜ್ರಗಳನ್ನು ಕೊಂಡು ನಾವು ಆ ಕ್ರೌರ್ಯದ ಪಾಲುದಾರರಾಗಬೇಕೆ ? ಕ್ರೂರಿಗಳನ್ನು ಬೆಂಬಲಿಸಬೇಕೆ ? ಖಂಡಿತಾ ಕೂಡದು. ಹಾಗಾದರೆ ನಮ್ಮ ಪ್ರೀತಿಯನ್ನು ತೋರ್ಪಡಿಸುವುದಾದರೂ ಹೇಗೆ ?

### ಪರಿಹಾರ

೧೯೯೦ರಲ್ಲಿ ಜರ್ಮನಿಯಲ್ಲಿ ಬಳಕೆದಾರರ ಜಾಗೃತಿ ಆಂದೋಲನ ತೀವ್ರಗೊಂಡು ಜನರು ಹೂ ಕೊಂಡುಕೊಳ್ಳುವುದನ್ನು ನಿಲ್ಲಿಸಿದಾಗ ಹೂ ಉದ್ಯಮಿಗಳು 'ಪರಿಸರ-ಮಿತ್ರ' ಲೇಬಲ್‌ಗಳನ್ನು ಧರಿಸಿ ಹೂ ಮಾರಲು ಪಟ್ಟ ಪ್ರಯತ್ನ ವಿಫಲವಾಯಿತು. ಈ ನಿಟ್ಟಿನಲ್ಲಿ ಅನೇಕ ಎನ್‌ಜಿ.ಓ.ಗಳು ಪ್ರಯತ್ನಪಟ್ಟವು. ಪರಿಸರಕ್ಕೆ ಹಾನಿಯಾಗದಂತೆ, ಕಾರ್ಮಿಕರ ಶೋಷಣೆಯಾಗದಂತೆ ಉತ್ಪಾದಿಸುವ ಹೂಗಳನ್ನು ಪ್ರೋತ್ಸಾಹಿಸಲಾಯಿತು. 'ಫುಡ್ ಫಸ್ಟ್ ಇನ್‌ಫರ್ಮೇಷನ್ ಆಕ್ಶನ್ ನೆಟ್‌ವರ್ಕ್' ನ ಅಂಗ ಸಂಸ್ಥೆಯಾದ 'ಹೂ ಆಂದೋಲನ'ವು ಹೂ ಉದ್ಯಮಿಗಳಿಗೆ ಕೆಲವು ಅಂತರರಾಷ್ಟ್ರೀಯ ನಡವಳಿಕೆ ಶಾಸನಗಳಿಗೆ ಬದ್ಧರಾಗಲು ಸೂಚಿಸಿತು. ಇದರಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ, ವಿಶ್ವ ಮಾನವ ಹಕ್ಕುಗಳ ಸಂಸ್ಥೆಗಳೂ ಶಾಮೀಲಾಗಿದ್ದವು. ಸಾವಯವಗೊಬ್ಬರ ಬಳಸಿ ಬೆಳೆಸಿದ ಹೂಗಳಿಗೆ 'ವೆರಿಫ್ಲೋರಾ' ಎಂಬ ಪ್ರಶಸ್ತಿ ಪತ್ರ ನೀಡಿ ಮಾರುಕಟ್ಟೆಗೆ ಹೊರತಂದಿತು. ಆದರೆ ಈ ಸರ್ಟಿಫಿಕೇಷನ್ ವ್ಯವಸ್ಥೆಯನ್ನು ಇನ್ನೂ ವಿಶ್ವದ ಎಲ್ಲ ವರ್ತಕರೂ ಒಪ್ಪಿಕೊಂಡಿಲ್ಲ.

ವಜ್ರಗಳಿಗೆ ಬದಲಾಗಿ ಕೃತಕ ವಜ್ರಗಳ ಪರ್ಯಾಯ ಈಗಾಗಲೇ ಪ್ರಾರಂಭವಾಗಿದೆ. ಜೆಮಿಸಿಸ್, ಡಿ ಬಿಯರ್ಸ್, ಅಪೋಲೋ ಡಯಮಂಡ್ - ಅಂತಹ ಕೆಲವು ಕಂಪನಿಗಳು ಅಂತಹ ಕೃತಕ ವಜ್ರಗಳನ್ನು ತಯಾರಿಸುತ್ತವೆ. ಆದರೆ ಇವುಗಳ ಬಣ್ಣ ಸ್ವಲ್ಪ ಹಳದಿ ಎಂಬುದೊಂದೇ ನ್ಯೂನತೆ. ಲೈಫ್‌ಜೆಮ್ ಕಂಪನಿ, ಮನುಷ್ಯ/ ಪ್ರಾಣಿಗಳ ಶವವನ್ನು ಸುಡುವಾಗ ಉಂಟಾಗುವ ಕಾರ್ಬನ್‌ನಿಂದ ವಜ್ರವನ್ನು ತಯಾರಿಸುತ್ತದೆ.

ಅನೇಕ ಜಾಗೃತ ಪ್ರಜೆಗಳು ಚಿನ್ನವನ್ನು ಕೊಳಕು ವಸ್ತುವೆಂದು ಪರಿಗಣಿಸಿದ್ದಾರೆ. ಶೋಷಣೆ, ಪರಿಸರ ನಾಶ ಮಾಡದೆ ಪಡೆದ ಚಿನ್ನ ಎಂದು ಸೀಲ್ ಒತ್ತಿದ ಚಿನ್ನವನ್ನು ತಯಾರಿಸಲೂ ಅಸಾಧ್ಯ, ನಂಬಲೂ ಅಸಾಧ್ಯ. ಹೀಗಾಗಿ ಬೇರೆ ಉಡುಗೊರೆಗಳ ಬಗ್ಗೆ ಯೋಚಿಸಬಹುದು. ನಾವು ನೀಡುವ ಉಡುಗೊರೆ ನಮ್ಮ ಪ್ರೀತಿಯನ್ನು ನೆನಪು ಮಾಡಬೇಕೆ ವಿನಾ ಪ್ರಕೃತಿ ನಾಶ, ಕ್ರೌರ್ಯ, ಇತ್ಯಾದಿಗಳನ್ನಲ್ಲ. ಪುನರ್‌ಬಳಸಿದ ಕಾಗದದಲ್ಲಿ ತಯಾರಾದ ಗ್ರೀಟಿಂಗ್ ಕಾರ್ಡ್, ಸಿ.ಆರ್.ವೈ. (ಚೈಲ್ಡ್ ರಿಲೀಫ್ ಅಂಡ್ ಯೂ), ಫುಟ್ ಅಂಡ್ ಮೌತ್ ಆರ್ಟಿಸ್ಟ್ ಇಂತಹ ಸಂಸ್ಥೆಗಳ ಗ್ರೀಟಿಂಗ್ ಕಾರ್ಡ್‌ಗಳು, ವಿಡಿಯೋ ಚಿತ್ರಗಳು, ಮನೆಯಲ್ಲಿ ತಯಾರಿಸಿದ ಆಹಾರ ಖಾದ್ಯಗಳು, ಪುಸ್ತಕ ಉಡುಗೊರೆ, ಗುಡಿಕೈಗಾರಿಕೆ, ಜಾನಪದ ಕಲಾಕೃತಿಗಳು, ಪರಿಸರ ಸಂಸ್ಥೆಗಳಿಗೆ ಒಂದು ವರ್ಷದ ಸದಸ್ಯತ್ವ, ಇಂತಹ ವಿಭಿನ್ನವಾದ, ಪರಿಸರ ಸಮಾಜಪರ ಕೊಡುಗೆಗಳ ಬಗ್ಗೆ ಯೋಚಿಸುವುದು ಸೂಕ್ತ.

ಡಾ|| ಉದಯ ರವಿ
ಇಂಗ್ಲಿಷ್ ಉಪನ್ಯಾಸಕ, ಪಿ.ಎ. ಕಾಲೇಜ್, ತಿಪಟೂರು

# ನಾಗರತ್ನ ಗ್ಯಾಲ್

**ಡಾ||** ಎಲ್. ಸಿ. ಸುಮಿತ್ರಾ ಅವರ 'ಗುಬ್ಬಿಹಳ್ಳದ ಸಾಕ್ಷಿಯಲ್ಲಿ' ಕಥಾ ಸಂಕಲನ ತನ್ನ ವಸ್ತು ವೈಶಿಷ್ಟ್ಯ, ಪರಿಸರ ಪ್ರಜ್ಞೆ, ಸೂಕ್ಷ್ಮಗ್ರಹಿಕೆಗಳಿಂದಾಗಿ ಭಿನ್ನವಾಗಿದೆ. ಈಗಾಗಲೇ ತಮ್ಮ ಸಾಹಿತ್ಯ ವಿಮರ್ಶೆ, ಸಂಶೋಧನಪರ ಲೇಖನಗಳಿಂದ ಮತ್ತು ಕವನ ಸಂಕಲನದಿಂದ ಕನ್ನಡ ಓದುಗರಿಗೆ ಪರಿಚಿತರಾಗಿರುವ ಲೇಖಕಿ ತಮ್ಮ 'ಗುಬ್ಬಿಹಳ್ಳದ ಸಾಕ್ಷಿಯಲ್ಲಿ' ಕಥಾ ಸಂಕಲನದಿಂದ ಸೃಜನಶೀಲತೆಯ ಹೊಸದೊಂದು ಮೆಟ್ಟಿಲು ಹತ್ತಿದ್ದಾರೆ.

ಈ ಕಥಾ ಸಂಕಲನದಲ್ಲಿ ಈಗಾಗಲೇ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಹನ್ನೊಂದು ಕತೆಗಳಿವೆ. ಮಲೆನಾಡಿನಲ್ಲಿ ಹುಟ್ಟಿ ಬೆಳೆದು ಬದುಕುತ್ತಿರುವ ಲೇಖಕಿ ತಾನಿರುವ ಪರಿಸರವನ್ನು ತೆರೆದ ಕಣ್ಣುಗಳಿಂದ, ಮುಕ್ತಮನಸ್ಸಿನಿಂದ, ಸೂಕ್ಷ್ಮ ಗ್ರಹಿಕೆಗಳೊಂದಿಗೆ ಅಲ್ಲಿನ ವರ್ತಮಾನದ ರಾಜಕೀಯ, ಸಾಮಾಜಿಕ ಬೆಳವಣಿಗೆಗಳನ್ನು, ಪಲ್ಲಟಗಳನ್ನು ಯಾವ ಪೂರ್ವಗ್ರಹವೂ ಇಲ್ಲದೆ ಅವಲೋಕಿಸಿ ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಸಂಕಲನದ ಮೊದಲ ಕತೆ 'ಗುಡಿಯೊಳಗೆ' ದಲಿತ ಸ್ತ್ರೀ ಸಣ್ಣಿಯ ಸುತ್ತ ತಿರುಗುತ್ತದೆ. ಸಣ್ಣಿಯ ಮಗ ರಾಮ ಮೇಲ್ಜಾತಿಯ ಅಯ್ಯನವರ ಮಗಳನ್ನು ಮದುವೆಯಾಗುತ್ತಾನೆ. ನಗರದಲ್ಲಿ ನೆಲೆಸಿ, ಆರ್ಥಿಕ ಪ್ರಗತಿ ಸಾಧಿಸಿ ವರ್ಗಾಂತರಗೊಂಡು ಊರಿನಲ್ಲಿಯ ಗುಡಿಯ ಪ್ರವೇಶಕ್ಕೆ ಪೂಜೆ ಸಲ್ಲಿಸುವುದಕ್ಕೆ ಯೋಗ್ಯನಾಗುತ್ತಾನೆ. ವಿಷಾದದ, ವಿಪರ್ಯಾಸದ ಸಂಗತಿಯೆಂದರೆ ಅದೇ ಹಳ್ಳಿಯಲ್ಲಿ ನೆಲೆಸಿ ಅವರಿವರ ಮನೆಗೆಲಸ ಮಾಡಿ ಜೀವನ ಸಾಗಿಸಿ ಮಗನ ಉನ್ನತಿಗೆ ಶ್ರಮಿಸಿದ ಅವನ ತಾಯಿ ಸಣ್ಣಿ ವರ್ಗಾಂತರ ಪ್ರಕ್ರಿಯೆಯಿಂದ ದೂರ ಉಳಿಯುತ್ತಾಳೆ. ಸ್ವಾಭಿಮಾನ ಆತ್ಮಗೌರವಗಳನ್ನುಳ್ಳ ದಿಟ್ಟ ಹೆಣ್ಣು ಸಣ್ಣಿ ಮಗನ ಅಂತರ್ ಜಾತೀಯ ವಿವಾಹವನ್ನು ವೈಯಕ್ತಿಕ ನೆಲೆಯಲ್ಲಿ ನೋಡುತ್ತಾಳೆ. ಸಮಾಜದ ಚೌಕಟ್ಟನ್ನು ಮೀರಿ ಮದುವೆಯಾದ ಎಂಬುದಕ್ಕಿಂತ ತನಗೆ ಹೇಳದೇ ಮದುವೆಯಾದನಲ್ಲ ಎಂಬುದೇ ಅವಳ ದುಃಖಕ್ಕೆ ಕಾರಣವಾಗಿತ್ತು. 'ದೇವರ ಗುಡಿ' ಪ್ರವೇಶಿಸಿದ ರಾಮ ತನ್ನ ತಾಯಿಯ 'ಗುಡಿಯಿಂದ' ನಿರ್ಗಮಿಸುತ್ತಾನೆ. ಮಗ ಸಾಮಾಜಿಕ ಸ್ಥಾನಮಾನದ ಏಣಿಯೇರಿದರೂ ಈ ವರ್ಗಾಂತರ ಪ್ರಕ್ರಿಯೆಯಿಂದ ವಂಚಿತಳಾಗಿ ಉಳಿಯುವ ಸಣ್ಣಿ ಮಗನ ಆತ್ಮೀಯತೆ, ಪ್ರೇಮ, ಕೌಟುಂಬಿಕ ಸಂಬಂಧಗಳಿಂದಲೂ ವಂಚಿತಳಾಗುತ್ತಾಳೆ. ವರ್ಗ ವ್ಯವಸ್ಥೆಯಲ್ಲಿನ ಆಂತರಿಕ ಸೂಕ್ಷ್ಮಗಳನ್ನು ಮಾನವೀಯ ಸಂದರ್ಭದ ಇತಿಮಿತಿಗಳಲ್ಲಿ ನೋಡುವ ಮನೋಜ್ಞ ಪ್ರಯತ್ನ ಇಲ್ಲಿದೆ.

ಸಂಕಲನದ ಶೀರ್ಷಿಕೆಯ ಕತೆ 'ಗುಬ್ಬಿಹಳ್ಳದ ಸಾಕ್ಷಿಯಲ್ಲಿ ..' ಮಲೆನಾಡಿನಲ್ಲಿ ಬದಲಾಗುತ್ತಿರುವ ಸಾಮಾಜಿಕ ಸ್ವರೂಪ, ಯುವಕರ ಅತೃಪ್ತಿ, ಭೂರಹಿತರ ಬವಣೆ, ಕೃಷಿ ಕಾರ್ಮಿಕರ ಆರ್ಥಿಕ ದುಃಸ್ಥಿತಿ ಮತ್ತು ಅತೃಪ್ತಿಗಳನ್ನು ನವಿರಾಗಿ ನಿರೂಪಿಸುತ್ತದೆ. ನಗರಾಭಿಮುಖಿಯಾಗಿರುವ ಗ್ರಾಮೀಣ ಬದುಕು, ಭಾವನಾತ್ಮಕ ಜಗತ್ತಿನಿಂದ ವ್ಯಾಪಾರೀಕರಣದತ್ತ ಹೊರಳುತ್ತಿರುವ ಸಮುದಾಯ, ಈ ಅತೃಪ್ತ ಸಮುದಾಯಕ್ಕೆ ಧ್ವನಿಯಾಗಿ, ಹೊಸ ಪ್ರತಿಭಟನೆಯ ಮಾಧ್ಯಮವಾಗಿ, ಆತ್ಮವಿಶ್ವಾಸವಾಗಿ ರೂಪುಗೊಳ್ಳುತ್ತಿರುವ ನಕ್ಸಲ್‌ವಾದ ಮತ್ತು ನಕ್ಸಲ್‌ವಾದದತ್ತ ಆಕರ್ಷಿತರಾಗುತ್ತಿರುವ ಯುವ ಸಮುದಾಯ – ಇವೆಲ್ಲವೂ ಇಂದಿನ ಸಾಮಾಜಿಕ ಸಂಕೀರ್ಣ ಸ್ಥಿತಿಯನ್ನು ತೆರೆದಿಡುತ್ತದೆ. ನಿಸರ್ಗ ಪಟೇಲ್ ಮೈಸೂರಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಮರಳಿ ಮಲೆನಾಡಿಗೆ ಬಂದಿದ್ದಾನೆ. ಇಲ್ಲಿನ ಪಲ್ಲಟಗಳ ಅರಿವು ಅವನಿಗಿದೆ. 'ಅರೆಬಟ್ಟೆ ತೊಟ್ಟ ಜನರೆದುರು ಕಾರಿನಲ್ಲಿ ಓಡಾಡುವಾಗ' ಅಪರಾಧಿ ಭಾವವೊಂದು ಅವನನ್ನು ಕಾಡಿದರೂ ''ಒಬ್ಬ ಆಕ್ಟಿವಿಸ್ಟ್ ಆಗಿ ಕೆಲಸ ಮಾಡುವುದು ನನಗೆ ಸಾಧ್ಯವಿಲ್ಲ'' ಎನ್ನುತ್ತ ಸಂಘರ್ಷವಿಲ್ಲದ ಒಂದು ಸುಸಂಬದ್ಧ ಬದುಕಿನೆಡೆಗೆ ಒಲವು ತೋರಿಸುತ್ತಾನೆ. ಪಟ್ಟಣದಿಂದ ಮಲೆನಾಡಿಗೆ ಹಿಂದಿರುಗುವ ನಿಸರ್ಗ ಪಟೇಲ್ ಅಲ್ಲಿಯ ಯುವಕರಿಗೆ ಈ ತೋಟದ ಕೆಲಸದ ಬದಲು ಸಣ್ಣ ಪಟ್ಟಣಗಳಲ್ಲಿ ರಿಕ್ಷಾ






ಗುಬ್ಬಿಹಳ್ಳದ ಸಾಕ್ಷಿಯಲ್ಲಿ | ಪುಟ : ೯೬
ಲೇಖಕಿ : ಡಾ|| ಎಲ್. ಸಿ. ಸುಮಿತ್ರಾ | ಬೆಲೆ : ರೂ. ೭೦

ಪ್ರಕಾಶಕರು : **ಅಂಕಿತ ಪುಸ್ತಕ**
೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯ ರಸ್ತೆ, ಬಸವನಗುಡಿ
ಬೆಂಗಳೂರು - ೫೬೦ ೦೦೪

# 'ಗುಬ್ಬಿಹಳ್ಳದ ಸಾಕ್ಷಿಯಲ್ಲಿ' – ಒಂದು ಓದು

**ಎಲ್. ಸಿ. ಸುಮಿತ್ರಾ ಅವರ ಈ ಕಥಾಸಂಕಲನ ಸಾಮಾನ್ಯವಾಗಿ ಲೇಖಕಿಯರ ಬರವಣಿಗೆಯಲ್ಲಿ, ಕಥಾವಸ್ತುವಿನ ಆಯ್ಕೆಯಲ್ಲಿ ಸಂವೇದನೆಗಳಲ್ಲಿ ಆಗಿರುವ ಸ್ಥಿತ್ಯಂತರಗಳ ಪ್ರತೀಕವಾಗಿದೆ. ಸರ್ವಸಾಧಾರಣವಾಗಿ ಕಂಡುಬರುವ ವಸ್ತುಗಳಾದ ಕುಟುಂಬದಲ್ಲಿ ಸ್ತ್ರೀ, ಸ್ತ್ರೀ - ಪುರುಷ ಸಂಬಂಧಗಳ ಅನ್ವೇಷಣೆ, ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀಯರ ಶೋಷಣೆ ಇವಿಷ್ಟಕ್ಕೆ ಸೀಮಿತವಾಗದೆ, ಭಾವನಾವಶತೆಯ ವಲಯದಾಚೆಗೆ, ಕುಟುಂಬದ ಪರಿಧಿಯಾಚೆಗೆ ಹೋಗಿ ಆಧುನಿಕೀಕರಣ, ಜಾಗತೀಕರಣ, ನಗರೀಕರಣ, ನಕ್ಸಲ್‌ವಾದಗಳ ಪರಿಣಾಮಗಳನ್ನು ಕೌಟುಂಬಿಕ ಆವರಣದಲ್ಲಿ ಚಿತ್ರಿಸುತ್ತಾ ಗ್ರಾಮೀಣ ಜೀವನದಲ್ಲಿ ಅನಾವರಣಗೊಳಿಸುತ್ತಾರೆ.**

ಡ್ರೈವರ್ ಆಗಿ ಅಥವಾ ಗಾರೆ ಕೆಲಸ ಮಾಡಿಕೊಂಡಿರುವುದೇ ಬಿಡುಗಡೆಯ ಹಾದಿ ಎಂದು ಭಾವಿಸುತ್ತಾನೆ. ಕಾಡಿನ ಹೂಗಳ ಬಗ್ಗೆ ಸಂಶೋಧನೆ ನಡೆಸಲೆಂದು ಬರುವ ಅವನಿ ನಕ್ಸಲ್ ನಾಯಕಿಯೇ, ಸಂಶೋಧಕಿಯೇ ಎಂಬ ಪ್ರಶ್ನೆ ನಿಗೂಢವಾಗಿಯೇ ಉಳಿಯುತ್ತದೆ. ಅವನಿ ಮತ್ತು ನಿಸರ್ಗ ಪಟೇಲರ ಅವಲೋಕನ, ಸೂಕ್ಷ್ಮ ಗ್ರಹಿಕೆಗಳು ಮಲೆನಾಡಿನ ಸಾಮಾಜಿಕ, ರಾಜಕೀಯ ಪಲ್ಲಟಗಳನ್ನು, ಅದರ ಜಟಿಲತೆಗಳನ್ನು ತೆರೆದಿಡುತ್ತವೆ.

'ಕಲ್ಲಿನ ಕೋಳಿ' ಈ ಕಥಾಸಂಗ್ರಹದಲ್ಲಿನ ಮತ್ತೊಂದು ಉತ್ತಮ ಕತೆ. ಜಾಗತೀಕರಣ, ಆಧುನಿಕೀಕರಣ ಮತ್ತು ನಗರೀಕರಣ ಅಲೆಗಳ ಪ್ರಭಾವವನ್ನು ಮತ್ತು ಪರಿಣಾಮಗಳನ್ನು ಸ್ಥಳೀಯ ಪರಿಸರದಲ್ಲಿ ಪರೀಕ್ಷಿಸಿ ವಿಶ್ಲೇಷಿಸುವ, ಅನಾವರಣಗೊಳಿಸುವ, ಪ್ರಯತ್ನ ಇಲ್ಲಿದೆ. ಸುನಿಲ್ ಕೈಮುರಿದುಕೊಂಡು ವಿಶ್ರಾಂತಿಗಾಗಿ ಹಳ್ಳಿಗೆ ಬಂದಿರುತ್ತಾನೆ. ಮೂಳೆ ಬೇಗ ಕೂಡಿಕೊಳ್ಳುವುದಕ್ಕೆ ಸಹಾಯವಾಗಲು ತಿನ್ನಬೇಕಾದ ನಾಟಿ ಕೋಳಿಯ ಮೊಟ್ಟೆಗಾಗಿ ಹುಡುಕಾಡುವ ಅಜ್ಜಿ ಗೌರಮ್ಮನಿಗೆ ನಿರಾಶೆ ಎದುರಾಗುತ್ತದೆ. ವೆನಿಲಾ ಕೃಷಿ ನಾಟಿ ಕೋಳಿಯನ್ನು ಬಲಿ ತೆಗೆದುಕೊಂಡಿರುತ್ತದೆ. ''ಗಿಡದ ಬುಡದ ದರಗೆಲ್ಲಾ ಕೆದರ್ತವೆ ಅಂತ ಇದ್ದ ನಾಕೂ ಕೋಳೀನೂ ಮಾರಿಬಿಟ್ಟೆ'' ಎನ್ನುತ್ತಾಳೆ ಅಜ್ಜಿ. ಈ ಮೂಲಕ ಜಾಗತೀಕರಣವು ದೇಸೀಜ್ಞಾನ, ದೇಸಿ ತಳಿಗಳು, ದೇಸಿ ಸಂಸ್ಕೃತಿಗೆ ಮಾರಕವಾಗುತ್ತಿರುವುದನ್ನು ಲೇಖಕಿ ಮಾರ್ಮಿಕವಾಗಿ ಹೇಳುತ್ತಾರೆ. ಮಾರುಕಟ್ಟೆ ಸಂಸ್ಕೃತಿ ಕೃಷಿ ಬೆಳೆಗಳ ವೈವಿಧ್ಯತೆಯನ್ನು ನಾಶಗೊಳಿಸಿದೆ. ''ಭತ್ತ ಬೆಳೆಯುವುದರಿಂದ ಯಾವುದೇ ಲಾಭವಿಲ್ಲ... ಅದಕ್ಕೆ ಎಲ್ಲಾ ಗದ್ದೆಗಳನ್ನು ತೋಟ ಮಾಡಿಬಿಟ್ಟಿದೀವಿ'' ಎನ್ನುತ್ತಾಳೆ ಗೌರಮ್ಮ. ಜಾಗತೀಕರಣ ಮಾರುಕಟ್ಟೆಯಲ್ಲಿ ಬೆಲೆಯಿಲ್ಲದೆ ಭತ್ತ ಮೂಲೆಗುಂಪಾಗಿ ಸ್ಥಳೀಯರ ಬೇಡಿಕೆಗಳನ್ನು ಕಡೆಗಣಿಸಿ, ಪಟ್ಟಣದವರು ತಿನ್ನುವ ಐಸ್‌ಕ್ರೀಮ್‌ಗೆ ಬೇಕಾದ ವೆನಿಲ್ಲಾ ಬೆಳೆಗೆ ಪ್ರಾಧಾನ್ಯ ದೊರೆತಿದೆ. ಬಡ ರೈತರು ಹಳ್ಳಿಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋಗುವುದು ಜಾಗತೀಕರಣದ ಇನ್ನೊಂದು ಮುಖ. ಆದರೆ ಸುನಿಲ ತನ್ನ ಆರ್ಥಿಕ ಸ್ಥಿತಿ ಉತ್ತಮವಾಗಿದ್ದರೂ ಬೆಂಗಳೂರಿಗೆ ವಲಸೆ ಹೋಗಿದ್ದಾನೆ. 'ಗಿರಿ' ಯಾರಿಗೂ ಹೇಳದೆ ಕೇಳದೆ ಹೋದ ಹಾಗೇ ತಾನೂ ಬೆಂಗಳೂರಿಗೊ ಮಂಗಳೂರಿಗೊ ಹೋಗಿ ಹೋಟೆಲಿನಲ್ಲಿ ಕೆಲಸ ಮಾಡಬೇಕೆಂದು ಮಂಜು ಮಾಡುವ ವಿಚಾರ ತಾನೂ ಮಾಡುತ್ತಾನೆ. ಜಾಗತೀಕರಣ ಪ್ರಕ್ರಿಯೆಯು ಆಯ್ಕೆಯ ಸಾಧ್ಯತೆಯನ್ನು ವಿಸ್ತರಿಸಿ ಪರ್ಯಾಯಗಳನ್ನು ಮುಚ್ಚಿಹಾಕಿದೆ. ಮಲೆನಾಡಿನಲ್ಲಿ ಕಂಡಬರುವ ವರ್ಗವೈರುದ್ಧ್ಯ, ಬಡತನ, ಶೋಷಣೆ, ಜಾತಿ ವ್ಯವಸ್ಥೆಯ ವಿರೋಧಾಭಾಸಗಳು, ಈ ಎಲ್ಲ ವಿಪರ್ಯಾಸಗಳ ನಡುವೆ 'ಕಲ್ಲಿನ ಕೋಳಿ' ಕೂಗಲಿದೆ ಎಂಬ ಆಶಯವನ್ನು ಈ ಒಂದು ಪ್ರತಿಮೆಯ ಮೂಲಕ ವ್ಯಕ್ತಪಡಿಸಲಾಗಿದೆ. ಎಲ್ಲರಿಗೂ ಸಮ ಬಾಳು, ಸಮಾನಸಂಧಿ, ಸಮಾನ ಸಂಪತ್ತು ಸಿಗುವ ಕನಸಿನ ಪ್ರತೀಕವಾಗುತ್ತದೆ 'ಕಲ್ಲಿನ ಕೋಳಿಯ' ಕೂಗು.

ಲೇಖಕಿ 'ಸುಳಿಯೊಳಗಿನ ಬೆಂಕಿ' ಕತೆಯಲ್ಲಿ ತಲೆ ಸತ್ತ ಮರ ಮತ್ತು ತಲೆಗೆ ಏಟುಬಿದ್ದು ಬುದ್ಧಿಕ್ಷಮತೆಯನ್ನು ಕಳೆದುಕೊಂಡ ಸುಂದರತ್ತೆಯ ನಡುವಿನ ಸಾಮ್ಯವನ್ನು ಮಂಡಿಸುತ್ತಾ ಕೊನೆಯಲ್ಲಿ ಮೂಲಭೂತ ಪ್ರಶ್ನೆಯೊಂದನ್ನು ಓದುಗರೆದುರು ಇಡುತ್ತಾರೆ – ''ತಲೆಯಿಲ್ಲದವರು ಬದುಕುವುದೇ ಬೇಡವೇ ?'' ಸುಂದರತ್ತೆಯ ಬದುಕಿನಲ್ಲಿ ಘಟಿಸಿದ ದುರಂತಕ್ಕೆ ಆಧುನಿಕ ಬುದ್ಧಿ ಕ್ಷಮತೆ ಕೇಂದ್ರಿತ ನಾಗರಿಕ ಸಮಾಜದ ಮಾನವೀಯ ಪ್ರತಿಕ್ರಿಯೆ ಏನು ? ಸುಂದರತ್ತೆಯ ಆಕಸ್ಮಿಕ ದುರಂತಕ್ಕಿಂತ ಮುಂಚಿನ ಅವಳ ವೈವಾಹಿಕ ಜೀವನದಲ್ಲಿನ ಅತೃಪ್ತಿಗಳನ್ನು ಲೇಖಕಿ ಚಿತ್ರಿಸುತ್ತಾ ವಿವಾಹ ಸಂಸ್ಥೆಯಲ್ಲಿ ಸ್ತ್ರೀಯ ಸ್ಥಾನಮಾನಗಳ ಸೂಕ್ಷ್ಮ ನಿರೀಕ್ಷಣೆಯನ್ನು ಹೀಗೆ ಮಾಡಿದ್ದಾರೆ: ''ತವರಿನಲ್ಲಿ ಅತಿಯಾದ ಆತ್ಮವಿಶ್ವಾಸದಿಂದಿದ್ದ ಸುಂದರತ್ತೆ ಗಂಡನ ಮನೆಯಲ್ಲಿ ಎಲ್ಲ ಅವಕಾಶಗಳಿಂದ ವಂಚಿತಳಾಗಿ ಅನುಭವಿಸುತ್ತಿದ್ದಳು. ಅವಳ ವೇಷ ಉಡಿಗೆ ತೊಡಿಗೆ ಎಲ್ಲವನ್ನು ನಿಯಂತ್ರಿಸುತ್ತಿದ್ದವರ ಕುರಿತು ಅವಳಿಗೆ ಅಸಮಾಧಾನವಿತ್ತು.'' ಮದುವೆಯ ನಂತರ ಗಂಡನ ಪ್ರೇಮಕ್ಕೆ, ಆತ್ಮಸನ್ಮಾನಕ್ಕೆ, ಸ್ವತಂತ್ರ ಅಸ್ತಿತ್ವಕ್ಕೆ, ನಿರ್ಣಯ ಸ್ವಾತಂತ್ರ್ಯಕ್ಕೆ, ಆಯ್ಕೆಯ ಸ್ವಾತಂತ್ರ್ಯಕ್ಕೆ ಹಂಬಲಿಸಿ ಅತೃಪ್ತ ಬದುಕು ನಡೆಸುತ್ತಿದ್ದ ಸುಂದರತ್ತೆ ಅಪಘಾತದ ನಂತರ ತಲೆಸತ್ತ ಬದುಕು ಬದುಕುವ ದುರಂತವನ್ನು ಲೇಖಕಿ ಸಶಕ್ತವಾಗಿ ಚಿತ್ರಿಸಿದ್ದಾರೆ.

ಮತ್ತೊಂದು ಸ್ತ್ರೀ ಕೇಂದ್ರಿತ ಕಥೆ 'ಯು ಕಟ್' ಸೌಂದರ್ಯ, ಸೌಂದರ್ಯ ವರ್ಧನೆ, ದೇಹಸಿರಿಯ ಆರಾಧನೆಯಲ್ಲಿ ಮುಳುಗಿ ತನ್ನ 'ಕೆರಿಯರ್' ಕಡೆ ಬೆನ್ನು ತಿರುಗಿಸಿ ಹರಿಯುವ ನೀರಿನಲ್ಲಿರುವ ಬಂಡೆಯಂತೆ ನಿಲ್ಲುವ ರೋಮಲ್ ಮತ್ತು ಆದಕ್ಕೆ ಪರಸ್ಪರ ವಿರೋಧಿ ಪಾತ್ರದಂತಿರುವ ಅವಳ ತಂಗಿ ನಿರಾಭರಣ, ಕಂದು ಬಣ್ಣದ ಸುಂದರಿ, ಶುಕಾಗ್ರ, ಸೂಕ್ಷ್ಮಮತಿ ಜ್ಯೋತ್ಸ್ನಾಳ ಬದುಕು ಸಾಗಿಸುವ ರೀತಿ ಸ್ತ್ರೀ ಸಮುದಾಯ




ಯಾವುದಕ್ಕೆ ಒತ್ತು ಕೊಡಬೇಕೆನ್ನುವುದು ಸ್ತ್ರೀಯ ವೈಯಕ್ತಿಕ ಆಯ್ಕೆ, ಆದ್ಯತೆ, ಅಭಿರುಚಿಗಳು ಏನಾಗಿರಬೇಕು ಎನ್ನುವುದನ್ನು ವಾಚ್ಯವಾಗಿ ಹೇಳುತ್ತದೆ. 'ಅಲೆಗಳ ನಡುವೆ' ಮತ್ತು 'ಅಂದಂದೇ ಹುಟ್ಟಿತ್ತು' – ಈ ಎರಡೂ ಕಥೆಗಳಲ್ಲಿ ಸ್ತ್ರೀ ಪ್ರಮುಖ ಭೂಮಿಕೆಯಲ್ಲಿದ್ದಾಳೆ. ವಿವಾಹ ಸಂಸ್ಥೆ ಮತ್ತು ಸ್ತ್ರೀ ಇಲ್ಲಿಯ ವಸ್ತು. 'ಅಂದಂದೇ ಹುಟ್ಟಿತ್ತು' ಕತೆಯಲ್ಲಿನ ನಾಯಕಿ ನೀಹಾರಿಕಾಳ ಜೀವನಕ್ಕೆ ಅಣಚಿ ಸಂಕೇತವಾಗುತ್ತದೆ. ಅವಳ ಮನೆಗೆಲಸದ ಪುಟ್ಟಮ್ಮ ಆರ್ಥಿಕ ಜವಾಬ್ದಾರಿಗಳನ್ನು ನಿಭಾಯಿಸುತ್ತ ಗಂಡನ ಅತ್ಯಾಚಾರವನ್ನು ಅವನ ಮೇಲಿನ ಪ್ರೀತಿಗೋ ಅಥವಾ ಸಮಾಜದ ಭೀತಿಗೋ ಸಹಿಸುತ್ತಲೇ ಜೀವಿಸುತ್ತಾಳೆ. ಅವಳಿಗೆ ವೈದೃಶ್ಯ ಪಾತ್ರವಾಗಿ ಆಧುನಿಕ ವಿಚಾರದ ಆಧುನಿಕ ಸ್ತ್ರೀ ರಂಜಿತಾ ಗಂಡನ ಸ್ವಭಾವ ಹಿಡಿಸಲಿಲ್ಲವೆಂದು ಮದುವೆಯಾದ ಆರು ವರ್ಷಕ್ಕೇ ಅವನಿಂದ ವಿಚ್ಛೇದನ ಪಡೆದು, ಚಿಕ್ಕ ಮಗುವನ್ನು ತಂದೆಯ ಹತ್ತಿರ ಬಿಟ್ಟು ಇನ್ನೊಂದು ಮದುವೆಯಾಗುವ ಯೋಚನೆಯಲ್ಲಿದ್ದಾಳೆ. ಮೂವರು ಸ್ತ್ರೀಯರು ವಿಭಿನ್ನ ನೆಲೆಗಳಲ್ಲಿ ಜೀವಿಸುವ, ಚಿಂತಿಸುವ ಸಮಾಜದಲ್ಲಿನ ಮೇಲ್ವರ್ಗ ಮತ್ತು ಕೆಳವರ್ಗಗಳಲ್ಲಿನ ವಿಚಾರ ಸರಣಿಯ ವಿಭಿನ್ನತೆಯನ್ನು ಪ್ರತಿನಿಧಿಸುತ್ತಾರೆ. ಅಲೆಗಳ ನಡುವೆ... – ಕತೆಯಲ್ಲಿ ಬಹಳ ವರ್ಷಗಳ ನಂತರ ಭೇಟಿಯಾದ ಐವರು ಗೆಳತಿಯರು ಗತ ನೆನಪುಗಳನ್ನು ಮೆಲುಕು ಹಾಕುತ್ತಾ ಬದುಕುವ ಸ್ವಾತಂತ್ರ್ಯ ಮತ್ತು ಸ್ತ್ರೀಯ ಆಯ್ಕೆಯ ಸ್ವಾತಂತ್ರ್ಯದ ಬಗ್ಗೆ ಚರ್ಚಿಸುತ್ತಾರೆ. ರಂಜಿತಾ ಮದುವೆಯ ಸಾಂಪ್ರದಾಯಿಕ ಬಂಧನದಲ್ಲಿ ಸಿಕ್ಕದೇ ಜೀವನ ನಡೆಸುತ್ತಿದ್ದಾಳೆ. ರತ್ನಪ್ರಿಯ ''ಹೌದು ಕಣೇ, ಸಾಂಪ್ರದಾಯಿಕ ಬದುಕನ್ನು ಆಯ್ದುಕೊಂಡು ಗಂಡ, ಮನೆ ಮಕ್ಕಳು, ಕೆಲಸ ಎಂದಿರುವವರೆಲ್ಲ ಸುಖವಾಗಿದ್ದಾರ, ಎಂದು ಕೇಳಿದರೆ 'ಹೌದು' ಎಂಬ ಉತ್ತರ ಬರುವುದು ಕಷ್ಟ'' ಅನ್ನುತ್ತಾಳೆ. ಈ ದೃಷ್ಟಿಕೋನಗಳನ್ನು ಪ್ರತಿಪಾದಿಸುತ್ತ ಲೇಖಕಿ ಯಾವ ದೃಷ್ಟಿಕೋನವನ್ನು ಬೆಂಬಲಿಸುತ್ತಾರೆ ಎನ್ನುವುದಕ್ಕೆ ''ಒಂದು ಕ್ಷಣ ಅವಳ ಸ್ವತಂತ್ರ ಜೀವನ ಕುರಿತು ನಾಲ್ವರಲ್ಲೂ ಅಸೂಯೆ ಮೂಡಿತು'' ಎಂಬ ಮಾತುಗಳು ಕನ್ನಡಿ ಹಿಡಿಯುತ್ತವೆ. ಸ್ತ್ರೀಯ ಬದುಕಿನಲ್ಲಿ ಅತ್ಯಾವಶ್ಯಕವಾದ ಆಯ್ಕೆಯ ಸ್ವಾತಂತ್ರ್ಯ ಮತ್ತು ಆಯ್ಕೆಯನ್ನು ಕಾರ್ಯರೂಪಕ್ಕೆ ತರಲು ಅಗತ್ಯವಿರುವ ಧೈರ್ಯದ ಬಗ್ಗೆ ಕತೆ ಹೇಳುತ್ತದೆ. ಇಲ್ಲಿ ಸ್ವತಂತ್ರ ವಿಚಾರ ಸರಣಿಯ, ಸ್ಪಷ್ಟ ಅನಿಸಿಕೆಗಳ, ದಿಟ್ಟ ಮನೋಭಾವದ ಸ್ತ್ರೀ ಪಾತ್ರಗಳನ್ನು 'ಅಲೆಗಳ ನಡುವೆ', 'ಅಂದಂದೆ ಹುಟ್ಟಿತ್ತು' ಈ ಎರಡು ಕತೆಗಳಲ್ಲಿ ಲೇಖಕಿ ಸೃಷ್ಟಿಸಿದ್ದಾರೆ. ಸ್ತ್ರೀ ಸಮುದಾಯದ ಅನುಭವಗಳಲ್ಲಿ, ಅನಿಸಿಕೆಗಳಲ್ಲಿ, ಧೋರಣೆಗಳಲ್ಲಿ, ವಿಚಾರಗಳಲ್ಲಿ ಆಗಿರುವ ಬದಲಾವಣೆಗಳನ್ನು ಹಿಡಿದಿಡುವ ಪ್ರಯತ್ನವನ್ನು ಈ ಕತೆಗಳು ಮಾಡಿವೆ. ಆದರೆ ಈ ಎರಡೂ ಕತೆಗಳು ಸಂಕೀರ್ಣ ಸಂದರ್ಭಗಳಿಲ್ಲದೇ ಕೇವಲ ಸರಳೀಕೃತ ಹೇಳಿಕೆಗಳ ರೂಪದಲ್ಲಿವೆ.

'ಸೀನು ಶಾಲೆ ಬಿಟ್ಟಿದ್ದು' ಮತ್ತು 'ಗಣ ಬಂದು ಹೋದಾಗ' ಈ ಕಥೆಗಳು ಕ್ರೌರ್ಯದ ವಿವಿಧ

ಮುಖಗಳನ್ನು ಹಿಡಿದಿಡುತ್ತವೆ. 'ಸೀನು ಶಾಲೆ ಬಿಟ್ಟಿದ್ದು' ವರ್ಗ, ವರ್ಣ ವ್ಯವಸ್ಥೆಯಲ್ಲಿ ಅಡಗಿರುವ ಕ್ರೌರ್ಯ, ಹಿಂಸೆಯ ಪದರಗಳನ್ನು ಬಿಡಿಸಿಹೇಳುತ್ತವೆ. ಮಲೆನಾಡಿನ ಪರಿಸರ, ಅಲ್ಲಿಯ ಜೀವನ ಶೈಲಿ, ಮುಗ್ಧ ಮಕ್ಕಳ ಮನಸ್ಸು ಮತ್ತು ಅವರ ಆಟಪಾಠಗಳನ್ನು ಅತ್ಯಂತ ಆತ್ಮೀಯತೆಯಿಂದ ಲೇಖಕಿ ಕಟ್ಟಿಕೊಡುತ್ತಾರೆ. ಶಾಲೆಯಲ್ಲಿ ತನ್ನ ಜಾತಿಯನ್ನು ಮರೆಯದ ಶಿಕ್ಷಕ ಈ ಸಮಾಜವ್ಯವಸ್ಥೆಯಲ್ಲಿ ಭದ್ರವಾಗಿ ಬೇರೂರಿರುವ ಜಾತೀಯತೆ, ವರ್ಗ, ವರ್ಣ ವೈಷಮ್ಯತೆ ಮುಂತಾದವುಗಳ ದುಷ್ಪರಿಣಾಮಗಳ ಪ್ರತೀಕವಾಗುತ್ತಾನೆ. ವಿಷ್ಣು ಭಟ್ಟರ ಮಗಳು ಸುನೇರಿಯನ್ನು ಕಂಡರೆ ಮೇಷ್ಟ್ರಿಗೆ ಇರುವ ವಿಶೇಷ ಮಮತೆ ಸೀನನ ಬಗ್ಗೆ ಇರುವ ಅಸಡ್ಡೆ, ಅಸಹನೆ, ಸಮಾಜ ವ್ಯವಸ್ಥೆಯನ್ನು ಸುಧಾರಿಸಬೇಕಾದ, ಪರಿವರ್ತಿಸಬೇಕಾದ ಶಿಕ್ಷಕ ಈ ಸಮಾಜದ ಎಲ್ಲಾ ಅನಿಷ್ಟಗಳನ್ನು ಅಂತರ್ಗತಗೊಳಿಸಿಕೊಂಡು ಅವನ್ನು ಇನ್ನಷ್ಟು ಗಟ್ಟಿಗೊಳಿಸುವ ವಿಪರ್ಯಾಸವನ್ನು ಲೇಖಕಿ ಸಶಕ್ತವಾಗಿ ಚಿತ್ರಿಸಿದ್ದಾರೆ. 'ಗಣ ಬಂದು ಹೋದಾಗ' ಫ್ಯೂಡಲ್ ವ್ಯವಸ್ಥೆಯಲ್ಲಿನ ಕ್ರೌರ್ಯ, ಶೋಷಣೆ, ಶೋಷಿತನ ಅಸಹಾಯಕ ಸಿಟ್ಟನ್ನು ಹಿಡಿದಿಡುತ್ತದೆ. ಕೊಗ್ಗ ಗೌಡರ ವರ್ತನೆಯಿಂದ ಸಿಟ್ಟಿಗೆದ್ದಿದ್ದಾನೆ. ಆದರೆ ನೇರವಾಗಿ ಪ್ರಬಲ ಸಂಘರ್ಷಕ್ಕಿಳಿಯದೆ, ಪ್ರತಿರೋಧ ವ್ಯಕ್ತಪಡಿಸದೆ, ಸಮಸ್ಯೆಗೆ ಮುಖಾಮುಖಿಯಾಗದೆ, ಬಂಡೇಳದೆ 'ಮೈಮೇಲೆ' ಬಂದ ಅವಸ್ಥೆಯಲ್ಲಿ ತನ್ನ ಸಿಟ್ಟನ್ನು ವ್ಯಕ್ತಪಡಿಸುತ್ತಾನೆ. ವ್ಯವಸ್ಥೆಯಲ್ಲಿನ ಹಿಂಸೆ, ಕ್ರೌರ್ಯ, ಶೋಷಣೆಗಳು ವ್ಯಕ್ತಿಯನ್ನು ಹೇಗೆ ಅಸಹಾಯಕನನ್ನಾಗಿ ಮಾಡುತ್ತವೆ ಎನ್ನುವುದನ್ನು ಪ್ರತಿಪಾದಿಸುವ ಪ್ರಯತ್ನ ಇಲ್ಲಿದೆ.

ಎಲ್. ಸಿ. ಸುಮಿತ್ರಾ ಅವರ ಈ ಕಥಾಸಂಕಲನ ಸಾಮಾನ್ಯವಾಗಿ ಲೇಖಕಿಯರ ಬರವಣಿಗೆಯಲ್ಲಿ, ಕಥಾವಸ್ತುವಿನ ಆಯ್ಕೆಯಲ್ಲಿ ಸಂವೇದನೆಗಳಲ್ಲಿ ಆಗಿರುವ ಸ್ಥಿತ್ಯಂತರಗಳ ಪ್ರತೀಕವಾಗಿದೆ. ಸರ್ವಸಾಧಾರಣವಾಗಿ ಕಂಡುಬರುವ ವಸ್ತುಗಳಾದ ಕುಟುಂಬದಲ್ಲಿ ಸ್ತ್ರೀ, ಸ್ತ್ರೀ-ಪುರುಷ ಸಂಬಂಧಗಳ ಅನ್ವೇಷಣೆ, ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀಯರ ಶೋಷಣೆ ಇವಿಷ್ಟಕ್ಕೆ ಸೀಮಿತವಾಗದೆ, ಭಾವನಾವಶತೆಯ ವಲಯದಾಚೆಗೆ, ಕುಟುಂಬದ ಪರಿಧಿಯಾಚೆಗೆ ಹೋಗಿ ಆಧುನಿಕೀಕರಣ, ಜಾಗತೀಕರಣ, ನಗರೀಕರಣ, ನಕ್ಸಲ್‌ವಾದಗಳ ಪರಣಾಮಗಳನ್ನು ಕೌಟುಂಬಿಕ ಆವರಣದಲ್ಲಿ ಚಿತ್ರಿಸುತ್ತಾ ಗ್ರಾಮೀಣ ಜೀವನದಲ್ಲಿ ಅನಾವರಣಗೊಳಿಸುತ್ತಾರೆ. ಇಲ್ಲಿ ವ್ಯಕ್ತವಾಗುವ ಪರಿಸರಪ್ರಜ್ಞೆ, ಸಮಯಪ್ರಜ್ಞೆ ಅಲ್ಲಿಯ ಸಾಮಾಜಿಕ ಆರ್ಥಿಕ ರಾಜಕೀಯ ಪಲ್ಲಟಗಳನ್ನು ಅಂತರ್ಗತಗೊಳಿಸಿಕೊಂಡಿದೆ. ಲೇಖಕಿ ಪ್ರಾದೇಶಿಕತೆ ಮತ್ತು ಬದುಕಿನ ವಿನ್ಯಾಸವನ್ನು ಒಳಗೊಂಡು ವರ್ತಮಾನಕ್ಕೆ ಪ್ರತಿಕ್ರಿಯಿಸುತ್ತಾರೆ. ಗ್ರಾಮೀಣ ಬದುಕು ಇಲ್ಲಿ ಕಂಡರೂ ಪರಂಪರಾಗತ ಗ್ರಾಮೀಣ ಬದುಕನ್ನು ಚಿತ್ರಿಸುವುದಕ್ಕಿಂತ ಅದರಲ್ಲಿ ಆಗುತ್ತಿರುವ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಪಲ್ಲಟಗಳ ಕಡೆ ವಿಶೇಷವಾಗಿ ಗಮನ ಹರಿಸುತ್ತಾರೆ. ಲೇಖಕಿ ಈ ಪಲ್ಲಟಗಳ ಜಟಿಲತೆಯನ್ನು, ಸಂಕೀರ್ಣತೆಯನ್ನು, ಅನಿವಾರ್ಯತೆಯನ್ನು ಯಾವ ಪರ - ವಿರೋಧ ಧೋರಣೆಗಳಿಲ್ಲದೆ ತಣ್ಣಗೆ ಕಟ್ಟಿಕೊಡುತ್ತಾರೆ. ಇದು ಕಥಾಸಂಕಲನದ ವೈಶಿಷ್ಟ್ಯ ಮತ್ತು ಲೇಖಕಿಯ ಶಕ್ತಿಯೂ ಹೌದು. ಸಾಮಾಜಿಕ ಸೂಕ್ಷ್ಮಗಳನ್ನು, ಸಮಾಜದಲ್ಲಿನ ಆಂತರಿಕ ತವಕ, ತಲ್ಲಣಗಳನ್ನು ಬೌದ್ಧಿಕ ವಿಶ್ಲೇಷಣೆ ಮತ್ತು ಅನುಭವನಿಷ್ಠ ಹೊಸ ಗ್ರಹಿಕೆಗಳೊಂದಿಗೆ ನೋಡಲು ಯತ್ನಿಸುವ ಲೇಖಕಿಯ ಪ್ರಯತ್ನ ಬರವಣಿಗೆಗೆ ಒಂದು ಹೊಸ ಆಯಾಮವನ್ನೊದಗಿಸಿದೆ.

ನಾಗರತ್ನ ಗ್ಯಾಲ್
ಫ್ಲಾಟ್ ಸಂ. ೧, ಸಂಚಯಿನಿ ರಿಟ್ರೀಟ್, ಡಾ|| ಅಮ್ಮೆ ರಸ್ತೆ, ಮಾಳಿ ಕಾಲೋನಿ
ಏಕಾಳ, ಕೊಲ್ಹಾಪುರ - ೪೧೬೦೦೮



# ಬಂಡಾಯ

ಕಲ್ಪನೆಯ ಮೂಸೆಯಲ್ಲಿ ಜಿನುಜಿನುಗಿ
ಭಾವ ಬಿಂಬಿಸಿ ಬರುವ ಗದ್ಯ
ಕಟ್ಟೆಚ್ಚರದಲಿ ಕಾಯಬೇಕು
ಎಲ್ಲ ಪ್ರತಿಕೂಲ ಭಯಗಳ ವಿರುದ್ಧ
ಇಲ್ಲದಿರೆ ಅಮರತೆಯಲ್ಲಿ ಬತ್ತಿಹೋಗುವ ಅಪಾಯ

ಜ್ವಲಿಸುವ ಮಿಂಚು
ನೆನಪುಗಳ ಛಾಯಾಚಿತ್ರ –
ಬೆವರ ಹನಿಗಳು ಪ್ರತಿಫಲಿಸುವ
ದುಃಖ ನೋವುಗಳ ಪ್ರತಿಬಿಂಬ

ಅಪಾರ್ಥ ತರುವ ಮುಗುಳು ನಗೆ
ನೆಲೆ ತಪ್ಪಿ ಬಂದ ಕಣ್ಣೀರ ಹನಿ
ಸಂತಸದ ಕೇಕೆ, ಅಬ್ಬರ –
ನೋವಿನ ಆರ್ತನಾದಕ್ಕೆ ಹಾಕಿದ ಚಂಚಲ
ಮುಖವಾಡಗಳು

ಯಜ್ಞಪಶು, ಹುತಾತ್ಮ, ನಾಯಕ ಶ್ರೇಷ್ಠ
ಧೂರ್ತ, ಶ್ರವಣ ಗೋಚರ
ವಿವಿಧ
ರಕ್ತ ಸಿಕ್ತ ಬಟ್ಟೆಯಲ್ಲಿ
ಸುತ್ತಿ
ಚರಿತ್ರೆಯ ಗರ್ಭದೊಳಗಿಳಿಸುವ ಪ್ರಯತ್ನ

ಪ್ರತಿಮಾ ರಾಘವ
ನಂ.[illegible], 'ಡಿ' ಬ್ಲಾಕ್, ಸಹಕಾರ ನಗರ, ಬೆಂಗಳೂರು - ೫೬೦ ೦೯೨



**ಜಾ**ಗತಿಕ ಕಾರ್ಮಿಕ ಹೋರಾಟಗಳ ಚರಿತ್ರೆಯ ಪರಿಚಯ ಇರುವವರಿಗೆ ಅಮೆರಿಕಾದ ಶಿಕಾಗೊ ಚಿರಪರಿಚಿತ ನಗರ. ೧೮೮೬ರ ಮೇ ತಿಂಗಳಿನ ದಿನಗಳಲ್ಲಿ ಈ ನಗರದ ಕಾರ್ಮಿಕರು ನಡೆಸಿದ ಹೋರಾಟ ಪ್ರಪಂಚದ ಎಲ್ಲ ದೇಶಗಳ ಕಾರ್ಮಿಕರಿಗೆ ನವ ಚೈತನ್ಯವನ್ನು ನೀಡುತ್ತಾ ಬಂದಿದೆ. ಸುಮಾರು ನೂರ ಮುವತ್ಮೂರು ವರ್ಷಗಳ ಹಿಂದೆ ಈ ನಗರದಲ್ಲಿ ನಡೆದ ಹೋರಾಟ ಇಂದಿಗೂ ನೆನಪಿನಿಂದ ಮಾಸದೇ ತನ್ನ ಅಮರ ಗೀತೆಯನ್ನು ಹಾಡುತ್ತ ಸಾಗಿದೆ. ಇದೊಂದು ಸೋಜಿಗವೇ ಸರಿ. ನಾನು ಅಮೆರಿಕಾಕ್ಕೆ ಬಂದ ಕೆಲವು ವಾರಗಳಲ್ಲೇ ಶಿಕಾಗೊ ನಗರದಲ್ಲಿ ವಾಸಿಸುತ್ತಿರುವ ನನ್ನ ತಂಗಿಯ ಮಗಳು ಸೀಮಳ ಮನೆಗೆ ಹೋದೆ. ಅವಳ ಗಂಡ ಸಂಜೀವ್ ನಮ್ಮನ್ನು ವಿಮಾನ ನಿಲ್ದಾಣದಿಂದ ಅವರ ಮನೆಗೆ ಕರೆದೊಯ್ಯುತ್ತಿದ್ದಾಗಲೆ ಹೇ ಮಾರುಕಟ್ಟೆಯ ಚೌಕ ಅವರ ಮನೆಯಿಂದ ಎಷ್ಟು ದೂರವಿದೆಯೆಂದು ವಿಚಾರಿಸಿದೆ. ಅವರಿಗೆ ಈ ಬಗ್ಗೆ ಮಾಹಿತಿ ಯಿರಲಿಲ್ಲ. ಈ ಅವಕಾಶ ಉಪಯೋಗಿಸಿಕೊಂಡು ಹೇ ಮಾರುಕಟ್ಟೆ ಚೌಕದ ಇತಿಹಾಸದ ಬಗ್ಗೆ ಸಣ್ಣ ಭಾಷಣ ಮಾಡಿದೆ. ಇಷ್ಟು ಕೇಳಿದ ಮೇಲೆ ಸಂಜೀವ ನನ್ನನ್ನು ಹೇ ಮಾರುಕಟ್ಟೆ ಚೌಕಕ್ಕೆ ಕರೆದುಕೊಂಡು ಹೋಗುತ್ತೇನೆಂದು ಭರವಸೆ ನೀಡಿದರು. ಮತ್ತೆರಡು ದಿನಗಳಲ್ಲಿ ನನಗೆ ಯಾವ ಸುಳಿವನ್ನೂ ನೀಡದೆ ಶಿಕಾಗೊ ನಗರದ ಗಗನಚುಂಬಿ ಕಟ್ಟಡಗಳ

ಅಮೆರಿಕಾದ ಬಾಸ್ಟನ್‌ನಿಂದ ಪತ್ರ -

# ೧೮೮೬ರ ಅಮೆರಿಕಾ, ಶಿಕಾಗೊ ನಗರ ಮತ್ತು ಮೇ ದಿನಗಳು

ಜಾಗತಿಕ ಕಾರ್ಮಿಕ ಹೋರಾಟಗಳ ಚರಿತ್ರೆಯ ಪರಿಚಯ ಇರುವವರಿಗೆ ಅಮೆರಿಕಾದ ಶಿಕಾಗೊ ಚಿರಪರಿಚಿತ ನಗರ. ೧೮೮೬ರ ಮೇ ತಿಂಗಳಿನ ದಿನಗಳಲ್ಲಿ ಈ ನಗರದ ಕಾರ್ಮಿಕರು ನಡೆಸಿದ ಹೋರಾಟ ಪ್ರಪಂಚದ ಎಲ್ಲ ದೇಶಗಳ ಕಾರ್ಮಿಕರಿಗೆ ನವ ಚೈತನ್ಯವನ್ನು ನೀಡುತ್ತಾ ಬಂದಿದೆ. ಸುಮಾರು ನೂರ ಮುವತ್ಮೂರು ವರ್ಷಗಳ ಹಿಂದೆ ಈ ನಗರದಲ್ಲಿ ನಡೆದ ಹೋರಾಟ ಇಂದಿಗೂ ನೆನಪಿನಿಂದ ಮಾಸದೇ ತನ್ನ ಅಮರ ಗೀತೆಯನ್ನು ಹಾಡುತ್ತ ಸಾಗಿದೆ. ಇದೊಂದು ಸೋಜಿಗವೇ ಸರಿ.

ಮಧ್ಯೆ ತೂರಿ ತೂರಿ ಹೇ ಮಾರುಕಟ್ಟೆ ಚೌಕದ ಮುಂದೆ ನನ್ನನ್ನು ಇಳಿಸಿದರು. ಅವಾಕ್ಕಾದ ನನ್ನನ್ನು ಅಲ್ಲಿದ್ದ ಸ್ಮಾರಕದ ಮುಂದೆ ನಿಲ್ಲಿಸಿ ಅನೇಕ ಛಾಯಾಚಿತ್ರಗಳನ್ನು ತೆಗೆದರು. ಈ ಸ್ಮಾರಕದ ಸ್ಥಳದಲ್ಲೇ ೧೮೮೬ರ ಮೇ ತಿಂಗಳ ನಾಲ್ಕರಂದು ನಡೆದ ಕಾರ್ಮಿಕರ ಶೋಕಸಭೆ, ನಾಯಕರ ಭಾಷಣ, ನೊಂದ ಬೆಂದ ಕಾರ್ಮಿಕರ ಉದ್ವೇಗದ ಉಸಿರು, ಮುನ್ನುಗ್ಗುತ್ತಿದ್ದ ಪೊಲೀಸ್ ಪಡೆ, ಎಲ್ಲಿಂದಲೋ ಹಾರಿ ಬಂದ ಡೈನಾಮೈಟ್ ಬಾಂಬ್ ಸ್ಫೋಟ, ಪೊಲೀಸರ ಗುಂಡಿನ ದಾಳಿ, ಅಂಧಕಾರದಲ್ಲಿ ಮೃತರಾದ ನಾಲ್ಕು ಕಾರ್ಮಿಕರ ಮತ್ತು ಏಳು ಪೊಲೀಸರ ದೇಹ, ದಿಕ್ಕಾಪಾಲಾಗಿ ಓಡುತ್ತಿದ್ದ ಜನರು, ಬಿದ್ದ ಗಾಯಾಳುಗಳ ನಾಯಕರ ಬಂಧನ, ಅವರಿಗಾದ ಗಲ್ಲು ಶಿಕ್ಷೆ, ಹೀಗೆ ಮೇ ದಿನಗಳ ಘಟನಾವಳಿಗಳು ನನ್ನ ಮನಃಪಟಲದಲ್ಲಿ ಹಾಯ್ದುಹೋದವು. ಹೇ ಮಾರುಕಟ್ಟೆ ಚೌಕದ ಬಳಿ ನಾನು ಕಳೆದ ನಿಮಿಷಗಳು ನನ್ನಲ್ಲಿ ಒಂದು ರೀತಿಯ ಧನ್ಯತೆಯ ಭಾವನೆಗಳನ್ನು ಹುಟ್ಟಿಸಿದ್ದವು. ನನ್ನನ್ನು ಅಲ್ಲಿಗೆ ಕರೆದೊಯ್ದ ಸಂಜೀವಗೆ ನನ್ನ ನಮನ.

**ಬೆಂಕಿ - ಬಿರುಗಾಳಿಯ ನಗರ**

ವಿಶಾಲವಾದ ಮಿಷಿಗನ್ ಸರೋವರದ ತೀರದಲ್ಲಿರುವ ಶಿಕಾಗೊ ಶತಮಾನದ ನಗರವೆಂಬ ಖ್ಯಾತಿ ಪಡೆದಿದೆ. ಇದಕ್ಕೆ ಕೇವಲ ಮುನ್ನೂರು ವರ್ಷಗಳ ಇತಿಹಾಸವಿದೆ, ಅಷ್ಟೆ. ಈ ನಗರಕ್ಕೆ ಹುಟ್ಟಿನಿಂದಲೇ ಬೆಂಕಿಯೊಡನೆ ಸೆಣಸಾಟವಾಡುವುದು ಮಾಮೂಲಿನ ಸಂಗತಿಯಾಗಿಬಿಟ್ಟಿದೆ. ಅನೇಕ ಬಾರಿ ಬೆಂಕಿ ಆಕಸ್ಮಿಕಕ್ಕೊಳಗಾಗಿ ಆ ಬೂದಿಯಿಂದಲೇ ಫಿನಿಕ್ಸ್‌ನಂತೆ ಮತ್ತೆ ಮತ್ತೆ ಹುಟ್ಟಿ ಬರುತ್ತ ಶಿಕಾಗೊ ಸುಂದರ ನಗರವಾಗಿ ಬೆಳೆಯುತ್ತಿದೆ. ಇದನ್ನು ರಚನಾತ್ಮಕ ವಿನಾಶವೆಂದು ಕರೆಯಬಹುದೇನೊ! ೧೮೭೧ರಲ್ಲಿ ಸಂಭವಿಸಿದ ಭೀಕರ ಅಗ್ನಿ ಆಕಸ್ಮಿಕ ಹದಿನೆಂಟು ಸಾವಿರ ಮನೆಗಳನ್ನು ನೆಲಸಮ ಮಾಡಿ ಮುನ್ನೂರು ಜೀವಗಳನ್ನು ಸುಟ್ಟು ಭಸ್ಮ ಮಾಡಿತ್ತು. ನಗರದ ಮೂರು ಲಕ್ಷ ಜನಸಂಖ್ಯೆಯಲ್ಲಿ ಒಂದು ಲಕ್ಷ ಜನ ನಿರ್ವಸಿತರಾದರು. ಈಗಲೂ ಅಲ್ಲಿ ಇಲ್ಲಿ ಬೆಂಕಿಯ ಆಕಸ್ಮಿಕಗಳು ಸಂಭವಿಸುತ್ತಿರುತ್ತವೆ. ಅಗ್ನಿಶಾಮಕ ದಳದ ದೊಡ್ಡ ಪಡೆಯೇ ಇದೆ. ಶಿಕಾಗೊ ಕೇವಲ ಬೆಂಕಿಯ ನಗರ ಮಾತ್ರವಲ್ಲ, ಬಿರುಗಾಳಿಯ ನಗರವೆಂದೂ ಹೆಸರು ಪಡೆದಿದೆ. ಆದರೆ ೧೮೮೬ರ ಮೇ ದಿನಗಳಲ್ಲಿ ಶಿಕಾಗೊನಲ್ಲಿ ಭುಗಿಲೆದ್ದ ಕಾರ್ಮಿಕರ ಹೋರಾಟದ ಜ್ವಾಲೆ ಮತ್ತು ಆ ಮೂಲಕ ಪ್ರಪಂಚದಾದ್ಯಂತ ಬೀಸಿದ ಬಿರುಗಾಳಿಯದು ಇನ್ನೊಂದು ರೋಮಾಂಚಕಾರಿ ಕಥೆ.

**ಅಮೆರಿಕಾ - ಭರವಸೆಯ ಹೊಸ ಬೀಡು!**

ಅಮೆರಿಕಾ ಅತ್ಯಂತ ವಿಶಾಲವಾದ ದೇಶ. ಅಪಾರ ಪ್ರಕೃತಿ ಸಂಪನ್ಮೂಲಗಳನ್ನು ಹೊಂದಿದ ದೇಶ. ಹೀಗಾಗಿ ನಿರ್ವಿಘ್ನವಾಗಿ ಸಾಗಿದ ಕೃಷಿ ಮತ್ತು ಕೈಗಾರಿಕೀಕರಣ ಹತ್ತೊಂಬತ್ತನೆ ಶತಮಾನದ ಕೊನೆಯ ಭಾಗದಲ್ಲಿ ಈ ದೇಶವನ್ನು ಒಂದು ಪ್ರಬಲ ಬಂಡವಾಳಶಾಹಿ ರಾಷ್ಟ್ರವನ್ನಾಗಿ ರೂಪಿಸಿತ್ತು. ಮಾಲಿಕರ ಲಾಭದ ದಾಹ ಹೆಚ್ಚುತ್ತಿದ್ದಂತೆಯೆ ಕಾರ್ಮಿಕರ ಶೋಷಣೆಯೂ ತೀವ್ರಗೊಂಡಿತ್ತು. ಕಾರ್ಮಿಕರಲ್ಲಿ ಅಸಮಾಧಾನ ಮತ್ತು ಸಿಟ್ಟು ಹೊಗೆಯಾಡುತ್ತಿತ್ತು. ಅಮೆರಿಕಾದ ಕಾರ್ಮಿಕರ ಸಾಮಾಜಿಕ ಹಿನ್ನೆಲೆಯೂ ವರ್ಣಮಯವಾದುದೆಂದೇ ಹೇಳಬಹುದು. ಹೊಸ ಭರವಸೆಯ ಬೀಡೆಂದು ಕರೆಯಲ್ಪಟ್ಟ ಅಮೆರಿಕಾ ಯೂರೋಪ್‌ನ ವಿವಿಧ ರಾಷ್ಟ್ರಗಳಿಂದ, ಆಫ್ರಿಕಾದ ರಾಷ್ಟ್ರಗಳಿಂದ ವಲಸೆ ಬಂದ ಜನರನ್ನು ಕೈ ಬೀಸಿ ಕರೆದಿತ್ತು. ವಲಸೆ ಬಂದ

**ಮುರಳೀಧರ**

ನೆಲೆಯೂರಿದ್ದ ಜನರಲ್ಲಿ ಹೆಚ್ಚಾಗಿ ಕುಶಲ ಕರ್ಮಿಗಳಿದ್ದು, ಕೈಗಾರಿಕೀಕರಣದೊಂದಿಗೆ ವೃತ್ತಿನಾಶ ಹೊಂದಿ ಕಾರ್ಮಿಕರಾಗಿ ಕಾರ್ಖಾನೆಗಳನ್ನು ಸೇರಿದವರೇ ಹೆಚ್ಚು. ಇವರ ಜೊತೆಗೆ ಜರ್ಮನಿಯ ಬಿಸ್‌ಮಾರ್ಕ್‌ನ ಆಡಳಿತವನ್ನು ಎದುರಿಸಿ ಅಲ್ಲಿಂದ ತಪ್ಪಿಸಿಕೊಂಡು ಓಡಿ ಬಂದಿದ್ದ ಕಾರ್ಮಿಕರು, ಬ್ರಿಟನ್ ವಿರುದ್ಧ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಕೊಂಡು ನಂತರ ಅಮೆರಿಕಾಕ್ಕೆ ಬಂದಿದ್ದ ಐರ್ಲೆಂಡ್‌ನ ಕಾರ್ಮಿಕರು, ನೆಪೋಲಿಯನ್‌ನ ರಾಜ್ಯಾಡಳಿತ ವಿರೋಧಿಸಿ ಬಂದಿದ್ದ ಫ್ರೆಂಚ್ ಕಾರ್ಮಿಕರು ಅಮೆರಿಕಾದ ಕಾರ್ಮಿಕ ಚಳುವಳಿಗೆ ಹೊಸ ಆಯಾಮವನ್ನು ನೀಡಿದ್ದರು. ಈ ಕಾರಣಕ್ಕಾಗಿಯೆ ಆ ಸಂದರ್ಭದಲ್ಲಿ ಅಲ್ಲಿನ ದೈನಿಕ ಪತ್ರಿಕೆ 'ಶಿಕಾಗೊ ಡೈಲಿ ನ್ಯೂಸ್' ಹೀಗೆ ವಲಸೆ ಬಂದಿರುವ ವಿದೇಶಿಯರಿಲ್ಲದಿದ್ದರೆ ಸಮಾಜವಾದವು ಅಮೆರಿಕಾದಲ್ಲಿ ವಿಧಿ ವಿರೋಧ, ಅದರಲ್ಲೂ ಶಿಕಾಗೊನಲ್ಲಿ ಅಸ್ತಿತ್ವಕ್ಕೆ ಬರುವುದು ಅಸಂಭವ ಎಂದು ಪ್ರಲಾಪಿಸಿತ್ತು.

**ಶಿಕಾಗೊ - ಕಾರ್ಮಿಕ ಚಳುವಳಿಯ ಕೇಂದ್ರ**

ಅನೇಕ ಕೈಗಾರಿಕೆಗಳನ್ನು ಹೊಂದಿದ್ದ ಶಿಕಾಗೊ ನಗರ ಕಾರ್ಮಿಕ ಚಳುವಳಿಯ ಪ್ರಮುಖ ಕೇಂದ್ರವಾಗಿತ್ತು. ಸುಮಾರು ಒಂದು ಲಕ್ಷ ಕಾರ್ಮಿಕರು ಸಂಘಗಳಲ್ಲಿ ಸದಸ್ಯರಾಗಿದ್ದರು. ೧೮೮೪ - ೮೫ರ ಅವಧಿಯಲ್ಲಿ ಅನೇಕ ಹೋರಾಟಗಳನ್ನು ನಡೆಸಿದ್ದರು. ಈ ವೇಳೆಗಾಗಲೇ ಮಾಲಿಕರು ಹೊಸ ಉತ್ಪಾದನಾ ಯಂತ್ರಗಳನ್ನಳವಡಿಸಿ ಹೊಸ ಉತ್ಪಾದನಾ ವ್ಯವಸ್ಥೆಯನ್ನು ಏರ್ಪಡಿಸಿಕೊಂಡು, ಕಾರ್ಮಿಕ ಕುಶಲತೆಯ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಿಕೊಂಡಿದ್ದರು. ಆದರೆ ದೀರ್ಘಾವಧಿ ಕೆಲಸದ ವೇಳೆಯೇನೂ ಕಡಿಮೆಯಾಗಿರಲಿಲ್ಲ. ದಿನಕ್ಕೆ ಹತ್ತು - ಹನ್ನೆರಡು ಗಂಟೆಯ ದುಡಿಮೆ ಸಾಮಾನ್ಯವಾಗಿತ್ತು. ಕಾರ್ಮಿಕ ಸಂಘಟನೆಯಿಲ್ಲದ ಕಾರ್ಖಾನೆಗಳಲ್ಲಿ ಸುಮಾರು ಹದಿನಾರು ಗಂಟೆ ಅವಧಿಯ ದುಡಿಮೆ ಜಾರಿಯಲ್ಲಿತ್ತು. ತಂತ್ರಜ್ಞಾನದ ಅಳವಡಿಕೆಯಿಂದಾಗಿ ಬರುತ್ತಿದ್ದ ಎಲ್ಲ ಲಾಭವೂ ಮಾಲಿಕರ ಪಾಲು. ದುಡಿಯುವ ಜನರ ಪಾಲಿಗೆ ಮಾತ್ರ ಕೊನೆಯಿಲ್ಲದ ಬಾಳಿನ ಗೋಳು. ಅಂದಿನ ದಿನಗಳಲ್ಲಿ, 'ಫೆಡರೇಶನ್ ಆಫ್ ಆರ್ಗನೈಸ್ಡ್ ಟ್ರೇಡ್ಸ್ ಅಂಡ್ ಲೇಬರ್ ಯೂನಿಯನ್', ಅಮೆರಿಕಾದ ಕಾರ್ಮಿಕ ಸಂಘಗಳ ಒಕ್ಕೂಟವಾಗಿತ್ತು. ೧೮೮೪ರ ಅಕ್ಟೋಬರ್‌ನಲ್ಲಿ ನಡೆದ ಫೆಡರೇಶನ್‌ನ ಸಭೆಯಲ್ಲಿ ೧೮೮೬ರ ಮೇ ೧ರಿಂದ ದಿನಕ್ಕೆ ಎಂಟು ಗಂಟೆಗಳ ದುಡಿಮೆ ಜಾರಿಗೊಳ್ಳಬೇಕು, ಇಲ್ಲವೇ ಅಂದಿನಿಂದ ಮುಷ್ಕರ ಹೂಡಬೇಕೆಂದು ನಿರ್ಣಯಿಸಲಾಗಿತ್ತು.

**ಎಂಟು ಗಂಟೆಯ ದುಡಿಮೆಯ ಬೇಡಿಕೆಯ ಚರಿತ್ರೆ**

ಎಂಟು ಗಂಟೆ ದುಡಿಮೆಯ ಬೇಡಿಕೆ ಅಮೆರಿಕಾದ ಕಾರ್ಮಿಕರು ೧೮೮೪ರಲ್ಲಿ ಎತ್ತಿದ್ದರೂ, ಇದರ ಇತಿಹಾಸ ಅದಕ್ಕೂ ಹಿಂದಿನದು. ೧೮೪೦ರಲ್ಲಿ ನ್ಯೂಜಿಲ್ಯಾಂಡ್ ದೇಶದಲ್ಲಿ ಸಾಮಾನ್ಯ ಬಡಗಿಯಾಗಿ ಕೆಲಸ ಮಾಡುತ್ತಿದ್ದ ಸ್ಯಾಮುಯೆಲ್ ಪಾರ್ನೆಲ್ ದಿನಕ್ಕೆ ಎಂಟು ಗಂಟೆಗಿಂತ ಹೆಚ್ಚು ಕೆಲಸ ಮಾಡಲು ನಿರಾಕರಿಸಿದ. ಇತರ ಕಾರ್ಮಿಕರೂ ಇವನೊಡನೆ ಸೇರಿ ತಮ್ಮ ನಿರ್ಣಯವನ್ನು ಮಾಲಿಕರಿಗೆ ತಿಳಿಸಿದರು. ೧೮೯೦ರಲ್ಲಿ ತಮ್ಮ ಬೇಡಿಕೆಯ ಸುವರ್ಣ ಜಯಂತಿಯನ್ನು ಆಚರಿಸಿದರು. ೧೮೯೯ರಿಂದ ಪ್ರತಿ ವರ್ಷ ಅಕ್ಟೋಬರ್ ನಾಲ್ಕನೇ ಸೋಮವಾರ ನ್ಯೂಜಿಲ್ಯಾಂಡ್‌ನಲ್ಲಿ ಎಂಟು ಗಂಟೆ ದುಡಿಮೆಯ ಹೋರಾಟದ ನೆನಪಿನ ದಿನವನ್ನಾಚರಿಸಲಾಗುತ್ತಿದೆ. ನಂತರದ ವರ್ಷಗಳಲ್ಲಿ ಆಸ್ಟ್ರೇಲಿಯಾದ ವಿಕ್ಟೋರಿಯ ರಾಜ್ಯದ ಸ್ಟೋನ್ ಮೇಸನ್ಸ್ ಸೊಸೈಟಿಯ ಕಾರ್ಮಿಕರು ಎಂಟು ಗಂಟೆಗಳ ದುಡಿಮೆಯ ಬೇಡಿಕೆಗಾಗಿ ಮುಷ್ಕರ ನಡೆಸಿ, ಯಶಸ್ವಿಯಾಗಿ, ೧೮೫೬ರಲ್ಲಿ ಅದರ ಫಲವನ್ನು ಕಂಡ ಮೊಟ್ಟಮೊದಲಿಗರು. ಅನಂತರ ಆಸ್ಟ್ರೇಲಿಯಾದ ಇತರೆ ರಾಜ್ಯಗಳಾದ ನ್ಯೂ ಸೌತ್‌ವೇಲ್ಸ್ (೧೮೫೬), ಕ್ವೀನ್ಸ್‌ಲ್ಯಾಂಡ್ (೧೮೫೮) ಮತ್ತು ದಕ್ಷಿಣ ಆಸ್ಟ್ರೇಲಿಯ (೧೮೭೩)ಗಳಲ್ಲಿ ಎಂಟು ಗಂಟೆಗಳ ದುಡಿಮೆ ಜಾರಿಯಾಯಿತು. ೮ ಗಂಟೆಗಳ ದುಡಿಮೆ, ೮ ಗಂಟೆಗಳ ಮನರಂಜನೆ ಮತ್ತು ೮ ಗಂಟೆಗಳ ವಿಶ್ರಾಂತಿಯ ಪ್ರತೀಕವಾಗಿ ೮೮೮ ಅಂಕಿಯ ಸ್ಮಾರಕವನ್ನು ಮೆಲ್ಬರ್ನ್‌ನ ವಿಕ್ಟೋರಿಯ ಪೆರೇಡ್‌ನಲ್ಲಿ ಸ್ಥಾಪಿಸಲಾಯಿತು. ಬ್ರಿಟನ್ ಮತ್ತು ಅಮೆರಿಕಾಗಳ ಕಾರ್ಮಿಕರು ಈ ಬೆಳವಣಿಗೆಯಿಂದ ಸ್ಫೂರ್ತಿಗೊಂಡಿದ್ದರು.

**೧೮೮೬ ಮೇ ೧ – ಸಾರ್ವತ್ರಿಕ ಮುಷ್ಕರ**

ಅಮೆರಿಕಾದ ಚರಿತ್ರೆಯಲ್ಲಿ ೧೮೮೬ನ್ನು ಹೋರಾಟಗಳ ವರ್ಷವೆಂದೇ ಕರೆಯಬಹುದು. ಅದು ಸುಮಾರು ಆರು ಲಕ್ಷ ಕಾರ್ಮಿಕರನ್ನೊಳಗೊಂಡಂತೆ ೧೫೦೦ಕ್ಕೂ ಹೆಚ್ಚು ಮುಷ್ಕರಗಳು ಮತ್ತು




ಬೀಗಮುದ್ರೆಗಳನ್ನು ಕಂಡ ವರ್ಷ. ಬಹುತೇಕ ಮುಷ್ಕರಗಳು ಎಂಟು ಗಂಟೆಯ ದುಡಿಮೆಯ ಬೇಡಿಕೆಯನ್ನೊಳಗೊಂಡಿದ್ದವು. ಕೆಲವೇ ಕೆಲವು ಮಾಲಿಕರು ಈ ಬೇಡಿಕೆಗೆ ಒಪ್ಪಿಗೆ ನೀಡಿದ್ದರು. ಈ ಕಾಲಾವಧಿಯ ಇನ್ನೊಂದು ಮಹತ್ತರ ಬೆಳವಣಿಗೆಯೆಂದರೆ ಆಲ್‌ಫ್ರೆಡ್ ನೊಬೆಲ್ ಡೈನಾಮೈಟ್ ಆವಿಷ್ಕರಿಸಿದ್ದು. ಈ ಆವಿಷ್ಕಾರ ಅಂದಿನ ವಾತಾವರಣದಲ್ಲಿ ತೀವ್ರ ಆತಂಕಕ್ಕೆ ಎಡೆಮಾಡಿಕೊಟ್ಟಿತು. 'ಈ ಹೊಸ ವಸ್ತು ಓರ್ವ ಬಡವನನ್ನೂ ಒಂದು ಸೈನ್ಯಕ್ಕೆ ಸಮನಾಗಿಸಿದೆ' ಎಂದು ಸಾಹಿತಿ ಪ್ಲಾಯಿಡ್ ಡೆಲ್ ಉದ್ಗರಿಸಿದ್ದ. ಅರಾಜಕತಾವಾದಿಗಳು ಡೈನಾಮೈಟ್ ತಯಾರಿಸುತ್ತಿದ್ದಾರೆಂದು ಅಮೆರಿಕಾದ ಅನೇಕ ಪತ್ರಿಕೆಗಳು ಆರೋಪಿಸಿದ್ದವು. ೧೮೮೬ರ ಮೇ ೧ರಂದು ಅಮೆರಿಕಾದ ಉದ್ದಗಲಕ್ಕೂ ಎಂಟು ಗಂಟೆಗಳ ದುಡಿಮೆಯ ಅವಧಿಗಾಗಿ ಪ್ರಾರಂಭಿಸಿದ ಈ ಮುಷ್ಕರದಲ್ಲಿ ಸುಮಾರು ಐದು ಲಕ್ಷ ಕಾರ್ಮಿಕರು ಪಾಲ್ಗೊಂಡರು. ಮುಷ್ಕರದ ನಾಯಕರಾದ ಖ್ಯಾತನಾಮದ ಆಲ್ಬರ್ಟ್ ಪಾರ್ಸನ್ ಮತ್ತು ಅವನ ಜೊತೆಗಾರ ಅಗಸ್ಟ್ ಸ್ಪೈಯಿಸ್ ಸಮಾಜವಾದಿಗಳು. ಹಿಂದಿನ ಅನೇಕ ಮುಷ್ಕರಗಳಲ್ಲಿ ಭಾಗವಹಿಸಿದ್ದ ಅನುಭವಿಗಳು. ಬಂಡವಾಳಶಾಹಿ ಕ್ರೌರ್ಯದ ಪರಿಚಯವಿದ್ದವರು. ಅಂತೆಯೇ ಮುಷ್ಕರ ಅತ್ಯಂತ ಶಾಂತಿಯುತವಾಗಿ ಜರುಗಲು ಕಾರಣಕರ್ತರು. ಮೇ ೧ರ ಮುಷ್ಕರ ಯಾವುದೇ ಅಹಿತಕರ ಘಟನೆಯಿಲ್ಲದೆ ಸಾಗಿತ್ತು.

**ಪೊಲೀಸರ ದಾಳಿಗೆ ಸಂಚು - ಹೊಂಚು**

ಶಿಕಾಗೋನ ಮೆಕ್‌ಕಾರ್ಮಿಕ್ ಹಾರ್ವೆಸ್ಟ್ ಮೆಷೀನ್ ಕಂಪನಿಯ ಕಾರ್ಖಾನೆಗೆ ಫೆಬ್ರುವರಿ ೧೮೮೬ರಿಂದ ಬೀಗಮುದ್ರೆ ಹಾಕಲಾಗಿತ್ತು. ಕಂಪನಿಯ ಮಾಲಿಕ ಮೆಕ್‌ಕಾರ್ಮಿಕ್ ಇನ್ನೂ ಯುವಕ. ಆತ ಕಾರ್ಮಿಕ ಸಂಘವನ್ನು ಹತ್ತಿಕ್ಕಲು ಹೊಂಚುಹಾಕಿದ್ದ. ರಾಜಕೀಯ ಒತ್ತಡ ಹೇರಿ ತನಗೆ ಬೇಕಾದ ಪೊಲೀಸ್ ಅಧಿಕಾರಿ ಕ್ಯಾಪ್ಟನ್ ಜಾನ್ ಬ್ರಾನ್‌ಫೀಲ್ಡ್‌ನ್ನು ಶಿಕಾಗೋಗೆ ವರ್ಗಾಯಿಸಿಕೊಂಡ. ಬ್ರಾನ್‌ಫೀಲ್ಡ್‌ಗೆ ೧೮೮೫ರಲ್ಲಿ ಮುಷ್ಕರವನ್ನು ಹತ್ತಿಕ್ಕಿದ್ದ ಅನುಭವವಿತ್ತು. ಈ ಅವಕಾಶವನ್ನು ಉಪಯೋಗಿಸಿಕೊಂಡು ಮೇ ೩ನೇ ತಾರೀಖು ಕಾರ್ಖಾನೆಯ ಮುಂದೆ ಸೇರಿದ್ದ ಮುಷ್ಕರ ನಿರತ ಕಾರ್ಮಿಕರ ಮೇಲೆ ಯಾವ ಪ್ರಚೋದನೆಯೂ ಇಲ್ಲದೆ ಗುಂಡಿನ ದಾಳಿ ನಡೆಸಿದ ಪರಿಣಾಮವಾಗಿ ಇಬ್ಬರು ಅಮಾಯಕ ಕಾರ್ಮಿಕರು ಸ್ಥಳದಲ್ಲೇ ಮೃತರಾದರು. ಈ ಬೆಳವಣಿಗೆಯನ್ನು ಶಿಕಾಗೋನ ಎಲ್ಲ ಕಾರ್ಮಿಕರಿಗೂ ತಿಳಿಸುವ ಸಲುವಾಗಿ ಮತ್ತು ಮೃತ ಕಾರ್ಮಿಕರಿಗೆ ಸಂತಾಪ ಸೂಚಿಸುವ ಸಲುವಾಗಿ ಮೇ ೪ರಂದು ಸಾಯಂಕಾಲ ಹೇ ಮಾರುಕಟ್ಟೆಯ ಚೌಕದಲ್ಲಿ ಸಭೆ ಸೇರಲು ತರಾತುರಿಯಿಂದ ನಿರ್ಧರಿಸಿ, ಕರಪತ್ರವನ್ನು ಹಂಚಲಾಯಿತು. ಅಂದು ಭಾಷಣ ಮಾಡಿದ ಅಗಸ್ಟ್ ಸ್ಪೈಯಿಸ್ ಆಗಲಿ, ಪಾರ್ಸನ್ ಆಗಲಿ ಯಾರೂ ಕೂಡ ಪ್ರಚೋದನಕಾರಿ ಮಾತುಗಳನ್ನು ಆಡಿರಲಿಲ್ಲ. ಈ ನಿಜಾಂಶವನ್ನು ಅಂದಿನ ಸಭೆಯಲ್ಲಿ ಭಾಗವಹಿಸಿದ್ದ ಶಿಕಾಗೋನ ಮೇಯರ್ ಕಾರ್ಟರ್ ಹ್ಯಾರಿಸನ್ ನ್ಯಾಯಾಲಯದ ಮುಂದೆ ತನ್ನ ಹೇಳಿಕೆಯಲ್ಲಿ ಬಹಿರಂಗಪಡಿಸಿದ್ದ. ಪೊಲೀಸ್ ಅಧಿಕಾರಿ ಬ್ರಾನ್‌ಫೀಲ್ಡ್‌ಗೆ ಪೊಲೀಸ್ ಪಡೆಯನ್ನು ಹಿಂತೆಗೆಯಲು ಹೇಳಿದ್ದರು. ಆದರೂ ಬ್ರಾನ್‌ಫೀಲ್ಡ್ ಕಾರ್ಮಿಕರ ಮೇಲೆ ದಾಳಿ ನಡೆಸಲು ಸಜ್ಜು ಮಾಡಿದ್ದ. ತುಂತುರು ಮಳೆ ಆರಂಭವಾಗಿತ್ತು. ಕತ್ತಲು ಆವರಿಸಿ ಕೊನೆಯ ಭಾಷಣಕಾರ ತನ್ನ ಮಾತು ಮುಗಿಸುತ್ತಿದ್ದ. ಎಲ್ಲಿಂದಲೊ ಹಾರಿ ಬಂದ ಒಂದು ಡೈನಮೈಟ್ ಪೊಲೀಸರ ನಡುವೆ ಸಿಡಿದು ಒಬ್ಬ ಪೊಲೀಸ್‌ನನ್ನು ಕೊಂದಿತ್ತು. ನಂತರ ಅಂಧಕಾರದಲ್ಲಿ ಪೊಲೀಸರು ಗೊತ್ತು ಗುರಿಯಿಲ್ಲದೆ ಹಾರಿಸಿದ ಗುಂಡುಗಳಿಂದ ನಾಲ್ವರು ಕಾರ್ಮಿಕರು ಮತ್ತು ಆರು ಪೊಲೀಸರು ಮೃತರಾದರು. ಅಸಂಖ್ಯಾತ ಕಾರ್ಮಿಕರು ಗಾಯಗೊಂಡಿದ್ದರು. ಶಾಂತಿಯುತವಾಗಿ ಕೊನೆಗೊಳ್ಳಬೇಕಿದ್ದ ಕಾರ್ಮಿಕರ ಶೋಕ ಸಭೆ ಐದು ನಿಮಿಷಗಳಲ್ಲಿ ರಕ್ತಮಯವಾಗಿತ್ತು. ಈ ಬಾಂಬ್ ಎಸೆದವರಾರು ಎಂಬುದು ಇಂದಿನವರೆಗೂ ನಿಗೂಢವಾಗಿಯೇ ಉಳಿದಿದೆ. ಆದರೆ ಪೊಲೀಸ್ ಅಧಿಕಾರಿ ಬ್ರಾನ್‌ಫೀಲ್ಡ್‌ನ ಕುಪ್ರಸಿದ್ಧ ವರ್ತನೆಯನ್ನು ಕಂಡಿದ್ದವರು ಈ ಘಟನೆ ಅವನ ಕೈವಾಡವೆಂದೇ ನಿರ್ಧರಿಸಿದ್ದರು. ಕಡೆಗೂ ಡೈನಮೈಟ್ ತನ್ನ ಕೆಲಸವನ್ನು ಮಾಡಿಯೇಬಿಟ್ಟಿತ್ತು!

**ಸಿಡಿದ ಡೈನಮೈಟ್ ಬಾಂಬ್ - ಮಡಿದ ಕಾರ್ಮಿಕರು**

ಭಾಷಣಕಾರರಾಗಲಿ ಅಥವಾ ಅಲ್ಲಿ ಸೇರಿದ್ದ



ಕಾರ್ಮಿಕರಾಗಲಿ ಡೈನಮೈಟ್ ಅಥವಾ ಇತರೆ ಯಾವುದೇ ಆಯುಧಗಳನ್ನು ಹೊಂದಿರಲಿಲ್ಲ. ಮೇ ೪ರಂದು ಹೇ ಮಾರುಕಟ್ಟೆಯ ಚೌಕದಲ್ಲಿ ಅಂದು ನಡೆಯುತ್ತಿದ್ದುದ್ದು ಕೇವಲ ಶೋಕ ಸಭೆಯಷ್ಟೆ. ಯಾರೂ ಪ್ರಚೋದನಕಾರಿ ಭಾಷಣಗಳನ್ನು ಮಾಡಿರಲಿಲ್ಲ. ಆದರೂ ಪೊಲೀಸರು ಎಂಟು ಕಾರ್ಮಿಕ ನಾಯಕರನ್ನು ಬಂಧಿಸಿ, ಅವರ ಮೇಲೆ ಪೊಲೀಸ್ ಅಧಿಕಾರಿಯನ್ನು ಕೊಂದ ಆರೋಪ ಹೊರಿಸಿ ಮೊಕದ್ದಮೆ ಹೂಡಿದರು. ಇವರ ವಿರುದ್ಧ ಯಾವುದೇ ಸಾಕ್ಷಿಗಳಿರಲಿಲ್ಲ. ಆದರೂ 'ಶಿಕಾಗೊ ಡೈಲಿ ನ್ಯೂಸ್' ಪತ್ರಿಕೆ 'ಯಾರು ಬಾಂಬ್ ಎಸೆದರೆಂಬುದು ಮುಖ್ಯವಲ್ಲ. ಯಾರು ಅದನ್ನು ಪ್ರಚೋದಿಸಿದರೆಂಬುದು ಮುಖ್ಯ' ಎಂದು ತಲೆಬರಹದ ಸುದ್ದಿಯನ್ನು ಪ್ರಚಾರಮಾಡಿತು. ಇದು ನ್ಯಾಯಾಲಯದಲ್ಲಿ ಪ್ರಾಸಿಕ್ಯೂಷನ್‌ನ ವಾದವಾಗಿ ರೂಪುಗೊಂಡಿತು. ಅಮೆರಿಕಾದ ಪತ್ರಿಕಾ ಸ್ವಾತಂತ್ರ್ಯಕ್ಕೆ ಇದೊಂದು ನಿದರ್ಶನ! ಕಾರ್ಲ್ ಮಾರ್ಕ್ಸ್‌ರ ಅಳಿಯ ಎಡ್ವರ್ಡ್ ಎವ್‌ಲಿಂಗ್ ಈ ಬಗ್ಗೆ ತನ್ನ ಲೇಖನದಲ್ಲಿ ಆರೋಪಿತರನ್ನೇನಾದರೂ ಗಲ್ಲಿಗೇರಿಸಿದಲ್ಲಿ ಅದು 'ಶಿಕಾಗೊ ಟ್ರಿಬ್ಯೂನ್ ಪತ್ರಿಕೆ' ಮಾಡಿದ ಕೆಲಸವೆಂದು ತಿಳಿಯಬೇಕಾಗುತ್ತದೆಂದು ವ್ಯಾಖ್ಯಾನಿಸಿದ್ದರು. ಅಮೆರಿಕಾದ ನ್ಯಾಯಾಂಗದ ಚರಿತ್ರೆಯಲ್ಲಿ ಇದೊಂದು ಕಳಂಕದ ಪ್ರಕರಣವೆಂದೇ ದಾಖಲಾಗಿದೆ. ನ್ಯಾಯಾಧೀಶ ಜೊಸೆಫ್ ಇ. ಗ್ಯಾರಿ ಅತ್ಯಂತ ತ್ವರಿತಗತಿಯಿಂದ ಈ ಪ್ರಕರಣದ ತನಿಖೆ ನಡೆಸಿ ನ್ಯಾಯದ ಮುಖಕ್ಕೆ ಮಸಿ ಬಳಿದಿದ್ದರು. ಶಿಕಾಗೋನ ಮೇಯರ್ ಕಾರ್ಟರ್ ಹ್ಯಾರಿಸನ್ ನ್ಯಾಯಾಲಯದಲ್ಲಿ ಕೊಟ್ಟ ಹೇಳಿಕೆಯಲ್ಲಿ ತಾವು ಸಭೆಯಲ್ಲಿ ಇದ್ದುದಾಗಿಯೂ ಮತ್ತು ಆರೋಪಿಗಳು ಯಾವ ಅಪರಾಧವನ್ನೂ ಮಾಡಿಲ್ಲವೆಂದೂ ಸ್ಪಷ್ಟಪಡಿಸಿದ್ದರು. ಇವೆಲ್ಲವನ್ನೂ ತಳ್ಳಿಹಾಕಿ ನ್ಯಾಯಾಲಯ ಆಲ್ಬರ್ಟ್ ಪಾರ್ಸನ್, ಅಗಸ್ಟ್ ಸ್ಪೆಯಿಸ್, ಅಡಾಲ್ಫ್ ಫಿಶರ್, ಜಾರ್ಜ್ ಎಂಗೆಲ್, ಲೂಯಿಸ್ ಲಿಂಗ್, ಮೈಕಲ್ ಶಾಚ್ ಮತ್ತು ಸ್ಯಾಮುವೆಲ್ ಫೀಲ್ಡೆನ್ – ಈ ಏಳು ಜನರಿಗೆ ಗಲ್ಲು ಶಿಕ್ಷೆ ವಿಧಿಸಿತು. ಇನ್ನೊಬ್ಬ ಆರೋಪಿ ಆಸ್ಕರ್ ನೀಬೆಗೆ ಹದಿನೈದು ವರ್ಷ ಕಾರಾಗೃಹ ಶಿಕ್ಷೆ ನೀಡಿತು. ೧೮೮೭ರಲ್ಲಿ ಇಲಿನಾಯ್ ರಾಜ್ಯದ ಸರ್ವೋಚ್ಚ ನ್ಯಾಯಾಲಯ ಮತ್ತು ಅಮೆರಿಕಾದ ಸರ್ವೋಚ್ಚ ನ್ಯಾಯಾಲಯ ಈ ತೀರ್ಪನ್ನು ಎತ್ತಿಹಿಡಿದು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ತನ್ನ ಪಾತ್ರವನ್ನು ಸಮರ್ಥಿಸಿಕೊಂಡವು. ಅಮೆರಿಕಾದ ಕಾರ್ಯಾಂಗ ಮತ್ತು ನ್ಯಾಯಾಂಗ ಕೈ ಜೋಡಿಸಿ ಹೇ ಮಾರುಕಟ್ಟೆ ಚೌಕದ ದುರಂತಕ್ಕೆ ಕಾರಣಕರ್ತರಾಗಿದ್ದರು. ಪತ್ರಿಕೆಗಳೂ ಇವರ ಬೆಂಬಲಕ್ಕೆ ನಿಂತವು.

### ಹುತಾತ್ಮರಾದ ಕಾರ್ಮಿಕ ನಾಯಕರು

ನ್ಯಾಯಾಲಯದ ತೀರ್ಪು ಹೊರಬೀಳುತ್ತಿದ್ದಂತೆಯೇ ಅನೇಕ ದೇಶಗಳ ಮತ್ತು ಅಮೆರಿಕಾದ ಕಾರ್ಮಿಕರಿಂದ ಪ್ರತಿಭಟನೆಗಳು ಜರುಗಿದವು. ಆದರೆ ಬಂಡವಾಳಶಾಹಿ ವ್ಯವಸ್ಥೆ ತನ್ನ ಹಿಡಿತವನ್ನು ಸಡಿಲಗೊಳಿಸಲು ತಯಾರಿರಲಿಲ್ಲ. ನ್ಯಾಯಾಧೀಶ ಜೊಸೆಫ್ ಗ್ಯಾರಿ ಕೂಡ ಎಲ್ಲ ತಪ್ಪಿತಸ್ಥರಿಗೂ ಕ್ಷಮಾದಾನ ಮಾಡುವಂತೆ ಇಲಿನಾಯ್ ರಾಜ್ಯದ ರಾಜ್ಯಪಾಲರಿಗೆ ವಿನಂತಿಸಿಕೊಂಡಿದ್ದರು. ಅಂತಿಮವಾಗಿ ಮೈಕಲ್ ಶ್ವಾಬ್ ಮತ್ತು ಸ್ಯಾಮುವೆಲ್ ಫೀಲ್ಡೆನ್‌ಗೆ ಗಲ್ಲು ಶಿಕ್ಷೆಯ ಬದಲು ಅಜೀವ ಕಾರಾಗೃಹ ಶಿಕ್ಷೆಯನ್ನು ವಿಧಿಸಲಾಯಿತು. ನವಂಬರ್ ೧೧, ೧೮೮೭ರಂದು ಅಗಸ್ಟ್ ಸ್ಪೆಯಿಸ್, ಆಲ್ಬರ್ಟ್ ಪಾರ್ಸನ್, ಅಡಾಲ್ಫ್ ಫಿಶರ್, ಜಾರ್ಜ್ ಎಂಗೆಲ್ ಮತ್ತು ಲೂಯಿಸ್ ಲಿಂಗ್‌ರನ್ನು ಗಲ್ಲಿಗೇರಿಸಲು ಆಜ್ಞೆ ಹೊರಡಿಸಲಾಯಿತು. ಒಂದು ದಿನ ಮುಂಚೆಯೇ ಲೂಯಿಸ್ ಲಿಂಗ್ ಸಿಗಾರ್‌ನಲ್ಲಿ ಡೈನಾಮೈಟ್ ಇದ್ದ ಸಿಗಾರನ್ನು ಬಾಯಲ್ಲಿಟ್ಟು ಹತ್ತಿಸಿಕೊಂಡು ಸಾವನ್ನಪ್ಪಿದ. ಮಾರನೆ ದಿನ ಉಳಿದ ನಾಲ್ವರು ಶಾಂತಚಿತ್ತರಾಗಿ ನೇಣುಗಂಬ ಏರಿದರು. ಗಲ್ಲಿಗೇರುವ ಮುನ್ನ ಅವರು ಆಡಿದ ಮಾತುಗಳು ಅವಿಸ್ಮರಣೀಯ: ''ಇಂದು ನೀವು ಅದುಮಿಹಾಕುತ್ತಿರುವ ನಮ್ಮ ದನಿಗಳಿಗಿಂತ ಮುಂದಿನ ನಮ್ಮ ಮೌನ ಹೆಚ್ಚು ಶಕ್ತಿಶಾಲಿಯಾಗಿರುತ್ತದೆ'' ಎಂದು ಬಂಡವಾಳಶಾಹಿಗಳಿಗೆ ಎಚ್ಚರ ನೀಡಿ, ಅಂತರರಾಷ್ಟ್ರೀಯ ಕ್ರಾಂತಿಗೀತೆಯನ್ನು ತಮ್ಮ ಇತರ ಸಂಗಾತಿಗಳೊಂದಿಗೆ ಹಾಡುತ್ತ ನೇಣುಗಂಬವೇರಿದರು. ವಾಲ್ಡ್‌ಹೈಂನ ಫಾರೆಸ್ಟ್ ಹೋಂ ಮಸಣದತ್ತ ಹೊರಟ ಅವರ ಶವಯಾತ್ರೆಯಲ್ಲಿ ಎರಡು ಲಕ್ಷ ಜನ ಪಾಲ್ಗೊಂಡಿದ್ದರು. ಐದೂ ಜನರು ಕಾರ್ಮಿಕರ ಶೋಷಣೆಯ ವಿರುದ್ಧ ಹೋರಾಡುತ್ತ ಹುತಾತ್ಮರಾದರು. ೧೮೯೪ರಲ್ಲಿ ಇಲಿನಾಯ್ ರಾಜ್ಯದ ರಾಜ್ಯಪಾಲ ಜಾನ್ ಪೀಟರ್ ಆಲ್ಟ್‌ಗೆಲ್ಡ್ ಎಂಟೂ ಜನರು ನಿರ್ದೋಷಿಗಳು, ನ್ಯಾಯಾಲಯದ ತೀರ್ಪು ದುರದೃಷ್ಟಕರ ಮತ್ತು ಕಾರ್ಮಿಕರ ಹೋರಾಟ ನ್ಯಾಯಸಮ್ಮತವಾಗಿತ್ತೆಂದು ಬಣ್ಣಿಸಿ, ಕಾರಾಗೃಹದಲ್ಲಿದ್ದ ಮೈಕೆಲ್ ಶ್ವಾಬ್, ಸ್ಯಾಮುವೆಲ್ ಫೀಲ್ಡೆನ್ ಮತ್ತು ಆಸ್ಕರ್ ನೀಬೆ ಎಂಬ ಮೂರು ಜನರನ್ನು ಬಿಡುಗಡೆ ಮಾಡಿದ. ತಡವಾಗಿ ಬಂದರೂ ಈ ಆಜ್ಞೆ ಕಾರ್ಮಿಕರ ಹೋರಾಟಕ್ಕೆ ಸಿಕ್ಕ ಜಯವಾಗಿತ್ತು. ಆದರೆ ಪೀಟರ್ ಆಲ್ಟ್‌ಗೆಲ್ಡ್‌ನ ರಾಜಕೀಯ ಜೀವನವೂ ಈ ಆಜ್ಞೆಯೊಂದಿಗೆ ಕೊನೆಗೊಂಡಿತ್ತು.

### ಪೊಲೀಸ್ ಪ್ರತಿಮೆಯ ಧ್ವಂಸ

ಶಿಕಾಗೋದ ನಗರ ಸಭೆ ೧೮೮೯ರ ಮೇ ೩೦ರಂದು ಒಂಬತ್ತು ಅಡಿ ಎತ್ತರದ ಕಂಚಿನ ಪೊಲೀಸ್ ಪ್ರತಿಮೆಯನ್ನು ಹೇ ಮಾರುಕಟ್ಟೆ ಚೌಕದಲ್ಲಿ ಸ್ಥಾಪಿಸಿತು. ಶಿಕಾಗೋನ ಹೋರಾಟದ ನಂತರದ ದಿನಗಳಲ್ಲಿ ಕಾರ್ಮಿಕ ಚಳುವಳಿ ಸ್ವಲ್ಪ ಹಿನ್ನಡೆ ಕಂಡರೂ ಅಮೆರಿಕಾದ ಕಾರ್ಮಿಕ ವರ್ಗ ಎಂಟು ಗಂಟೆಗಳ ದುಡಿಮೆಗಾಗಿ ಮತ್ತೊಮ್ಮೆ ಹೋರಾಟಕ್ಕೆ ಸಜ್ಜಾಯಿತು. ೧೮೯೩ರಲ್ಲಿ ಫಾರೆಸ್ಟ್ ಹೋಂ ಮಸಣದಲ್ಲಿ ಹುತಾತ್ಮರ ಸ್ಮಾರಕವನ್ನು ಸ್ಥಾಪಿಸಲಾಯಿತು. ೧೯೨೭ರ ಮೇ ೪ರಂದು ಶಿಕಾಗೊ ನಗರಸಭೆ ಸ್ಥಾಪಿಸಿದ್ದ ಪೊಲೀಸ್ ಪ್ರತಿಮೆ ಧ್ವಂಸಗೊಂಡಿತ್ತು. ೧೯೬೮ರ ಮೇ ೪ರಂದು ನಗರ ಸಭೆ ಮತ್ತೆ ಈ ಪ್ರತಿಮೆಯನ್ನು ಹೇ ಮಾರುಕಟ್ಟೆಯ ಚೌಕದಲ್ಲಿ ಸ್ಥಾಪಿಸಿತು. ಮತ್ತೆ ೧೯೭೦ರ ಮೇ ೪ರಂದು ಧ್ವಂಸಗೊಂಡಿತು. ಕೊನೆಗೆ ಈ ಪ್ರತಿಮೆಯನ್ನು ಪೊಲೀಸ್ ಅಕಾಡೆಮಿಗೆ ಸ್ಥಳಾಂತರಿಸಲಾಯಿತು. ೧೯೯೨ರಲ್ಲಿ ಹೇ ಮಾರುಕಟ್ಟೆಯ ಚೌಕವನ್ನು ಕಾರ್ಮಿಕ ಚಳುವಳಿಯ ಸ್ಮಾರಕ ಸ್ಥಳವೆಂದು ಘೋಷಿಸಲಾಯಿತು. ೧೮೮೬ರ ಮೇ ೪ರಂದು ವ್ಯಾಗನ್ ಮೇಲೆ ನಿಂತು ಭಾಷಣ ಮಾಡಿದ ಸ್ಥಳದಲ್ಲಿ ಕಂಚಿನ ಸ್ಮಾರಕವನ್ನು ೨೦೦೪ರಲ್ಲಿ ಸ್ಥಾಪಿಸಲಾಗಿದೆ.

ಮೇ ದಿನ – ಅಂತರರಾಷ್ಟ್ರೀಯ ಕಾರ್ಮಿಕ ದಿನ – ೧೮೮೯ರಲ್ಲಿ ಪ್ಯಾರಿಸ್‌ನಲ್ಲಿ ನಡೆದ ಎರಡನೆ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಮೇ ೧, ೧೮೯೦ನ್ನು ಅಂತರರಾಷ್ಟ್ರೀಯ ಕಾರ್ಮಿಕ ದಿನವನ್ನಾಗಿ ಆಚರಿಸಲು ನಿರ್ಣಯಿಸಲಾಯಿತು. ಶಿಕಾಗೋನ ಹೇ ಮಾರುಕಟ್ಟೆ ಹೋರಾಟದ ನೆನಪಿನ ದಿನವಾಗಿ ಪ್ರಪಂಚದ ಅನೇಕ ದೇಶಗಳಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ದಿನವನ್ನಾಗಿ ಮೇ ಒಂದರಂದು ಆಚರಿಸಲಾಗುತ್ತಿದೆ. ಅಮೆರಿಕಾದಲ್ಲಿ ಕಾರ್ಮಿಕ ದಿನವನ್ನು ಪ್ರತಿ ವರ್ಷ ಸೆಪ್ಟೆಂಬರ್ ಮೊದಲನೇ ಸೋಮವಾರ ಆಚರಿಸಲಾಗುತ್ತಿದೆ. ಅನೇಕ ಕಾರ್ಮಿಕ ಸಂಘಗಳು ಮೇ ದಿನವನ್ನು ಹೋರಾಟದ ದಿನವನ್ನಾಗಿ ಆಚರಿಸುತ್ತಾರೆ. ೧೯೩೫ರಲ್ಲಿ ಎಂಟು ಗಂಟೆಗಳ ದುಡಿಮೆ ಅಮೆರಿಕಾದಲ್ಲಿ ಜಾರಿಗೊಂಡಿತು.

### ಶಿಕಾಗೊ ಹೋರಾಟ – ಚೈತನ್ಯದ ಚಿಲುಮೆ

ಶಿಕಾಗೋನ ಹೇ ಮಾರುಕಟ್ಟೆಯ ಚೌಕ ಒಂದು ಅಪೂರ್ವ ಹೋರಾಟದ ಚಾರಿತ್ರಿಕ ಸ್ಥಳ. ಸ್ಮಾರಕದ ಪೀಠದಲ್ಲಿರುವ ಒಂದು ಫಲಕದ ಸಾಲುಗಳು ಮಾನವನಾದರ್ಶಗಳನ್ನೆಲ್ಲ ತುಂಬಿಕೊಂಡಿವೆ :

**''ಈ ಸ್ಥಳದಲ್ಲಿ ನಡೆದ ದುರಂತ ಒಂದು ವಿಭಿನ್ನ ವರ್ಗದ ಜನರಿಗೆ, ಸಿದ್ಧಾಂತಕ್ಕೆ ಮತ್ತು ಹೋರಾಟಕ್ಕೆ ಪ್ರಬಲ ಸಂಕೇತವಾಗಿ ವಾಕ್ ಸ್ವಾತಂತ್ರ್ಯ, ಸಭೆ ನಡೆಸುವ ಹಕ್ಕು, ಸಂಘಟಿತ ಕಾರ್ಮಿಕರು, ಕಾನೂನಿನ ಅನುಷ್ಠಾನ, ನ್ಯಾಯ, ಅರಾಜಕತೆ ಹಾಗೂ ಪ್ರತಿಯೊಬ್ಬ ಮಾನವನಿಗೂ ಸಮಾನ ಹಕ್ಕು ಮತ್ತು ಸಮೃದ್ಧ ಜೀವನ ರೂಪಿಸಿಕೊಳ್ಳುವ ಹಕ್ಕು ಮುಂತಾದ ವಿಷಯಗಳನ್ನೊಳಗೊಂಡಿರುವುದು ಈ ಹೋರಾಟದ ವಿಶಿಷ್ಟತೆ. ಸಿಗಬಹುದಾದ ಫಲ ಮತ್ತು ಪರಿಣಾಮಗಳು ಮಾನವನ ಈ ಹೋರಾಟಗಳಲ್ಲೇ ಅಡಕವಾಗಿವೆ – ಎಂಬ ಮನೋಜ್ಞ ಸತ್ಯ ಎಲ್ಲರ ಅರಿವಿಗೂ ಬರುತ್ತದೆ.''**

ಈ ಕಾರಣಗಳಿಂದಾಗಿಯೆ ೧೮೮೬ರ ಶಿಕಾಗೋನ ಮೇ ದಿನಗಳು ದುಡಿಯುವ ಜನರ ಬತ್ತದ ಚೈತನ್ಯದ ಚಿಲುಮೆಯಾಗಿದೆ.

ಮುರಳಿಧರ
ವಕೀಲರು, ೮೩, ಮಲ್ಲೇಶ್ವರಂ ವೃತ್ತ, ಬೆಂಗಳೂರು -೫೬೦ ೦ ೦೩



# ಮಹಿಳಾ ಮೀಸಲಾತಿ ಮಸೂದೆ: ವಾದ – ವಿವಾದ

ಡಾ|| ಜಯಪ್ರಕಾಶ ಮಾವಿನಕುಳಿ

ಮೀಸಲಾತಿ ಎನ್ನುವುದು ಬರಿಯ ಸ್ಥಾನಮಾನವನ್ನು ಪಡೆದುಕೊಳ್ಳುವ ಅವಕಾಶವಷ್ಟೇ ಆದರೆ ಅನನುಭವಿಗಳಿಗೆ, ಅಜ್ಞಾನಿಗಳಿಗೆ, ದಡ್ಡರಿಗೆ ಕುರ್ಚಿಯಲ್ಲಿ ಕುಳಿತುಕೊಳ್ಳಲು ಆಸ್ಪದ ಇರಬಾರದು. ಹಾಗಾದರೆ ಇಡೀ ವ್ಯವಸ್ಥೆಯೇ ಕುಸಿದುಬೀಳುತ್ತದೆ, ಆಡಳಿತ ಸೋಲುತ್ತದೆ. ಇದರಿಂದಾಗಿ, ಅವಕಾಶ ಸಫಲವಾಗಬೇಕಾದರೆ ಮಹಿಳೆಯರು ರಾಜಕೀಯಕ್ಕೆ ಬೇಕಾದ ಜಾಣ್ಮೆ, ಕರ್ತೃತ್ವಶಕ್ತಿ, ಸಾರ್ವಜನಿಕ ಸಂಪರ್ಕ, ಸಂವಿಧಾನದ ಪರಿಚಯ ಇತರೆ – ವಿಷಯಗಳನ್ನು ಅರಿತು ಸಬಲರಾಗಬೇಕು.

ಬದಲಾವಣೆಯ ಬಗ್ಗೆ ನಡೆಯುತ್ತಿದ್ದ ಒಂದು ಚಿಂತನಾ ಸಭೆಗೆ ಆಗಮಿಸಿದ್ದ ಒಂದು ಸಂದರ್ಭದಲ್ಲಿ ಡಾ|| ರಾಮಮನೋಹರ ಲೋಹಿಯಾ ಅವರು ಹೇಳಿದ ಮಾತು ನೆನಪಾಗುತ್ತಿದೆ: ''ಈ ಸಭೆಯಲ್ಲಿ ಒಬ್ಬ ಹರಿಜನರಿಲ್ಲ, ಒಬ್ಬ ಮಹಿಳೆ ಇಲ್ಲ, ಏನು ಚಿಂತನೆ ನಡೆಸುತ್ತೀರಿ ?'' ಈ ಮಾತು ಲೋಕಸಭೆ ಮತ್ತು ರಾಜ್ಯದ ವಿಧಾನಸಭೆಗಳಲ್ಲಿ ಕುಳಿತಿರುವ ಪುರುಷರನ್ನೇ ಕುರಿತು ಹೇಳಿದಂತಿದೆ.

ಇಂತಹ ಪರಿಸ್ಥಿತಿ ಇರುವುದು ನಮ್ಮ ದೇಶದಲ್ಲಿ ಮಾತ್ರ ಅಲ್ಲ. ಎಲ್ಲ ಮುಂದುವರೆದ ರಾಷ್ಟ್ರಗಳಲ್ಲೂ ಮಹಿಳೆಯರ ಬಗ್ಗೆ ತಾತ್ಸಾರ ಭಾವನೆ ಇತ್ತು, ಇದೆ. ಮುಂದುವರೆದಿದ್ದೇವೆ ಎಂದು ಘೋಷಿಸಿಕೊಂಡಿರುವ ಬ್ರಿಟನ್ ಮತ್ತು ಅಮೆರಿಕಾಗಳಲ್ಲೂ ಹೆಂಗಸರನ್ನು ನಿಕೃಷ್ಟವಾಗಿ ಕಾಣಲಾಗುತ್ತಿತ್ತು. ಈ ಶತಮಾನದ ಆರಂಭದಲ್ಲಿ ಗಂಡಸಿನ ದಬ್ಬಾಳಿಕೆಯನ್ನು ವಿರೋಧಿಸಿ ಸಮಾನ ಅವಕಾಶ ಮತ್ತು ಓಟಿನ ಹಕ್ಕಿಗಾಗಿ ಇಂಗ್ಲೆಂಡಿನ ಮಹಿಳೆಯರು ನಡೆಸಿದ ಹೋರಾಟ ಇತಿಹಾಸ ಪ್ರಸಿದ್ಧವಾದ್ದು. ''ಸ್ತ್ರೀಜನ ಅಭಿಮತಾಧಿಕಾರ ಹೋರಾಟ'' ಎಂದೇ ಈ ಚಳುವಳಿ ಪ್ರಸಿದ್ಧವಾಗಿದೆ. ಆದರೆ ಈಗಿನ ಕೆಲವು ಪುರುಷರಂತೆ ೧೮ನೆಯ ಶತಮಾನದ ಅತ್ಯಂತ ಪ್ರಭಾವೀ ನ್ಯಾಯಾಧೀಶ ಸರ್ ವಿಲಿಯಂ ಬ್ಲಾಕ್‌ಸ್ಟೋನ್ 'ಮದುವೆಯಾದ ಹೆಂಗಸಿಗೆ ಪ್ರತ್ಯೇಕವಾದ ಹಕ್ಕಿಲ್ಲ' ಎಂದು ಅಭಿಪ್ರಾಯಪಟ್ಟಿದ್ದ.

ಮಹಿಳೆಯರಿಗೂ ಗಂಡಸರಂತೆ ಮತ ಹಾಕುವ ಅವಕಾಶವಿರಬೇಕು ಎನ್ನುವ ಬೇಡಿಕೆ ಇಪ್ಪತ್ತನೇ ಶತಮಾನದ ಆರಂಭದಲ್ಲಿ ಕುದಿಯುತ್ತಿತ್ತು. ಜಾನ್ ಸ್ಟೋಅರ್ಟ್‌ಮಿಲ್ 'ಆನ್ ದಿ ಸಬ್ಜೆಕ್ಷನ್ ಆಫ್ ವುಮೆನ್' ಎನ್ನುವ ಗ್ರಂಥದಲ್ಲಿ ಹೆಂಗಸರು ಗಂಡಸರಿಗಿಂತ ಮೇಲು ಎಂದು ವಾದಿಸಿದ. ಇದು ಆಗ ಮಹಿಳೆಯರಿಗೆ ಮುಖ್ಯ ಪ್ರೇರಣೆ ನೀಡಿ ೧೯೦೩ರಲ್ಲಿ ಮಿಲಿನಿ ಪ್ಯಾಂಕ್ ರಸ್ಕ್ ಎನ್ನುವಾಕೆಯು ನಾಯಕತ್ವ ನೀಡಿ 'ವುಮನ್ಸ್ ಸೋಶಿಯಲ್ ಅಂಡ್ ಪೊಲಿಟಿಕಲ್ ಯೂನಿಯನ್' ಲಂಡನ್ನಿನಲ್ಲಿ ಸ್ಥಾಪಿಸಿ ಮಹಿಳೆಯರ ಹೋರಾಟಕ್ಕೆ ಅಧಿಕೃತ ನಾಂದಿ ಬರೆದರು. ''ಮಹಿಳೆಯರಿಗೆ ಮತ ಚಲಾಯಿಸುವ ಅಧಿಕಾರ ನೀಡುತ್ತೀರಾ ?'' ಎನ್ನುವ ಭಿತ್ತಿಪತ್ರ ಹಿಡಿದು ಆಗಿನ ಆಡಳಿತಪಕ್ಷವಾಗಿದ್ದ ಲಿಬರಲ್ ಪಕ್ಷದ ಸಮಾವೇಶದೊಳಕ್ಕೆ ನುಗ್ಗಿ ದಾಂಧಲೆ ಎಬ್ಬಿಸಿ, ಪೊಲೀಸರ ಮೇಲೆ ಉಗುಳಿ ಇತಿಹಾಸ ಸೃಷ್ಟಿಸಿದಳು. ಅಂದಿನಿಂದ ಮಹಿಳೆಯರ ಓಟು ಹಕ್ಕಿನ ಹೋರಾಟ ತೀವ್ರ ಸ್ವರೂಪ ತಳೆಯಿತು. ಅನೇಕ ಕಡೆ ಹಿಂಸಾಚಾರ ನಡೆಯಿತು.

ಚಳುವಳಿ ಪರಾಕಾಷ್ಠೆ ಮುಟ್ಟಿದುದು ಜೂನ್ ೪, ೧೯೧೩ರಂದು. ಎಮಿಲಿ ವಿಲ್‌ಡಿಂಗ್ ಡೇವಿಸನ್ ಎಂಬ ಡಬ್ಲ್ಯು.ಎಸ್.ಪಿ.ಯು.ನ ಕಾರ್ಯಕರ್ತೆ ರಾಜನ ಕುದುರೆಗೆ ಎದುರಾಗಿ ಸಿಕ್ಕು ಆತ್ಮಹತ್ಯೆ ಮಾಡಿಕೊಂಡಳು. ಹಿಂಸಾಚಾರ ಮುಗಿಲು ಮುಟ್ಟಿತು. ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿ ಹಾಕಿದರು. ಅಂಚೆಪೆಟ್ಟಿಗೆಗಳೊಳಗೆ ಜಾಮ್ ಅನ್ನು ಸುರಿಯಲಾಯಿತು. ಮನೆಗಳ ನಂಬರುಗಳನ್ನು ವಿರೂಪಗೊಳಿಸಲಾಯಿತು. ರೈಲ್ವೆ ಮತ್ತು ಚರ್ಚುಗಳಿಗೆ ಬೆಂಕಿ ಇಡಲಾಯಿತು. ಒಟ್ಟಾರೆ, ಮೊದಲನೇ ಮಹಾಯುದ್ಧದ ಹೊತ್ತಿಗೆ ಈ ಚಳುವಳಿ ಸ್ವಲ್ಪ ತಣ್ಣಗಾದರೂ ಜನವರಿ ೧೯೧೮ರಂದು ಬ್ರಿಟಿಷ್ ಸರ್ಕಾರ ಮಹಿಳೆಯರ ಬೇಡಿಕೆಗೆ ತಲೆಬಾಗಿತು. ಆಗ ಮೂವತ್ತು ವರ್ಷ ವಯಸ್ಸಿನ ಎಲ್ಲ ಹೆಂಗಸರಿಗೂ ಓಟಿನ ಅಧಿಕಾರ ನೀಡಲಾಯಿತು. ಹತ್ತು ವರ್ಷಗಳ ನಂತರ ೧೯೨೮ರಲ್ಲಿ ಗಂಡಸರಂತೆ ಎಲ್ಲ ೨೧ ವಯಸ್ಸಿನ ಹೆಂಗಸರಿಗೂ ಓಟಿನ ಹಕ್ಕು ನೀಡಲಾಯಿತು.

ಅಮೆರಿಕಾ ಸೇರಿದಂತೆ ಅನೇಕ ದೇಶಗಳ ಮೇಲೆ ಈ ಹೋರಾಟ ಗುರುತರವಾದ ಪರಿಣಾಮ ಬೀರಿತು. ಇದರ ಪ್ರೇರಣೆಯಿಂದ ಜಗತ್ತಿನಾದ್ಯಂತ ಮಹಿಳಾ ಹೋರಾಟದ ದಿಕ್ಕು ಬಲಗೊಂಡಿತು. ಆದರೆ ಗಂಡಸಿನ ದೃಷ್ಟಿಯಲ್ಲಿ ಹೆಣ್ಣು ದುರ್ಬಲಳಾಗಿಯೇ, ಕೀಳಾಗಿಯೇ ಉಳಿದಳು. ೧೯೬೩ರಲ್ಲಿ ಬೆಟ್ಟಿ ಫ್ರೈಡಾನ್‌ಳ 'ದಿ ಫೆಮಿನೈನ್ ಮಿಸ್ಟಿಕ್' ಎನ್ನುವ ಪುಸ್ತಕ ಮತ್ತೆ ಮಹಿಳಾ ಹೋರಾಟದ ಕಿಡಿಯನ್ನು ಹೊತ್ತಿಸಿತು. ತಾರತಮ್ಯದ ಕಾನೂನುಗಳು, ಅಸಂಬದ್ಧ ಗೊಡ್ಡು ಸಂಪ್ರದಾಯಗಳ ವಿರುದ್ಧ ಜಗತ್ತಿನ ಬಹಳಷ್ಟು ಕಡೆ ಚಳುವಳಿಗಳು ಆರಂಭವಾದವು. ಗಂಡು ಮತ್ತು ಹೆಣ್ಣುಗಳ ನಡುವೆ ಸಮಾನತೆಯನ್ನು ಬೆಳೆಸಲು ವಿಶ್ವಸಂಸ್ಥೆ ೧೯೭೫ನೆಯ ವರ್ಷವನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷವೆಂದು ಘೋಷಿಸಿತು.

ಇಷ್ಟಾದರೂ ಪರಿಸ್ಥಿತಿ ಅಷ್ಟಾಗಿ ಬದಲಾಗಲಿಲ್ಲ. ಒಮ್ಮೆ ನಮ್ಮ ರಾಜಕೀಯಶಕ್ತಿಗಳ ಕೇಂದ್ರವಾದ ಸಂಸತ್ತು ಮತ್ತು ರಾಜ್ಯಗಳ ವಿಧಾನಸಭೆಗಳನ್ನು ಅವಲೋಕಿಸಿದರೆ ಶೇಕಡ ಮಹಿಳೆಯರು ಎಷ್ಟು ಜನರಿದ್ದಾರೆ ಎನ್ನುವುದು ಗೊತ್ತಾಗುತ್ತದೆ.

ಕರ್ನಾಟಕದ ವಿಧಾನಸಭೆಯಲ್ಲಿ ೧೮೯ ಸಾಮಾನ್ಯ ಕ್ಷೇತ್ರಗಳು, ೩೩ ನಿಮ್ನ ಜಾತಿಗೆ ಮೀಸಲಾದ ಕ್ಷೇತ್ರಗಳು ಮತ್ತು ಎರಡು ನಿಮ್ನ ವರ್ಗಕ್ಕೆ ಮೀಸಲಾದ ಕ್ಷೇತ್ರಗಳಿವೆ. ಒಟ್ಟು ೨೨೪ ವಿಧಾನಸಭಾ ಕ್ಷೇತ್ರಗಳು. ೧೯೯೪ರ ವಿಧಾನಸಭಾ ಚುನಾವಣೆಯಲ್ಲಿ ೬೧ ಸಾಮಾನ್ಯ ಕ್ಷೇತ್ರಗಳಲ್ಲಿ ೮೩ ಮಹಿಳೆಯರು ಸ್ಪರ್ಧಿಸಿದ್ದರು. ಆದರೆ ಗೆದ್ದದ್ದು ಕೇವಲ ೫ ಜನರು ಮಾತ್ರ. ಅದೇ ೩೩ ನಿಮ್ನ ಜಾತಿ (ಎಸ್.ಸಿ.) ಯ ಮೀಸಲು ಕ್ಷೇತ್ರಗಳಲ್ಲಿ ೧೪ ಕ್ಷೇತ್ರಗಳಿಂದ ೨೮ ಮಹಿಳೆಯರು ಸ್ಪರ್ಧಿಸಿದರೂ ಚುನಾವಣೆಯಲ್ಲಿ ಗೆದ್ದದ್ದು ಮಾತ್ರ ಇಬ್ಬರೇ. ಅದೇ ನಿಮ್ನ ವರ್ಗಕ್ಕೆ ಮೀಸಲಾದ ಎರಡು ವಿಧಾನಸಭಾ ಕ್ಷೇತ್ರಗಳಲ್ಲಿ ಮೂವರು ಮಹಿಳೆಯರು ಸ್ಪರ್ಧಿಸಿದ್ದರೂ ಯಾರೂ ಗೆಲ್ಲಲಿಲ್ಲ. ಹೀಗಾಗಿ ೨೨೪ ಕರ್ನಾಟಕ ವಿಧಾನಸಭಾ

ಕ್ಷೇತ್ರದಿಂದ ಕೇವಲ ಏಳು ಮಹಿಳೆಯರು ಚುನಾಯಿತರಾದರು ಅಷ್ಟೇ. ಅಂದರೆ ಶೇಕಡ ಮೂವರು ಮಹಿಳೆಯರು ಮಾತ್ರ ವಿಧಾನಸಭೆಯಲ್ಲಿ ಕುಳಿತುಕೊಳ್ಳಲು ಅರ್ಹರಾದರು.

೧೯೯೯ರ ಕರ್ನಾಟಕ ವಿಧಾನಸಭಾ ಚುನಾವಣೆಯಲ್ಲಿ ಸ್ಪರ್ಧಿಗಳ ಸಂಖ್ಯೆಯೂ ಕಡಿಮೆಯಾಯಿತು. ೧೮೯ ಸಾಮಾನ್ಯ ಕ್ಷೇತ್ರಗಳಲ್ಲಿ ಕೇವಲ ೬೫ ಮಹಿಳೆಯರು, ೫೧ ಕ್ಷೇತ್ರಗಳಲ್ಲಿ ಮಾತ್ರ ನಿಮ್ನಜಾತಿಗೆ ಮೀಸಲಾದ ೩೩ ವಿಧಾನಸಭಾಕ್ಷೇತ್ರಗಳಲ್ಲಿ೯ ಕ್ಷೇತ್ರಗಳಲ್ಲಿ ೧೨ ಮಹಿಳೆಯರು ಮತ್ತು ಎರಡು ನಿಮ್ನವರ್ಗಕ್ಕೆ ಮೀಸಲಾದ ಕ್ಷೇತ್ರಗಳಲ್ಲಿ ಒಟ್ಟು ಇಬ್ಬರು ಮಹಿಳೆಯರು ಸ್ಪರ್ಧಿಸಿದ್ದರು. ಈ ಚುನಾವಣೆಯಲ್ಲಿ ಸಾಮಾನ್ಯಕ್ಷೇತ್ರದಿಂದ ನಾಲ್ಕು, ನಿಮ್ನ ಜಾತಿ ಕ್ಷೇತ್ರದಲ್ಲಿ ಒಬ್ಬರು, ಮತ್ತು ನಿಮ್ನವರ್ಗ ಕ್ಷೇತ್ರದಿಂದ ಒಬ್ಬರು ವಿಧಾನಸಭೆಗೆ ಆಯ್ಕೆಯಾದರು. ಒಟ್ಟು ೨೨೪ ವಿಧಾನಸಭಾ ಕ್ಷೇತ್ರಗಳಲ್ಲಿ ೧೯೯೯ರ ಚುನಾವಣೆಯಲ್ಲಿ ಒಟ್ಟು ಆರು ಮಹಿಳೆಯರು ಎಂದರೆ ಶೇಕಡಾವಾರು ಇಬ್ಬರು ಮಾತ್ರ ವಿಧಾನಸಭೆಯನ್ನು ಪ್ರವೇಶಿಸಲು ಸಾಧ್ಯವಾಯಿತು.

ನಮ್ಮ ದೇಶದ ಲೋಕಸಭೆಯನ್ನು ನೋಡಿದರೆ ಮಹಿಳೆಯರ ರಾಜಕೀಯ ಸ್ಥಾನಮಾನ ಏನೆಂಬುದು ಗೊತ್ತಾಗುತ್ತದೆ :

| ಚುನಾವಣೆ ಜರುಗಿದ ವರ್ಷ | ಒಟ್ಟು ಸಂಖ್ಯೆ | ಸ್ಪರ್ಧಿಸಿದವರ ಸಂಖ್ಯೆ | ಗೆದ್ದವರ ಸಂಖ್ಯೆ | ಶೇಕಡಾವಾರು |
|---|---|---|---|---|
| ೧೯೫೨ | ೪೮೯ | ೫೧ | ೨೩ | ೪.೭೦ |
| ೧೯೫೭ | ೪೯೪ | ೪೧ | ೨೭ | ೫.೪೬ |
| ೧೯೬೨ | ೪೯೪ | ೬೫ | ೩೪ | ೬.೮೮ |
| ೧೯೬೭ | ೫೧೫ | ೬೬ | ೩೧ | ೬.೦೧ |
| ೧೯೭೧ | ೫೧೮ | ೮೬ | ೨೧ | ೪.೦೫ |
| ೧೯೭೭ | ೫೪೨ | ೭೧ | ೧೯ | ೩.೫೦ |
| ೧೯೮೦ | ೫೪೨ | ೧೪೨ | ೨೮ | ೫.೧೬ |
| ೧೯೮೪ | ೫೦೮ | ೧೫೭ | ೪೨ | ೮.೨೬ |
| ೧೯೮೯ | ೫೨೯ | ೧೯೮ | ೨೭ | ೫.೧೦ |
| ೧೯೯೧ | ೫೨೧ | ೩೨೫ | ೩೯ | ೭.೪೯ |
| ೧೯೯೬ | ೫೪೩ | ೫೯೯ | ೩೯ | ೭.೧೮ |
| ೧೯೯೮ | ೫೪೩ | ೨೭೪ | ೪೩ | ೭.೯೧ |
| ೨೦೦೨ | ೫೪೩ | ೪೪೬ | ೪೯ | ೯.೦೨ |
| ೨೦೦೪ | ೫೪೩ | ೪೩೨ | ೪೫ | ೮.೨೮ |
| ೨೦೦೯ | ೫೪೩ | ತಿಳಿದಿಲ್ಲ | ೫೯ | ೧೦.೮೬ |

ಹದಿನೈದು ಮಹಾ ಚುನಾವಣೆಗಳು ನಡೆದಿದ್ದರೂ ಇನ್ನೂ ಕೇವಲ ಶೇಕಡ ೧೦ರ ಆಜುಬಾಜಿನಲ್ಲೇ ಒದ್ದಾಡುತ್ತಿರುವ ಮಹಿಳೆಯರಿಗೆ ಮೀಸಲಾತಿ ಬೇಕೇ ಬೇಡವೇ ಎಂಬ ಜಿಜ್ಞಾಸೆಯನ್ನು ನೋಡಿದರೆ ಸಖೇದಾಶ್ಚರ್ಯವಾಗುತ್ತದೆ.

ಹದಿನೈದು ವರುಷಗಳಿಂದ ಅತ್ತಿಂದಿತ್ತ - ಇತ್ತಿಂದತ್ತ ಓಡಾಡುತ್ತಾ ಕಸದ ಬುಟ್ಟಿಯಲ್ಲಿದ್ದ ಮಹಿಳಾ ಮೀಸಲಾತಿ ಮಸೂದೆಯನ್ನು ಕಾಂಗ್ರೆಸ್ ನೇತೃತ್ವದ ಸಂಯುಕ್ತ ಪ್ರಗತಿಪರ ಒಕ್ಕೂಟ ಕೇವಲ ನೂರು ದಿನದೊಳಗೆ ಅನುಷ್ಠಾನಗೊಳಿಸುವ ಪಟ್ಟಿಯಲ್ಲಿ ಸೇರಿಸಿದ್ದರಿಂದ ಇದು ರಾಜಕೀಯ ವಲಯದಲ್ಲಿ ಎಲ್ಲಿಲ್ಲದ ಆಕ್ರೋಶ, ಸಿಟ್ಟು ಮತ್ತು ಭಯವನ್ನು ಮೂಡಿಸಿದೆ.

೧೯೯೪ರಲ್ಲಿನ ವರದಿಯಂತೆ ಜಗತ್ತಿನ ಕೆಲವು ರಾಷ್ಟ್ರಗಳ ಸಂಸತ್ತಿನ ಕೆಳಮನೆಯಲ್ಲಿನ ಮಹಿಳಾ ಪ್ರತಿನಿಧಿಗಳ ಸಂಖ್ಯೆಯನ್ನು ಗಮನಿಸಿದರೆ ಇದು ಕೇವಲ ಭಾರತದ ಮಹಿಳೆಯರ ಸಮಸ್ಯೆಯಲ್ಲ; ಇದು ಜಗತ್ತಿನ ಮಹಿಳೆಯರ ರಾಜಕೀಯ ಸವಾಲಿನ ವಿಷಯವೆಂದು ಗೊತ್ತಾಗುತ್ತದೆ.

೧೯೯೪ರಲ್ಲಿ ಆಸ್ಟ್ರೇಲಿಯಾ (ಶೇ.೯), ಆಸ್ಟ್ರಿಯಾ (ಶೇ.೨೧), ಬಾಂಗ್ಲಾದೇಶ (ಶೇ.೧೦), ಬೆಲ್ಜಿಯಂ (ಶೇ.೯), ಚಿಲಿ (ಶೇ.೮), ಡೆನ್ಮಾರ್ಕ್(ಶೇ.೩೩), ಫಿನ್‌ಲ್ಯಾಂಡ್(ಶೇ.೩೯), ಫ್ರಾನ್ಸ್(ಶೇ.೬), ಜರ್ಮನಿ (ಶೇ.೨೧), ಜಪಾನ್(ಶೇ.೩), ಮೆಕ್ಸಿಕೋ (ಶೇ.೮), ನೆದರ್‌ಲ್ಯಾಂಡ್ಸ್ (ಶೇ.೩೧), ನ್ಯೂಜಿಲ್ಯಾಂಡ್ (ಶೇ. ೨೧), ನಾರ್ವೆ (ಶೇ.೩೯), ಪೋಲ್ಯಾಂಡ್ (ಶೇ.೧೩). ಸ್ವೀಡನ್ (ಶೇ.೩೪), ಥಾಯ್‌ಲ್ಯಾಂಡ್(ಶೇ.೪), ಯು.ಕೆ.(ಶೇ.೯). ಅಮೆರಿಕಾದ ಸೆನೆಟ್(ಶೇ.೯) ಮಹಿಳೆಯರು ರಾಜಕೀಯವಾಗಿ ತೀರ್ಮಾನ ಕೈಗೊಳ್ಳುವ ಸದನದಲ್ಲಿದ್ದರು.

ನಮ್ಮ ದೇಶದಲ್ಲಿ ಕೇಂದ್ರ ಮಂತ್ರಿ ಮಂಡಳದಲ್ಲಿ ಮಂತ್ರಿಗಳಾಗಿ ಕೆಲಸ ಮಾಡಿದ ಮಹಿಳೆಯರೂ ಬಹಳ ಕಡಿಮೆಯೇ.

೧೯೫೨ರಿಂದ ೧೯೯೧ರವರೆಗೆ ಕೆಲಸ ಮಾಡಿದ ಮಂತ್ರಿಗಳ ಸಂಖ್ಯೆ ಈ ರೀತಿ ಇದೆ:

| ವರ್ಷ | ಪ್ರಧಾನ ಮಂತ್ರಿ | ಕ್ಯಾಬಿನೆಟ್ ಸಚಿವರು | ರಾಜ್ಯ ಸಚಿವರು | ಸಹಾಯಕ ಸಚಿವರು | ಒಟ್ಟು |
|---|---|---|---|---|---|
| ೧೯೫೨ | – | – | – | ೨ | ೨ |
| ೧೯೫೭ | – | – | – | ೨ | ೨ |
| ೧೯೬೨ | – | ೧ | ೨ | ೩ | ೬ |
| ೧೯೬೭ | ೧ | – | ೧ | ೩ | ೫ |
| ೧೯೭೧ | ೧ | – | ೨ | ೧ | ೪ |
| ೧೯೭೭ | – | – | ೨ | – | ೨ |
| ೧೯೮೦ | ೧ | – | ೧ | – | ೨ |
| ೧೯೮೪ | – | ೧ | ೧ | ೨ | ೪ |
| ೧೯೮೯ | – | – | ೧ | ೧ | ೨ |
| ೧೯೯೧ | – | ೧ | ೫ | ೩ | ೯ |

(ನಮ್ಮ ದೇಶದ ಸಂಸತ್ತಿಗೇ ಮಹಿಳೆಯರು ಬರಲಾಗದಿದ್ದರೆ ಅವರು ಮಂತ್ರಿಗಳಾಗಲು ಹೇಗೆತಾನೆ ಸಾಧ್ಯ ?)

ಇದೇ ರೀತಿಯಲ್ಲಿ ನಮ್ಮ ದೇಶದ ಸಂಸತ್ತಿನ ಮೇಲ್ಮನೆ (ರಾಜ್ಯಸಭೆ)ಯಲ್ಲಿ ೧೯೫೨ರಿಂದ ೧೯೯೩ರವರೆಗೆ ಇದ್ದ ಮಹಿಳೆಯರ ಶೇಕಡ ಸ್ಥಾನವನ್ನು ಗಮನಿಸಿದರೂ ಮಹಿಳೆಯರಿಗೆ ಅವರ ನ್ಯಾಯಪಾಲು ಸಿಗಲಿಲ್ಲ ಎಂಬುದು ತಿಳಿಯುತ್ತದೆ:

| ವರ್ಷ | ಒಟ್ಟು ಸಂಖ್ಯೆ | ಮಹಿಳಾ ಸದಸ್ಯರು | ಶೇಕಡಾವಾರು |
|---|---|---|---|
| ೧೯೫೨ | ೨೧೬ | ೧೫ | ೬.೯ |
| ೧೯೫೪ | ೨೧೯ | ೧೭ | ೭.೮ |
| ೧೯೫೬ | ೨೩೨ | ೨೦ | ೮.೬ |
| ೧೯೫೮ | ೨೩೨ | ೨೨ | ೯.೫ |
| ೧೯೬೦ | ೨೩೬ | ೨೪ | ೧೦.೨ |
| ೧೯೬೨ | ೨೩೬ | ೧೮ | ೭.೬ |
| ೧೯೬೪ | ೨೩೮ | ೨೧ | ೮.೮ |
| ೧೯೬೬ | ೨೪೦ | ೨೩ | ೯.೬ |
| ೧೯೬೮ | ೨೪೦ | ೨೨ | ೯.೨ |
| ೧೯೭೦ | ೨೪೦ | ೧೪ | ೫.೮ |
| ೧೯೭೨ | ೨೪೩ | ೧೮ | ೭.೪ |
| ೧೯೭೪ | ೨೪೩ | ೧೭ | ೭.೦ |
| ೧೯೭೬ | ೨೪೪ | ೨೪ | ೯.೮ |
| ೧೯೭೮ | ೨೪೪ | ೨೫ | ೧೦.೨ |
| ೧೯೮೦ | ೨೪೪ | ೨೯ | ೧೧.೮ |
| ೧೯೮೨ | ೨೪೪ | ೨೪ | ೯.೮ |
| ೧೯೮೪ | ೨೪೪ | ೨೪ | ೯.೮ |
| ೧೯೮೬ | ೨೪೪ | ೨೮ | ೧೧.೪ |
| ೧೯೮೮ | ೨೪೫ | ೨೬ | ೧೦.೨ |
| ೧೯೯೦ | ೨೪೫ | ೨೪ | ೯.೭ |
| ೧೯೯೩ | ೨೩೩ | ೧೭ | ೭.೩ |

ಇಷ್ಟು ಮಹಿಳಾ ರಾಜಕೀಯ ಪ್ರಾತಿನಿಧ್ಯವನ್ನು ಗಮನಿಸಿದ ಮೇಲೆ ಗೊಂದಲ ಗೂಡಾಗಿರುವ ಮಹಿಳಾ ಮಸೂದೆಯ ಗತಿ ಸ್ಥಿತಿಗಳನ್ನು ಗಮನಿಸೋಣ:

ಭಾರತದ ಸಂವಿಧಾನಕ್ಕೆ ೭೩ ಮತ್ತು ೭೪ರ ತಿದ್ದುಪಡಿಯನ್ನು ೧೯೯೨ರಲ್ಲಿ ತಂದ ಮೇಲೆ ಹಳ್ಳಿ ಮತ್ತು ಪಟ್ಟಣಗಳಲ್ಲಿರುವ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ ೩೩ರಷ್ಟು ಸ್ಥಾನವನ್ನು ಮಹಿಳೆಯರಿಗಾಗಿ ಮೀಸಲು ಇಡಬೇಕೆಂಬುದು ಅನಿವಾರ್ಯವಾಯಿತು.

ಇದಾದನಂತರ ಭಾರತದ ಹತ್ತು ಲಕ್ಷಕ್ಕೂ ಹೆಚ್ಚು ಮಹಿಳೆಯರು ರಾಜಕೀಯ ಸ್ಥಾನವನ್ನು ಪಡೆದುಕೊಂಡರು. ಈ ಮೂಲಕ ತೀರ್ಮಾನ ತೆಗೆದುಕೊಳ್ಳುವಲ್ಲಿ ತಮ್ಮ ಪ್ರತಿಭೆಯನ್ನು ಮೆರೆದರು.

ಸೆಪ್ಟೆಂಬರ್ ೪, ೧೯೯೬ರಂದು ೮೧ನೆಯ ಸಂವಿಧಾನ ತಿದ್ದುಪಡಿ ಮಸೂದೆಯನ್ನು ಸಂಸತ್ತಿನ ಕೆಳಮನೆ(ಲೋಕಸಭೆ)ಯಲ್ಲಿ ಮಂಡಿಸಲಾಯಿತು. ಇದರ ಪ್ರಕಾರ ನಮ್ಮ ದೇಶದ ಎಲ್ಲಾ ವಿಧಾನಸಭೆಗಳಲ್ಲಿ ಮತ್ತು ಸಂಸತ್ತಿನಲ್ಲಿ ಶೇಕಡ ೩೩ರಷ್ಟು ಸ್ಥಳಗಳನ್ನು ಮಹಿಳೆಯರಿಗೆ ಮೀಸಲಾಗಿಡಬೇಕಿದೆ. ಗಂಡಸರು ತಲ್ಲಣಗೊಂಡಿದ್ದೆ ಆಗ. ಸುದೀರ್ಘ ಚರ್ಚೆಯ ಮೂಲಕ ಈ ಮಸೂದೆಯನ್ನು ಸಂಸದೆ ಶ್ರೀಮತಿ ಗೀತಾ ಮುಖರ್ಜಿ ಅಧ್ಯಕ್ಷತೆಯ ಜಂಟಿ ಸಂಸದೀಯ ಸಮಿತಿಗೆ ಒಪ್ಪಿಸಲಾಯಿತು. ಜಂಟಿ ಸಂಸದೀಯ ಸಮಿತಿಯು ಡಿಸೆಂಬರ್ ೯ ೧೯೯೬ರಂದು ತನ್ನ ವರದಿಯನ್ನು ಒಪ್ಪಿಸಿತು. ಆದರೆ ಒಪ್ಪಿಗೆ ಸಿಗದೆ ನೆನೆಗುದಿಗೆ ಬಿದ್ದಿತು.

ಸುಮಾರು ಎರಡು ವರುಷಗಳ ನಂತರ ೧೨ನೇ ಲೋಕಸಭೆಯಲ್ಲಿ ಜೂನ್ ೨೬, ೧೯೯೮ರಂದು ೮೪ನೆಯ ಸಂವಿಧಾನ ತಿದ್ದುಪಡಿ ಮಸೂದೆಯೆಂದು ಹೆಸರಿಸಿ ಮಹಿಳಾ ಮೀಸಲಾತಿ ಮಸೂದೆಯನ್ನು ಮತ್ತೆ ಮಂಡಿಸಲಾಯಿತು. ಈ ಬಾರಿಯ ವಿಷಯವೇ ಬೇರೆ. ಈ ಬಾರಿ ಮಸೂದೆಯನ್ನು ವಿರೋಧಿಸುವವರು ಹೊಸ ರಾಗವನ್ನು ಹಾಡಿದರು. ಅವರು ಮುಂದಿಟ್ಟ ಮುಖ್ಯ ವಾದವೆಂದರೆ ಹೀಗೆ ಸಾರಾಸಗಟಾಗಿ ಮಹಿಳೆಯರಿಗೆ ಮೀಸಲಾತಿ ನೀಡಿದರೆ ಕೇವಲ ಮುಂದುವರಿದ - ಬಾಬ್‌ಕಟ್ಟಿನ ಮಹಿಳೆಯರು ಮಾತ್ರ ಈ ಸ್ಥಾನಗಳನ್ನು ಕಬಳಿಸುತ್ತಾರೆ. ಹೀಗಾಗಿ ಅಲ್ಪಸಂಖ್ಯಾತ ಮತ್ತು ಹಿಂದುಳಿದ ಮಹಿಳೆಯರು ಅವಕಾಶವಂಚಿತರಾಗುತ್ತಾರೆ. ಸಂಯುಕ್ತ ಜನತಾದಳದ ಅಧ್ಯಕ್ಷ ಮತ್ತು ಮಾಜಿ ಕೇಂದ್ರ ಸಚಿವ ಶರದ್ ಯಾದವ್ ಈ ಮಸೂದೆ ತನ್ನ ಮೂಲಸ್ವರೂಪದಲ್ಲಿ ಜಾರಿಗೆ ಬರುವುದಾದರೆ ತಾನು ಲೋಕಸಭೆಯಲ್ಲಿಯೇ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಹೇಳಿದ್ದಾರೆ. ರಾಷ್ಟ್ರೀಯ ಜನತಾದಳದ ಲಾಲೂ ಪ್ರಸಾದ್ ಯಾದವ್, ಸಮಾಜವಾದಿ ಪಕ್ಷದ ಮುಲಾಯಂ ಸಿಂಗ್ ಯಾದವ್ ಈ ಮಸೂದೆಯನ್ನು ಉಗ್ರವಾಗಿ ವಿರೋಧಿಸಿದ್ದಾರೆ. ಲೋಕಸಭೆಯಲ್ಲಿ ಸಾಕಷ್ಟು ಮುಖಭಂಗ ಅನುಭವಿಸಿರುವ ಪ್ರಾದೇಶಿಕ ಪಕ್ಷಗಳೂ ಸಹ ಈ ಮಸೂದೆಯನ್ನು ವಿರೋಧಿಸುವ ಹುಮ್ಮಸ್ಸಿನಲ್ಲಿದ್ದಾರೆ. ರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟ (ಎನ್.ಡಿ.ಎ.) ೨೦೦೨ ಮತ್ತು ೨೦೦೩ರಲ್ಲಿ ಈ ಮಸೂದೆಯನ್ನು ಚರ್ಚೆಗೆ ಮಂಡಿಸಿದರೂ ಸಹ ಅಗತ್ಯವಿದ್ದ ಬಹುಮತವನ್ನು ಗಳಿಸುವಲ್ಲಿ ವಿಫಲವಾಗಿತ್ತು.

ಮೇ ೨೦೦೪ರಲ್ಲಿ ಕಾಂಗ್ರೆಸ್ ನೇತೃತ್ವದ ಸಂಯುಕ್ತ ಪ್ರಗತಿಪರ ಒಕ್ಕೂಟ (ಯು.ಪಿ.ಎ.) ಮಹಿಳಾ ಮೀಸಲಾತಿ ಮಸೂದೆಯನ್ನು ತರಲು ಪ್ರಯತ್ನಿಸಿತು. ಇದರಂತೆ ಮಹಿಳಾ ಮೀಸಲಾತಿಯ ೧೦೮ನೇ ಸಂವಿಧಾನ ತಿದ್ದುಪಡಿ ವಿಧೇಯಕವನ್ನು ಮೇ ೬, ೨೦೦೮ರಂದು ರಾಜ್ಯಸಭೆಯಲ್ಲಿ ಮಂಡಿಸಿದಾಗ ಈ ಮಸೂದೆಯನ್ನು ಸಂಯುಕ್ತ ಜನತಾದಳ ಮತ್ತು ಸಮಾಜವಾದಿ ಪಕ್ಷಗಳು ಉಗ್ರವಾಗಿ ವಿರೋಧಿಸಿದವು. ಕಾಂಗ್ರೆಸ್, ಎಡಪಕ್ಷಗಳು ಮತ್ತು ಭಾರತೀಯ ಜನತಾಪಕ್ಷ ಈ ಮಸೂದೆಯನ್ನು ಶಾಸನರೀತಿಯಲ್ಲಿ ಪರಿಗಣಿಸಬೇಕೆಂದು ಒಲವು ತೋರಿದವು. ಆದರೆ ಆ ಮಸೂದೆ ಅಲ್ಲಿ ಬಿದ್ದುಹೋಯಿತು.

ನಾವು ನೆರೆಹೊರೆಯವರನ್ನು ನೋಡಿಯಾದರೂ ತುಸು ರಾಜಕೀಯ ಸಭ್ಯತೆಯನ್ನು ಕಲಿತುಕೊಳ್ಳಬೇಕಿದೆ. ನೇಪಾಳದಲ್ಲಿ ೧೯೯೧ರ ಸಂವಿಧಾನದ ೧೧೪ನೇ ನಿಯಮದ ಪ್ರಕಾರ ಕೆಳಮನೆಯಲ್ಲಿ ಶೇಕಡ ೫ರಷ್ಟು ಮತ್ತು ಮೇಲ್ಮನೆಯಲ್ಲಿ ಶೇಕಡ ೩ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಸಂವಿಧಾನಬದ್ಧವಾಗಿ ಮೀಸಲಾಗಿಡಲಾಗಿದೆ. ಪಾಕಿಸ್ತಾನದಲ್ಲಿ ಕೆಳಮನೆಯಲ್ಲಿ ಶೇಕಡ ೩೩ರಷ್ಟು ಮತ್ತು ಸೆನೆಟ್‌ನಲ್ಲಿ ಶೇಕಡ ೧೭ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಡಲಾಗಿದೆ. ಬಾಂಗ್ಲಾದೇಶದಲ್ಲಿ ೧೪ನೇ ಸಂವಿಧಾನದ ತಿದ್ದುಪಡಿ ಪ್ರಕಾರ ೨೦೦೪ರಿಂದ ಶೇಕಡ ೧೫ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಡಲಾಗಿದೆ. ಜಗತ್ತಿನ ಬಹುದೊಡ್ಡ ಪ್ರಜಾಪ್ರಭುತ್ವ ಎನಿಸಿರುವ ನಮ್ಮ ದೇಶದಲ್ಲಿ ಇನ್ನೂ ಮೀನ - ಮೇಷ ಎಣಿಸುತ್ತಿದ್ದೇವೆ ಮಹಿಳಾ ಮೀಸಲಾತಿಯ ಬಗ್ಗೆ.

ನಮ್ಮ ದೇಶದಲ್ಲಿ ಜನಸಂಖ್ಯೆಯ ದೃಷ್ಟಿಯಲ್ಲಿ ಪುರುಷರು ಮತ್ತು ಮಹಿಳೆಯರು ಹೆಚ್ಚೂ ಕಡಿಮೆ ಸಮ-ಸಮ ಇದ್ದಾರೆ. ಆದರೆ ಈ ಲಿಂಗ ಅನುಪಾತವು ಜನಗಣತಿಯ ಅಂಕಿ-ಅಂಶಗಳ ಪ್ರಕಾರ ಭಾರತದಲ್ಲಿ ೧೯೭೧ ರಿಂದ ೧೯೯೧ರವರೆಗೂ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಳಿಗಿಂತಲೂ ಕಡಿಮೆಯಾಗುತ್ತಲೇ ಬಂದಿದೆ. ೧೯೦೧ರಲ್ಲಿ ೧೦೦೦ ಪುರುಷರಿಗೆ ೯೭೨ ಸ್ತ್ರೀಯರಿದ್ದರೆ, ೨೦೦೧ರಲ್ಲಿ ೧೦೦೦ ಪುರುಷರಿಗೆ ೯೩೩ ಸ್ತ್ರೀಯರಿದ್ದಾರೆ. ಅಂದರೆ ೧೯೦೧ರಲ್ಲಿ ೩ ದಶಲಕ್ಷ ಮಂದಿ ಸ್ತ್ರೀಯರ ಕೊರತೆ ಇದ್ದರೆ, ೨೦೦೧ರಲ್ಲಿ ೩೫ ದಶಲಕ್ಷ ಸ್ತ್ರೀಯರ ಕೊರತೆ ಇದೆ. ಹೀಗಾಗಿ ಸ್ತ್ರೀಯರು 'ಅವನತಿ ಹೊಂದುತ್ತಿರುವ ಲಿಂಗ' ಎಂದು ಕರೆಯಲಾಗುತ್ತಿದೆ. ಆದರೆ ಇರುವಷ್ಟು ಸ್ತ್ರೀಯರಿಗಾದರೂ ಅವರ ಸಾಮರ್ಥ್ಯವನ್ನು, ಶಕ್ತಿಯನ್ನು ಉದ್ದೀಪನಗೊಳಿಸಲು, ಅವರನ್ನು ಸಮಾಜದ ಮುಂಚೂಣಿಯಲ್ಲಿ ನಿಲ್ಲಿಸಿ, ಅವರ ಬಗ್ಗೆ ಅವರಿಗೆ ಆತ್ಮವಿಶ್ವಾಸ ಬರುವಂತೆ ನೋಡಿಕೊಳ್ಳುವುದು ಈಗಿನ ತುರ್ತಾಗಿದೆ. ಭಾರತದ ಲಿಂಗ ನಿಷ್ಪತ್ತಿಯನ್ನು ಈ ಕೆಳಗಿನ ತಃಖ್ತೆಯಲ್ಲಿ ನೋಡಬಹುದು.

| ಭಾರತದಲ್ಲಿ ಲಿಂಗ ನಿಷ್ಪತ್ತಿ | |
|---|---|
| ವರ್ಷ | ೧೦೦೦ ಪುರುಷರಿಗೆ ಸ್ತ್ರೀಯರು |
| ೧೯೦೧ | ೯೭೨ |
| ೧೯೧೧ | ೯೬೪ |
| ೧೯೨೧ | ೯೫೫ |
| ೧೯೩೧ | ೯೫೦ |
| ೧೯೪೧ | ೯೪೫ |
| ೧೯೫೧ | ೯೪೬ |
| ೧೯೬೧ | ೯೪೧ |
| ೧೯೭೧ | ೯೩೦ |
| ೧೯೮೧ | ೯೩೪ |
| ೧೯೯೧ | ೯೨೭ |
| ೨೦೦೧ | ೯೩೩ |

ರಾಜಕೀಯ ರಂಗವು ಇನ್ನೂ ಪುರುಷರ ಕೋಟೆಯಾಗಿಯೇ ಮುಂದುವರೆದಿದೆ. ಸುಮಾರು ತೊಂಬತ್ತು ವರುಷಗಳಿಂದಲೂ ಈ ಕುರಿತ ಹೋರಾಟ ನಡೆಯುತ್ತಲೇ ಇದೆ. ಪ್ರತಿನಿಧಿ ಸರ್ಕಾರಕ್ಕಾಗಿ ಭಾರತೀಯರು ನಡೆಸಿದ ಅಭೂತಪೂರ್ವ ಹೋರಾಟಕ್ಕೆ ಸ್ಪಂದಿಸಿದ್ದುದುಂಟು. ಬ್ರಿಟಿಷ್ ಸರಕಾರ ಕೆಲವು ಭಾರತೀಯರನ್ನು ಒಳಗೊಳ್ಳುವ ಉದ್ದೇಶದಿಂದ ಸಂವಿಧಾನವನ್ನು ಸುಧಾರಣೆಗೊಳಿಸಲು ಪ್ರಸ್ತಾವವೊಂದನ್ನು ಸಿದ್ಧಪಡಿಸಲು ೧೯೧೯ರಲ್ಲಿ ಮಾಂಟೆಗು ಹಾಗೂ ಚೆಲ್ಮ್ಸ್ ಫೋರ್ಡ್ ಇಬ್ಬರ ನೇತೃತ್ವದ ಸಮಿತಿಯೊಂದನ್ನು ರಚಿಸಿತು. ಈ ಸಮಿತಿಯ ಮುಂದೆ ಅನೇಕ ಗುಂಪುಗಳು ತಮ್ಮ ತಮ್ಮ ಅಹವಾಲುಗಳನ್ನು ಹೇಳಿಕೊಂಡವು. ಸರೋಜಿನಿದೇವಿ ನಾಯ್ಡು ಹಾಗೂ ಮಾರ್ಗರೇಟ್ ಕಸಿನ್ಸ್ ಅವರುಗಳು ಈ ಸಮಿತಿಗೆ ಸಣ್ಣ ನಿಯೋಗವೊಂದನ್ನು ಒಯ್ದಿದ್ದರು. ಈ ನಿಯೋಗದ ಪ್ರಮುಖ ಉದ್ದೇಶ ''ಪುರುಷರಂತೆ ಮಹಿಳೆಯರಿಗೂ ಶಾಸನಸಭೆಗಳಲ್ಲಿ ಪ್ರಾತಿನಿಧ್ಯವನ್ನು ನೀಡಬೇಕು'' ಎಂಬುದರ ಬಗ್ಗೆ ಒತ್ತಾಯಿಸುವುದಾಗಿತ್ತು.

ಬ್ರಿಟಿಷ್ ಸರ್ಕಾರ ಇದನ್ನು ಒಪ್ಪಲಿಲ್ಲ. ಯಾಕೆಂದರೆ ಅಂದು ಪಾಶ್ಚಾತ್ಯ ದೇಶಗಳಲ್ಲಿ ಇನ್ನೂ ಮತದಾನದ ಹಕ್ಕನ್ನು ಮಹಿಳೆಯರಿಗೆ ನೀಡಿರಲಿಲ್ಲ. ಇನ್ನು ಪರ್ದಾ ಪದ್ಧತಿ, ಮಹಿಳೆಯರಿಗೆ ಶಿಕ್ಷಣ ನಿಷೇಧ ಇದ್ದ ಈ ದೇಶದಲ್ಲಿ ಮಹಿಳೆಯರಿಗೆ ಮತದಾನ ಮಾಡುವ ಹಕ್ಕನ್ನು ನೀಡುವುದೇ ಅಪ್ರಬುದ್ಧ ಆಲೋಚನೆ ಎಂದು ಸೌತ್‌ಬರೊ ಸಮಿತಿ ತಿಳಿಸಿತ್ತು.

ಆದರೆ ಬ್ರಿಟಿಷರು ಮಹಿಳಾ ಮೀಸಲಾತಿಯ ಬಗೆಗೆ ಏನನ್ನೂ ಹೇಳದೇ ಬುದ್ಧಿವಂತಿಕೆಯಿಂದ ಆಗಷ್ಟೇ ಭಾರತದಲ್ಲಿ ರಚಿಸಿದ್ದ ಪ್ರಾದೇಶಿಕ ಶಾಸನಸಭೆಯ ವಿವೇಚನೆಗೆ ಈ ವಿಷಯವನ್ನು ಬಿಟ್ಟುಬಿಟ್ಟಿತು. ಆದರೆ ಮೀಸಲಾತಿ ಶಾಸನ ಬಾರದಿದ್ದರೂ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸುವುದನ್ನು ಪುರುಷರು ಪ್ರೋತ್ಸಾಹಿಸಿದ್ದರು. ೧೯೪೦ರಲ್ಲಿ ಶಾಂತಿನಿಕೇತನದಲ್ಲಿ ಮಹಿಳೆಯರನ್ನುದ್ದೇಶಿಸಿ ಭಾಷಣ ಮಾಡುತ್ತಿದ್ದ ಗಾಂಧೀಜಿ ಅವರು ''ಮಹಿಳಾ ಸದಸ್ಯರ ಸಮರ್ಪಕ ಪಾಲು ಇಲ್ಲದ ಶಾಸನಸಭೆಯನ್ನು ನಾನು ಬಹಿಷ್ಕರಿಸುತ್ತೇನೆ'' ಎಂದಿದ್ದರು. ೧೯೩೦ರ ದಶಕದಲ್ಲಿ ಪುರುಷರ ಜೊತೆಜೊತೆಗೆ ಮಹಿಳೆಯರೂ ಸತ್ಯಾಗ್ರಹ ಚಳುವಳಿಯಲ್ಲಿ ಪಾಲ್ಗೊಳ್ಳಬೇಕು ಎಂದು ಗಾಂಧೀಜಿ ಕರೆ ನೀಡಿದರು. ಉಪ್ಪಿನ ಸತ್ಯಾಗ್ರಹದಲ್ಲಿ ಬಂಧನಕ್ಕೊಳಗಾಗದ ಸುಮಾರು ೩೦ ಸಾವಿರ ಸತ್ಯಾಗ್ರಹಿಗಳಲ್ಲಿ ೧೭ ಸಾವಿರ ಮಹಿಳಾ ಕಾರ್ಯಕರ್ತರಿದ್ದರು.

ಮಹಿಳಾ ಮೀಸಲಾತಿಗೆ ಸಂಬಂಧಿಸಿದಂತೆ ತಮಾಷೆಯ ಸಂಗತಿಯೆಂದರೆ ನಮ್ಮೆಲ್ಲಾ ಪ್ರಮುಖ ರಾಜಕೀಯ ಪಕ್ಷಗಳೂ – ಕಾಂಗ್ರೆಸ್, ಬಿಜೆಪಿ, ಜನತಾದಳ ಹಾಗೂ ಎರಡೂ ಕಮ್ಯುನಿಸ್ಟ್ ಪಕ್ಷಗಳೂ – ತಮ್ಮ ರಾಜಕೀಯ ಪ್ರಣಾಳಿಕೆಗಳಲ್ಲಿ ಶೇಕಡ ೩೩ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಡಲು ಬದ್ಧ ಎಂದು ಹೇಳಿಕೊಂಡಿವೆ !

ಪ್ರಥಮ ಚುನಾವಣೆಯನ್ನು ಗಮನಿಸಿದಾಗಲೂ ಅನೇಕ ಪಕ್ಷಗಳು ಮಹಿಳೆಯರಿಗೆ ಪ್ರಾತಿನಿಧ್ಯವನ್ನು ನೀಡಲು ಮರೆತಿರಲಿಲ್ಲ.

೧೯೫೨ರ ಚುನಾವಣೆಯಲ್ಲಿ ೨೩ ಲೋಕಸಭೆಯ ಮಹಿಳಾ ಸದಸ್ಯರಲ್ಲಿ ಕಾಂಗ್ರೆಸ್ಸಿನಿಂದ ೧೪ ಸದಸ್ಯರಿದ್ದರು. ೧೯೫೭ರಲ್ಲಿನ ೨೭ ಮಹಿಳಾ ಸದಸ್ಯರಲ್ಲಿ ಕಾಂಗ್ರೆಸ್ಸಿನಿಂದ ೨೧ ಸದಸ್ಯರಿದ್ದರು. ೧೯೯೬ರಲ್ಲಿ ೪೦ ಮಹಿಳಾ ಸದಸ್ಯರಲ್ಲಿ ೧೬ ಕಾಂಗ್ರೆಸ್ ಮತ್ತು ೧೪ ಭಾರತೀಯ ಜನತಾ ಪಕ್ಷದ ಸದಸ್ಯರಿದ್ದರು. ೧೯೯೯ರಲ್ಲಿ ೪೯ ಮಹಿಳಾ ಸದಸ್ಯರಲ್ಲಿ ೧೪ ಕಾಂಗ್ರೆಸ್ ಮತ್ತು ೧೫ ಭಾರತೀಯ ಜನತಾ ಪಕ್ಷದ ಸದಸ್ಯರಿದ್ದರು. ಈಗ ಇತಿಹಾಸದಲ್ಲಿಯೇ ಮೊದಲ ಬಾರಿಗೆ ೫೯ ಮಹಿಳಾ ಸದಸ್ಯರುಗಳು ಲೋಕಸಭೆಯಲ್ಲಿದ್ದಾರೆ. ಅದರಲ್ಲಿ ಗಣನೀಯವಾಗಿ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷದ ಸದಸ್ಯರುಗಳೇ ಇದ್ದಾರೆ.

**ಭಾರತೀಯ ಮಹಿಳಾ ಪಕ್ಷ ಕಟ್ಟಬಹುದೇ ?**

ಈ ಹಿನ್ನೆಲೆಯಲ್ಲಿ ಭಾರತೀಯ ಜನಸಂಖ್ಯೆಯಲ್ಲಿ ಹೆಚ್ಚು ಕಡಿಮೆ ಸರಿ ಸಮಾನವಾಗಿರುವ ಮಹಿಳೆಯರು ತಮ್ಮದೇ ಆದ ಮಹಿಳಾ ಪಕ್ಷವನ್ನು ಕಟ್ಟಿ ಚುನಾವಣೆಗಳನ್ನೂ ಎದುರಿಸಬಹುದೇ ಎಂಬ ಮಾತು ಬರುತ್ತದೆ. ಇಂಥ ಪ್ರಯತ್ನ ಭಾರತದ ರಾಜಕಾರಣದಲ್ಲಿ ಆಗಿಲ್ಲವೆಂದಲ್ಲ. ೨೦೦೩ರಲ್ಲಿ ವರ್ಷಕಾಳೆ ಅವರ ನಾಯಕತ್ವದಲ್ಲಿ 'ಭಾರತೀಯ ಸ್ತ್ರೀವಾದಿ ಪಕ್ಷ' ಅಸ್ತಿತ್ವಕ್ಕೆ ಬಂದಿತು. ಅದು ತನ್ನ ಪಕ್ಷವನ್ನು ೨೭ ನವೆಂಬರ್ ೨೦೦೩ರಂದು ನೋಂದಾಯಿಸಿಕೊಂಡಿತ್ತು. ಈ ಪಕ್ಷವು ತನ್ನ ಪ್ರಣಾಳಿಕೆಯಲ್ಲಿ ರಾಜಕೀಯವಾದ ವಿಷಯಗಳೇ ಅಲ್ಲದೆ ಸಾಮಾಜಿಕ ಮತ್ತು ನೈಸರ್ಗಿಕ ವಿಷಯಗಳನ್ನು ಸೇರಿಸಿತ್ತು. ರಾಜಕೀಯವಾಗಿ ಸಂಸತ್ತು ಮತ್ತು ವಿಧಾನಸಭೆಗಳಲ್ಲಿ ಶೇಕಡ ೫೦ರಷ್ಟು ಮೀಸಲಾತಿಯನ್ನು ಮಹಿಳೆಯರಿಗೆ ನೀಡಲು ಸೇರಿಸಿಕೊಂಡಿತು. ಇಷ್ಟೇ ಮುಖ್ಯವಾಗಿ ನೈಸರ್ಗಿಕ ವಿಷಯಗಳ ಮೇಲೆ ಮಹಿಳೆಯರಿಗೆ ಇರಬೇಕಾದ ಹಕ್ಕನ್ನು ಪ್ರತಿಪಾದಿಸಿತು. – ಭೂಮಿ, ನೀರು, ಕಾಡು, ಇನ್ನಿತರ ಸ್ಥಳಗಳ ಮೇಲೆ ವಿಶೇಷ ಹಕ್ಕನ್ನು ಮಹಿಳೆಯರಿಗೆ ನೀಡಲು ಒತ್ತಾಯಿಸಿತು. ಇಷ್ಟೇ ಅಲ್ಲದೇ, ಮಹಿಳಾ ಬ್ಯಾಂಕುಗಳ ಸ್ಥಾಪನೆ ಮತ್ತು ಔದ್ಯಮಿಕ ಕ್ಷೇತ್ರದಲ್ಲಿ ಶೇಕಡ ೫೦ರಷ್ಟು ಉದ್ಯೋಗಗಳನ್ನು ಮಹಿಳೆಯರಿಗೆ ಮೀಸಲು, ಇನ್ನಿತರೆ ವಿಷಯಗಳನ್ನು ಪ್ರಣಾಳಿಕೆಯಲ್ಲಿ ಸೇರಿಸಿಕೊಂಡಿತು.

ಪರಿಸರ ಹೋರಾಟಗಾರ್ತಿ ಮೇಧಾ ಪಾಟ್ಕರ್ ಸಹ ಒಂದು ಹೊಸ ರಾಜಕೀಯ ಪಕ್ಷವನ್ನು ಸ್ಥಾಪಿಸಿದರು.

ಇವೆಲ್ಲದರ ಪರಿಣಾಮವೆಂಬಂತೆ ಏಪ್ರಿಲ್ ೨೪, ೧೯೯೪ರಂದು ಮಹಿಳಾ ರಾಜಕೀಯ ಸಬಲೀಕರಣ ದಿನವೆಂದು ಸಾರಲು ನವದೆಹಲಿಯಲ್ಲಿ ಸುಮಾರು ೧೫೦೦ ಬೇರೆ ಬೇರೆ ಕ್ಷೇತ್ರಗಳಿಂದ ಆಯ್ಕೆಯಾದ ಮಹಿಳಾ ಪ್ರತಿನಿಧಿಗಳು ಸೇರಿ ಹೊಸ ಘೋಷಣಾ ಪತ್ರವನ್ನು ಸಿದ್ಧಪಡಿಸಿದರು :

೧. ಸ್ಥಳೀಯ ಸಂಸ್ಥೆಗಳಲ್ಲಿರುವ ಮಹಿಳಾ ಮೀಸಲಾತಿಯನ್ನು ಶೇಕಡ ೩೩.೩೩ರಿಂದ ಶೇ.೫೦ಕ್ಕೆ ಏರಿಸಬೇಕು.

೨. ಮಹಿಳಾ ಶಕ್ತಿಯ ಪೂರ್ಣ ಬಳಕೆಗಾಗಿ ಪ್ರತಿಯೊಂದು ಜಿಲ್ಲಾ ಕೇಂದ್ರದಲ್ಲಿ ಒಂದು ತರಬೇತಿ ಕೇಂದ್ರವನ್ನು ತೆರೆಯಬೇಕು.

೩. ಮಹಿಳಾ ದಕ್ಷತೆಯನ್ನು ಹೆಚ್ಚಿಸಲು ಕಂಪ್ಯೂಟರ್, ಇಂಟರ್‌ನೆಟ್ ಸೌಲಭ್ಯಗಳ ತರಬೇತಿಯನ್ನು ನಿರಂತರವಾಗಿ ಹಮ್ಮಿಕೊಳ್ಳಬೇಕು.

೪. ಎಲ್ಲಾ ಶಾಸಕರು ಮತ್ತು ಸಂಸತ್ ಸದಸ್ಯರಿಗೆ ಮಹಿಳಾ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸಲು ಕಾರ್ಯಾಗಾರವನ್ನು ಹಮ್ಮಿಕೊಳ್ಳಬೇಕು.

೫. ಹಳ್ಳಿಗಳಲ್ಲಿ ಸರ್ಕಾರಿ ಕೆಲಸಗಳು – ರಸ್ತೆ, ಕಟ್ಟಡ ಕಟ್ಟುವುದು, ಇತರೆ ಕೆಲಸಗಳನ್ನು ಸ್ವ ಸಹಾಯ ಸ್ತ್ರೀ ಗುಂಪುಗಳಿಗೆ ವಹಿಸಬೇಕು.

೬. ಗ್ರಾಮಸಭೆಗಳಲ್ಲಿ ಮಹಿಳಾ ಸಮಸ್ಯೆಗಳ ಬಗ್ಗೆ ವಿಶೇಷ ಆದ್ಯತೆ ನೀಡಬೇಕು.

೭. ಎಲ್ಲಾ ತಾಲ್ಲೂಕು, ಹೋಬಳಿಗಳಲ್ಲೂ 'ಮಹಿಳಾ ಜಾಗೃತಿ ಸಂಘ'ಗಳನ್ನು ಸ್ಥಾಪಿಸಬೇಕು.

೮. ಗ್ರಾಮ ಪಂಚಾಯತಿಯ ಅಧ್ಯಕ್ಷ/ ಉಪಾಧ್ಯಕ್ಷರುಗಳ ಸ್ಥಾನವನ್ನು ಮಹಿಳೆಯರಿಗೆ ಮೀಸಲಾಗಿಡಬೇಕು.

೯. ಗ್ರಾಮ ಪಂಚಾಯತಿ ಕಾರ್ಯದರ್ಶಿ ಸ್ಥಾನವನ್ನು ಮಹಿಳೆಯರಿಗೆ ನೀಡಬೇಕು.

೧೦. ಪೊಲೀಸು ರಕ್ಷಣೆ, ಕಾನೂನು ಪರಿಹಾರ, ಆಸ್ಪತ್ರೆ ಸೌಲಭ್ಯ, ಮಾಹಿತಿ ನೆರವುಗಳಿಗಾಗಿ ಎಲ್ಲಾ ಹಳ್ಳಿ/ ಗ್ರಾಮಗಳಲ್ಲಿ ಉಚಿತ ದೂರವಾಣಿ ಸೌಕರ್ಯ ನೀಡಬೇಕು.

೧೧. ಗ್ರಾಮಸಭೆಗಳಲ್ಲಿ ಮಹಿಳಾ ಕೋರಂ ನಿಗದಿಸಬೇಕು.

೧೨. ಎಲ್ಲಾ ಸಮಿತಿಗಳಲ್ಲಿ ಮಹಿಳಾ ಮೀಸಲಾತಿ ನೀಡಬೇಕು.

೧೩. ಸರ್ಕಾರ/ ಪಂಚಾಯತಿ ಎಲ್ಲಾ ಅಭಿವೃದ್ಧಿ ಹಣದಲ್ಲಿ ಶೇಕಡ ೩೦ರಷ್ಟು ಹಣವು ಮಹಿಳೆಯರ ಅಭ್ಯುದಯಕ್ಕೆ ಮೀಸಲಾಗಿಡಬೇಕು.

೧೪. ಮಹಿಳೆಯರ ಮೇಲೆ ಜರುಗುತ್ತಿರುವ ಹಿಂಸಾಚಾರವನ್ನು ತಡೆಯುವ ದಿಶೆಯಲ್ಲಿ ಅಪರಾಧಿಗಳಿಗೆ ಅತ್ಯಂತ ಕಠಿಣ ಶಿಕ್ಷೆಯನ್ನು ನೀಡುವ ಕಾನೂನು ತರಬೇಕು.

೧೫. ಎರಡು ಮಕ್ಕಳಿಗಿಂತ ಹೆಚ್ಚು ಇದ್ದವರು ಪಂಚಾಯತಿಗಳಿಗೆ ಸ್ಪರ್ಧಿಸುವಂತಿಲ್ಲ ಎಂಬ ಕಾನೂನನ್ನು ಕೈಬಿಡಬೇಕು.

## ಸಾದರ ಸ್ವೀಕಾರ

**ಒಡೆತನಕ್ಕೆ ಕೇಡಿಲ್ಲವಾಗಿ...** (ಲೇಖನ ಸಂಗ್ರಹ) ಶ್ರೀಶ ಉಡುಪ
ಪುಟ : ೧೨೪ ಬೆಲೆ : ರೂ. ೫೦
ಮೌಲ್ಯ ಪ್ರಕಾಶನ, ನಲ್ಲೂರು, ಕಾರ್ಕಳ
ಉಡುಪಿ ಜಿಲ್ಲೆ - ೫೭೪ ೫೦೨

**ತಿರುಮಂತ್ರ** (ನಗೆಬರಹಗಳು) ಅನಂತ ಕಲ್ಲೋಳ
ಪುಟ : ೧೨೮ ಬೆಲೆ : ರೂ. ೮೦
ಅಮೋಘ ವಾಙ್ಮಯ ಪ್ರಸಾರ, ೬೫, ರಾಣಿ ಚೆನ್ನಮ್ಮನಗರ (೧ನೇ ಹಂತ), ಬೆಳಗಾಂವಿ - ೫೯೦ ೦೦೬

**ಜನರಲ್ ಬೋಗಿ** (ಲಲಿತ ಪ್ರಬಂಧಗಳು) ಮಲ್ಲಿಕಾರ್ಜುನ ಹುಲಗಬಾಳಿ
ಪುಟ : ೧೫೦ ಬೆಲೆ : ರೂ. ೯೦
ನಂದ ಪ್ರಕಾಶನ, ಬಸವ ಸಂಪದ, ಬನಹಟ್ಟಿ - ೫೮೭ ೩೧೧
ಬಾಗಲಕೋಟೆ ಜಿಲ್ಲೆ

**ಮೋಸಕ್ಕೆ ವಾಸ್ತು – ವಾಸಕ್ಕೆ ಮನೆ** ಶಾಂತಾರಾಮ ಸೋಮಯಾಜಿ
ಪುಟ : ೧೬೮ ಬೆಲೆ : ರೂ. ೮೦
ಸಾಧನಾ ಪ್ರಕಾಶನ, ನಂ. ೧೨೦, ಮೊದಲನೇ ಮಹಡಿ, ಬಳೇಪೇಟೆ ಮುಖ್ಯ ರಸ್ತೆ, ಬೆಂಗಳೂರು - ೫೬೦ ೦೫೩

**ಕರ್ನಾಟಕ ಲೋಚನ**
(ಸಂಚಿಕೆ ೧-೨. ಷಾಣ್ಮಾಸಿಕ ವಿದ್ವತ್ ಪತ್ರಿಕೆ)
ಸಂ. ಪ್ರೊ|| ಜಿ. ಅಬ್ದುಲ್ ಬಷೀರ್
ಪುಟ : ೯೪ + ೬೬ ಬೆಲೆ : ಬಿಡಿ ಸಂಚಿಕೆ ರೂ. ೩೦
ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಎಂ. ವಿ. ಸೀ. ಸಂಶೋಧನ ಕೇಂದ್ರ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ ಬೆಂಗಳೂರು - ೫೬೦ ೦೧೯

**ವಚನಗಳಲ್ಲಿ ವೀರಶೈವ** ಡಾ|| ಮಲ್ಲಿಕಾರ್ಜುನ ಪರಡ್ಡಿ
ಪುಟ : ೧೪೮ ಬೆಲೆ : ರೂ. ೫೦
ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೂಡ - ೫೮೫ ೪೩೭
ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ.

**ಶರಣ ಸಂಸ್ಕೃತಿ** ಡಾ|| ಸರಜೂ ಕಾಟ್ಕರ್
ಪುಟ : ೧೧೬ ಬೆಲೆ : ರೂ. ೭೫
ಶ್ರೀ ಕಾರಂಜಿ ಮಠ ಪ್ರಕಾಶನ, ಕಾರಂಜಿ ಮಠ ಶಿವಬಸವನಗರ, ಬೆಳಗಾವಿ

**ಡಾ|| ಸರಜೂ ಕಾಟ್ಕರ್ ಅವರ ಕೃತಿಗಳು**

**ವೃತ್ತಾಂತ** (ಕಥಾಸಂಕಲನ) ಸರಜೂ ಕಾಟ್ಕರ್
ಪುಟ : ೧೦೮ ಬೆಲೆ : ರೂ. ೬೦

**ಇತ್ಯಾದಿ ಇತ್ಯಾದಿ** (ಲೇಖನ ಸಂಗ್ರಹ) ಸರಜೂ ಕಾಟ್ಕರ್
ಪುಟ : ೧೨೮ ಬೆಲೆ : ರೂ. ೭೫

**ಬೆಳ್ಳಿ ಸಾಲ್ಮನ್** (ಕವಿತೆಗಳು) ಸರಜೂ ಕಾಟ್ಕರ್
ಪುಟ : ೮೦ ಬೆಲೆ : ರೂ. ೫೦

**ಅತೀತ** (ಕಥಾ ಸಂಕಲನ) ಸರಜೂ ಕಾಟ್ಕರ್
ಪುಟ : ೧೨೮ ಬೆಲೆ : ರೂ. ೭೦

**ಸಿನೇಮಾ ಸಿನೇಮಾ** ಸರಜೂ ಕಾಟ್ಕರ್
ಪುಟ : ೧೧೨ ಬೆಲೆ : ರೂ. ೬೦

**ಒಂದೂರಿನಲ್ಲಿ ಒಬ್ಬ ರಾಜನಿದ್ದ** (ಕಾದಂಬರಿ) ಮಾಧವಿ ದೇಸಾಯಿ, ಅನು : ಸರಜೂ ಕಾಟ್ಕರ್
ಪುಟ : ೯೬ ಬೆಲೆ : ರೂ. ೬೦

**ಕನ್ನಡವೇ ಸತ್ಯ ಕನ್ನಡವೇ ನಿತ್ಯ** ಸಂ. : ಸರಜೂ ಕಾಟ್ಕರ್
ಪುಟ : ೧೨೦ ಬೆಲೆ : ರೂ. ೭೦

**ಬಹಿಷ್ಕೃತ ಕತೆಗಳು** ಸಾದತ್ ಹಸನ್ ಮಂಟೋ
ಅನು : ಸರಜೂ ಕಾಟ್ಕರ್
ಪುಟ : ೮೮ ಬೆಲೆ : ರೂ. ೫೦

**ಆಷಾಢಸ್ಯ ಪ್ರಥಮ ದಿವಸೇ** (ಲೇಖನಗಳು) ಸರಜೂ ಕಾಟ್ಕರ್
ಪುಟ : ೧೧೨ ಬೆಲೆ : ರೂ. ೭೫

ಮೇಲಿನ ಒಂಬತ್ತು ಪುಸ್ತಕಗಳ ಪ್ರಕಾಶಕರು
**ರೂಪ ಪ್ರಕಾಶನ**, ೨೪೦೬, ೨೪೦೭/ಕೆ-೧, ೧ನೇ ಕ್ರಾಸ್, ಹೊಸ ಬಂಡಿಕೇರಿ, ಮೊದಲನೇ ಅಡ್ಡರಸ್ತೆ, ಕೆ. ಆರ್. ಮೊಹಲ್ಲಾ, ಮೈಸೂರು - ೫೭೦ ೦೦೪

೧೬. ಎಲ್ಲಾ ಆಸ್ತಿಯನ್ನು ಕುಟುಂಬದ - ಮಹಿಳೆಯರ ಹೆಸರಿನಲ್ಲಿ ಜಂಟಿಯಾಗಿ ನೋಂದಾಯಿಸಬೇಕು.

೧೭. ಎಲ್ಲಾ ವಿಷಯದಲ್ಲೂ ಸಮಾನ ಪರಿಹಾರ ಸಿಗಬೇಕು.

೧೮. ಅನಕ್ಷರಸ್ಥ ಮಹಿಳೆಯರು ಅಕ್ಷರಸ್ಥರಾಗಲು ತಕ್ಷಣ ಕಾರ್ಯಕ್ರಮ ರೂಪಿಸಬೇಕು.

೧೯. ಭಾರತದ ಹೊರಗೆ ಮತ್ತು ಒಳಗೆ ಗ್ರಾಮಪಂಚಾಯತಿ ಮಹಿಳಾ ಪ್ರತಿನಿಧಿಗಳನ್ನು ವಿನಿಮಯವಾಗಿ ಕಳುಹಿಸುವ ವ್ಯವಸ್ಥೆಯನ್ನು ರೂಪಿಸಬೇಕು.

೨೦. ದಕ್ಷರಾಗಿ ಕೆಲಸ ಮಾಡುವ ಮಹಿಳಾ ಪ್ರತಿನಿಧಿಗಳಿಗೆ ವಿಶೇಷ ಪ್ರಶಸ್ತಿಗಳನ್ನು ನೀಡಬೇಕು.

೨೧. ರಾಜ್ಯ, ಜಿಲ್ಲಾ ಮತ್ತು ರಾಷ್ಟ್ರಮಟ್ಟದಲ್ಲಿ ಮಹಿಳಾ ಸಬಲೀಕರಣ ದಿನವನ್ನು ಆಚರಿಸಲು ವಿಶೇಷ ಹಣವನ್ನು ನೀಡಬೇಕು.

**ಒಳಮೀಸಲಾತಿ - ಹಾಗೆಂದರೇನು ?**

ಸಂಸತ್ತಿನಲ್ಲಿರುವ ವಿಧೇಯಕದಲ್ಲಿ ಶೇಕಡ ೩೩.೩೩ರಷ್ಟು ಮೀಸಲಾತಿಯನ್ನು ಮಹಿಳೆಯರಿಗಾಗಿ ಶಾಸನಸಭೆಗಳಲ್ಲಿ ಮತ್ತು ಸಂಸತ್ತಿನಲ್ಲಿ ನೀಡಲು ಮಂಡಿಸಲಾಗಿದೆ. ಎರಡು ದೊಡ್ಡ ಮತ್ತು ಸಶಕ್ತ ಪಕ್ಷಗಳಾಗಿರುವ ಕಾಂಗ್ರೆಸ್ ಮತ್ತು ಭಾರತೀಯ ಜನತಾಪಕ್ಷ ಈ ವಿಧೇಯಕದ ಪರವಾಗಿ ಇದ್ದು, ತಾವು ಮಹಿಳಾಪರ ಪಕ್ಷಗಳೆಂದು ಗುರುತಿಸಿಕೊಂಡಿವೆ. ಆದರೆ ಆಗಲೇ ಹೇಳಿದಂತೆ ಕೆಲವು ಪಕ್ಷಗಳ ಗಂಭೀರ ತಕರಾರು ಏನೆಂದರೆ ಶೇಕಡ ೩೩ರಷ್ಟು ಮೀಸಲಾತಿಯನ್ನು ಇಟ್ಟರೆ ಬರಿಯ ಮೇಲು ವರ್ಗದ, ಶ್ರೀಮಂತರ ಗುಂಪಿಗೆ ಸೇರಿದ ಮಹಿಳೆಯರ ಪಾಲಾಗುತ್ತದೆ; ಆದುದರಿಂದ ಈ ಶೇಕಡ ೩೩ ಮೀಸಲಾತಿಯಲ್ಲಿ ಹಿಂದುಳಿದ ಮಹಿಳೆಯರಿಗಾಗಿ ಅರ್ಧದಷ್ಟಾದರೂ ಮೀಸಲಾತಿಯನ್ನು ನೀಡಬೇಕು, ಆಗ ಮಾತ್ರ ಸಾಮಾಜಿಕ ನ್ಯಾಯ ನೀಡಿದಂತಾಗುತ್ತದೆ, ಎಂದು.

ಅವರ ವಾದವನ್ನು ಸಂಪೂರ್ಣವಾಗಿ ತಳ್ಳಿಹಾಕುವಂತಿಲ್ಲ, ಆದರೆ ಸಂವಿಧಾನವನ್ನು ರಚಿಸುವಾಗ ನಿಮ್ನ ಜಾತಿ (ಎಸ್.ಸಿ.) ಮತ್ತು ನಿಮ್ನ ವರ್ಗ (ಎಸ್.ಟಿ.)ದವರಿಗೆ ಮಾತ್ರ ಸಂಸತ್ತು ಮತ್ತು ವಿಧಾನಸಭೆಗಳಲ್ಲಿ ಮೀಸಲಾತಿಯನ್ನು ನಿಗದಿಪಡಿಸಿತು. ಆಗ ಸಂವಿಧಾನಾತ್ಮಕ ಸಭೆಯಲ್ಲಿ ಸರೋಜಿನಿ ನಾಯ್ಡು, ರೇಣುಕಾ ರೇ, ಹನ್ಸಾ ಮೆಹತಾ, ರಾಜಕುಮಾರಿ ಅಮೃತ್ ಕೌರ್ ಇನ್ನಿತರ ಪ್ರಭಾವಿ ಮಹಿಳಾ ಪ್ರತಿನಿಧಿಗಳಿದ್ದರು. ಆದರೂ ಮಹಿಳಾ ಮೀಸಲಾತಿಯ ಬಗ್ಗೆ ವಿಶೇಷ ಚರ್ಚೆಯಾಗದಿದ್ದುದು ಸೋಜಿಗವೇ.

ಆದರೆ ಯಾದವರುಗಳ ಸಂದೇಹಕ್ಕೆ ಆಸ್ಪದವಿಲ್ಲ. ಶೇಕಡ ೩೩ರಷ್ಟು ಮಹಿಳೆಯರಿಗೆ ಮೀಸಲಾತಿ ನೀಡಿದರೆ ಎಲ್ಲವೂ ಮುಂದುವರಿದ ಮಹಿಳೆಯರ ಪಾಲಾಗುತ್ತದೆ ಎಂಬುದು ಸತ್ಯಕ್ಕೆ ದೂರವಾದ ಸಂಗತಿ. ಯಾಕೆಂದರೆ, ಈಗಲೂ ಸಹ ಶಾಸನಸಭೆ ಮತ್ತು ಸಂಸತ್ತಿನಲ್ಲಿ ಎಲ್ಲ ಮುಂದುವರಿದ ಜನಾಂಗದವರೇ ಆಯ್ಕೆಯಾಗಿದ್ದಾರೆಯೇ – ಪ್ರಜಾಪ್ರಭುತ್ವದಲ್ಲಿ ಹಾಗೆ ಆಗುವುದಿಲ್ಲ. ಅನೇಕ ಕ್ಷೇತ್ರಗಳಲ್ಲಿ ಹಿಂದುಳಿದ ಜನಾಂಗದವರೇ ಆಯ್ಕೆಯಾಗುತ್ತಿದ್ದಾರೆ. ಎಲ್ಲ ಪಕ್ಷಗಳು ಯಾವ ಜನಾಂಗ/ಕೋಮಿಗೆ ಸೇರಿದ ಮಹಿಳೆಯರನ್ನು ನಿಲ್ಲಿಸಿದರೆ ಮಾತ್ರ ಯಾವ ಕ್ಷೇತ್ರಗಳಲ್ಲಿ ಗೆಲ್ಲಬಹುದು ಎಂದು ಲೆಖ್ಖಾಚಾರ ಹಾಕಿಯೇ ಹಾಕುತ್ತವೆ. ಆದುದರಿಂದ ಮಹಿಳಾ ಮೀಸಲಾತಿಯಲ್ಲಿ ಒಳಮೀಸಲಾತಿ ತರದಿದ್ದರೆ ಅಂಥಾ ಆಪತ್ತೇನೂ ಸಂಭವಿಸುವುದಿಲ್ಲ. ಆದರೆ ನಿಜಕ್ಕೂ ಒಳಮೀಸಲಾತಿ ಬೇಕಾದ್ದು ನಿಮ್ನ ಜಾತಿ ಮತ್ತು ನಿಮ್ನ ವರ್ಗಕ್ಕಾಗಿ ಮೀಸಲಾತಿ ಇಟ್ಟ ಕ್ಷೇತ್ರಗಳಲ್ಲಿ.

ಕರ್ನಾಟಕದ ನಾಲ್ಕು ವಿಧಾನಸಭಾ ಚುನಾವಣೆಗಳನ್ನು ಗಮನಿಸಬಹುದು :

| ಸಂಖ್ಯೆ | ವರ್ಷ | ಒಟ್ಟು ಮೀಸಲು | | ಗೆದ್ದ ಒಟ್ಟು ಮಹಿಳೆಯರು | |
|---|---|---|---|---|---|
| | | ನಿಮ್ನ ಜಾತಿ (ಎಸ್.ಸಿ.) | ನಿಮ್ನ ವರ್ಗ (ಎಸ್.ಟಿ.) | ನಿಮ್ನ ಜಾತಿ (ಎಸ್.ಸಿ.) | ನಿಮ್ನ ವರ್ಗ (ಎಸ್.ಟಿ.) |
| ೧. | ೧೯೮೯ | ೩೩ | ೦೨ | ೦೪ | ೦೧ |
| ೨. | ೧೯೯೪ | ೩೩ | ೦೨ | ೦೨ | ಇಲ್ಲ |
| ೩. | ೧೯೯೯ | ೩೩ | ೦೨ | ೦೧ | ೦೧ |
| ೪. | ೨೦೦೪ | ೩೩ | ೦೨ | ಇಲ್ಲ | ಇಲ್ಲ |

ಇತರೆ ಸಾಮಾನ್ಯ ಕ್ಷೇತ್ರಗಳಲ್ಲಿ ಒಳಮೀಸಲಾತಿ ಇಲ್ಲದಿದ್ದರೆ ಅದರಿಂದ ಹಿಂದುಳಿದ ವರ್ಗದವರಿಗೆ – ಆ ವರ್ಗದ ಮಹಿಳೆಯರಿಗೆ ತೊಂದರೆಯಾಗುವುದಿಲ್ಲ. ಕಾರಣ ಹಿಂದುಳಿದ ವರ್ಗದವರನ್ನು ಬಿಟ್ಟು ಇವತ್ತು ಯಾವ ಪಕ್ಷದವರೂ ರಾಜಕೀಯ ಮಾಡಲಾಗುವುದಿಲ್ಲ. ಆದುದರಿಂದ ಮಹಿಳಾ ಒಳಮೀಸಲಾತಿ ಇರಲಿ, ಇಲ್ಲದಿರಲಿ ಹಿಂದುಳಿದ ವರ್ಗದ ಮಹಿಳೆಯರಿಗೆ ಯಾವ ತೊಂದರೆಯೂ ಆಗುವುದಿಲ್ಲ. ಆದರೆ ನಿಮ್ನ ವರ್ಗ ಮತ್ತು ನಿಮ್ನ ಜಾತಿಗಳ ಮೀಸಲಾತಿಯಲ್ಲಿ ಮಹಿಳೆಯರಿಗಾಗಿ ಮೀಸಲಾತಿ ಇರಲೇಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದಾಗಿ ಮಹಿಳಾ ಮೀಸಲಾತಿ ಮಸೂದೆಯನ್ನು ವಿರೋಧಿಸುವುದು ತಪ್ಪು, ಅದು ಆರೋಗ್ಯಕರ ಅಲ್ಲ.

**ಅವಕಾಶ ಸಫಲವಾಗಬೇಕು**

ಮೀಸಲಾತಿ ಎನ್ನುವುದು ಬರಿಯ ಸ್ಥಾನಮಾನವನ್ನು ಪಡೆದುಕೊಳ್ಳುವ ಅವಕಾಶವಷ್ಟೇ. ಆದರೆ ಅನನುಭವಿಗಳಿಗೆ, ಅಜ್ಞಾನಿಗಳಿಗೆ, ದಡ್ಡರಿಗೆ ಚರ್ಚೆಯಲ್ಲಿ ಕುಳಿತುಕೊಳ್ಳಲು ಆಸ್ಪದ ಇರಬಾರದು. ಹಾಗಾದರೆ ಇಡೀ ವ್ಯವಸ್ಥೆಯೇ ಕುಸಿದುಬೀಳುತ್ತದೆ, ಆಡಳಿತ ಸೋಲುತ್ತದೆ. ಇದರಿಂದಾಗಿ, ಅವಕಾಶ ಸಫಲವಾಗಬೇಕಾದರೆ ಮಹಿಳೆಯರು ರಾಜಕೀಯಕ್ಕೆ ಬೇಕಾದ ಜಾಣ್ಮೆ, ಕರ್ತೃತ್ವ ಶಕ್ತಿ, ಸಾರ್ವಜನಿಕ ಸಂಪರ್ಕ, ಸಂವಿಧಾನದ ಪರಿಚಯ, ಇತರೆ - ವಿಷಯಗಳನ್ನು ಅರಿತು ಸಬಲರಾಗಬೇಕು. ಹೀಗೆ ಮಹಿಳೆಯರು ಸಬಲರಾಗಲು, ರಾಜಕೀಯದಲ್ಲಿ ಭಾಗವಹಿಸಲು ಆಸಕ್ತರಾದ ಮಹಿಳೆಯರಿಗೆ ತರಬೇತಿ ನೀಡಲು 'ಎಸ್.ಪಿ. ಜೈನ್ ಆಡಳಿತ ಮತ್ತು ಸಂಶೋಧನ ಕೇಂದ್ರ'ವು ಆರು ತಿಂಗಳ ಕೋರ್ಸ್‌ಅನ್ನು ಆರಂಭಿಸಿದೆ. ಮಹಾರಾಷ್ಟ್ರದಲ್ಲಿ ಮಹಿಳಾ ರಾಜಸತ್ತೆ ಆಂದೋಲನವು ಮಹಿಳಾ ಪ್ರತಿನಿಧಿಗಳಿಗೆ ವಿಶೇಷ ತರಬೇತಿಯನ್ನು ನೀಡುತ್ತಿದೆ.

ಮಹಿಳೆಯರ ಸಬಲೀಕರಣಕ್ಕೆ ಮತದಾರರ ಸಂಪೂರ್ಣ ಬೆಂಬಲ ಬೇಕು. ಹೀಗೆ ಪ್ರತಿನಿಧಿಗಳಾಗಿ ಆಯ್ಕೆಯಾದಾಗ ಅವರು ತಮ್ಮ ವಿಶೇಷ ಕೊಡುಗೆಗಳ ಮೂಲಕ ದೇಶವು ಅಭಿವೃದ್ಧಿ ಹೊಂದಲು ಸಂಪೂರ್ಣ ಸಹಕಾರ ನೀಡಿ ಮೀಸಲಾತಿಯ ಸಫಲತೆಯನ್ನು ಪಡೆಯಬಹುದಾಗಿದೆ.

**ಡಾ|| ಜಯಪ್ರಕಾಶ ಮಾವಿನಕುಳಿ**
ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ, - ೫೭೪ ೧೦೪ ಉಡುಪಿ ಜಿಲ್ಲೆ

## ಅಭಿನಂದನೆಗಳು


ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ ಅವರ 'ಭೌತವಾದೀಯ ಚಿಂತನೆಗಳು' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತು ನೀಡುವ ೨೦೦೮ರ ಡಾ|| ಎಚ್. ಎನ್. ದತ್ತಿನಿಧಿ ಪ್ರಶಸ್ತಿ ಲಭಿಸಿದೆ.

ಡಾ|| ರಹಮತ್ ತರೀಕೆರೆ ಅವರ 'ಧರ್ಮಪರೀಕ್ಷೆ' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಡಾ|| ಹಾಮಾನಾ ಪ್ರಶಸ್ತಿ (೨೦೦೮) ಮತ್ತು ಶಿವಮೊಗ್ಗ ಕರ್ನಾಟಕ ಸಂಘದ ಪಿ. ಲಂಕೇಶ್ ಪ್ರಶಸ್ತಿ (೨೦೦೮) ಲಭಿಸಿವೆ.

ಲೇಖಕರಿಗೆ ನವಕರ್ನಾಟಕದ ಅಭಿನಂದನೆಗಳು ಸಲ್ಲುತ್ತವೆ.


ಡಾ|| ರಹಮತ್ ತರೀಕೆರೆ

# ಆಸ್ಟ್ರೇಲಿಯಾ – ಒಂದು ನೋಟ

ಮಹಾಂತಯ್ಯ ಎಂ. ಹಿರೇಮಠ

ಮಾನವನ ಜೀವನದಲ್ಲಿ ಸುಖ ಸಂತೋಷಗಳನ್ನು ಸಮೃದ್ಧವಾಗಿ ಕಾಣಲು ಪಶ್ಚಿಮದ ರಾಷ್ಟ್ರಗಳನ್ನು ನಾವು ಹುಡುಕುತ್ತಿದ್ದುದು ನಿಜ. ಆದರೂ ಪೂರ್ವದ ಆಸ್ಟ್ರೇಲಿಯಾದಂಥ ರಾಷ್ಟ್ರದಲ್ಲೂ ಅಂಥ ಸಮೃದ್ಧ ಜೀವನಕ್ಕೆ ಕೊರತೆಯಿಲ್ಲವೆಂಬ ಅಂಶವನ್ನು ಎತ್ತಿ ತೋರಿಸಲು ಸಾಧ್ಯವಾಯಿತು.

ಎರಡನೆಯ ಸಲ ಆಸ್ಟ್ರೇಲಿಯಾ ಪ್ರವಾಸ ಕೈಕೊಂಡಾಗ ನನ್ನ ಕುತೂಹಲ ಇಮ್ಮಡಿಯಾಗಿತ್ತು. ಅಲ್ಲಿಯ ವಾಸ್ತವಿಕ ಚಿತ್ರಣ ಸ್ಪಷ್ಟವಾಗಿ ಗೋಚರಿಸಿತು. ಒಂದೆರಡು ವಿಷಯಗಳನ್ನು ಕುರಿತು ನಾವು ಗ್ರಹಣ ಮಾಡಿಕೊಳ್ಳಬೇಕಾದ ಪ್ರಸಂಗ ಬಂದೇ ಬರುತ್ತದೆ. ಅಂಥ ಸುಂದರವಾದ ಹಾಗೂ ಪ್ರಶಾಂತವಾದ ನಾಡಿನ ಬಗ್ಗೆ ತುಂಬ ಗೌರವವು ಮೂಡಿಬಂದಿತು.

**ಆಸ್ಟ್ರೇಲಿಯಾ ಖಂಡದ ಸ್ಥೂಲ ಪರಿಚಯ**

ಸುಮಾರು ೫೬ ಸಾವಿರ ವರ್ಷಗಳ ಪ್ರಾಚೀನತೆಯನ್ನು ಹೊಂದಿದ ಈ ಭೂ ಖಂಡವು ತನ್ನದೇ ಆದ ಸಂಸ್ಕಾರ ಹಾಗೂ ಅಸ್ತಿತ್ವವನ್ನು ಉಳಿಸಿಕೊಂಡುಬರಲು ಅದು ಒಂದು ನಡುಗಡ್ಡೆಯಾಗಿರುವುದರಿಂದ ಸಾಧ್ಯವಾಗಿರಬಹುದು. ಇದು ಪ್ರಪಂಚದಲ್ಲಿಯೇ ಆರನೆಯ ಸ್ಥಾನವನ್ನೂ ಹೊಂದಿದ್ದು ಪೂರ್ವ-ಪಶ್ಚಿಮ ೪೦ ಸಾವಿರ ಕಿ. ಮೀ. ಉದ್ದ ಮತ್ತು ದಕ್ಷಿಣೋತ್ತರ ೩೭ ಸಾವಿರ ಕಿ. ಮೀ. ಅಗಲ ವಿಸ್ತೀರ್ಣದ ಬಹುದೊಡ್ಡ ನಡುಗಡ್ಡೆ. ಭಾರತದ ಎರಡರಷ್ಟಕ್ಕಿಂತ ಹೆಚ್ಚು ಹಾಗೂ ಇಂಗ್ಲೆಂಡಿನ ೩೨ರಷ್ಟು ದೊಡ್ಡ ಪ್ರದೇಶವನ್ನು ಹೊಂದಿದ್ದರೂ ಜನವಸತಿ ಮಾತ್ರ ೨೧ ಮಿಲಿಯನ್ (೨.೧ ಕೋಟಿ). ನಮ್ಮ ಕರ್ನಾಟಕದ ಅರ್ಧಕ್ಕಿಂತಲೂ ಸ್ವಲ್ಪ ಕಡಿಮೆಯೆಂದು ಹೇಳಬಹುದು. ಇಷ್ಟೊಂದು ದೊಡ್ಡ ಭೂವಲಯವಿದ್ದರೂ ಅದರಲ್ಲಿ ಶೇಕಡಾ ೬ರಷ್ಟು ಮಾತ್ರ ಕೃಷಿಗೆ ಯೋಗ್ಯವಾದುದು. ಇನ್ನುಳಿದ ಭಾಗವು ದಟ್ಟವಾದ ಕಾಡುಗಳು, ಬೆಟ್ಟಗಳು, ಬಂಜರು, ಮರುಭೂಮಿ ಮೊದಲಾದ ಪ್ರದೇಶಗಳನ್ನು ಹೊಂದಿದೆ.

ಇಂದು ಆಸ್ಟ್ರೇಲಿಯಾ ದೇಶವು ವಿದೇಶಿ ನಿವಾಸಿಗಳಿಂದ ಕೂಡಿದ ರಾಷ್ಟ್ರವಾಗಿದೆ. ಕ್ರಿ. ಶ. ೧೭೮೮ರಿಂದ ಯೂರೋಪಿಯನ್ನರು ಇಲ್ಲಿಗೆ ಹಿಂಡುಹಿಂಡಾಗಿ ಬರಲು ಪ್ರಾರಂಭಿಸಿದರು. ಅವರಲ್ಲಿ ೨೦೦ ದೇಶಗಳಿಂದ ಬಂದ ಲಕ್ಷಾವಧಿ ವಿದೇಶೀಯರಲ್ಲಿ ಬ್ರಿಟನ್, ಐರ್‌ಲ್ಯಾಂಡ್, ಜರ್ಮನಿ, ಸ್ಕಾಟ್‌ಲ್ಯಾಂಡ್, ಇಟಲಿ, ಪೋಲಂಡ್, ನೆದರಲ್ಯಾಂಡ್ ಮತ್ತು ಯಹೂದಿ ಗುಂಪುಗಳಿಂದ ಬಂದವರು ಪ್ರಮುಖರು. ಇವರೆಲ್ಲ ಸೇರಿ ಈ ಹೊಸ ರಾಷ್ಟ್ರವನ್ನು ಕಟ್ಟಲು ತುಂಬ ಶ್ರಮಿಸಿದರು ಹಾಗೂ ಸಹಾಯವನ್ನೂ ಸಲ್ಲಿಸಿದರು. ಈ ವಿದೇಶೀಯರು ಬರುವ ಪೂರ್ವದಲ್ಲಿ ಅಲ್ಲಿಯ ಮೂಲನಿವಾಸಿಗಳಾದ ಆಬೋರಿಜಿನಲ್‌ಗಳ ಜನಸಂಖ್ಯೆಯು ಸುಮಾರು ಏಳುವರೆ ಲಕ್ಷದಷ್ಟಿತ್ತು. ಆದರೆ ಅವರು ತಮ್ಮತಮ್ಮೊಳಗಿನ ಮತಭೇದದ ಹೊಡೆದಾಟದಿಂದಲೋ, ರೋಗರುಜೆಗಳಿಂದಲೋ ವಿನಾಶ ಹೊಂದಿ ಸುಮಾರು ೪ಲಕ್ಷ ೮೩ ಸಾವಿರದಷ್ಟು ಜನ ಉಳಿಯುವಂತಾಯ್ತು ಎಂದು ಹೇಳಲಾಗುತ್ತದೆ. ಆದರೆ ಅವರನ್ನೆಲ್ಲಾ ಯೋಜನಾ ಬದ್ಧವಾಗಿ ಸಾಯಿಸಲಾಯಿತೆಂಬುದಕ್ಕೆ ಪುರಾವೆಗಳಿವೆ. ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಸುಮಾರು ೫೦ಸಾವಿರ ಬ್ರಿಟನ್‌ರು ಈ ದೇಶಕ್ಕೆ ಆಗಮಿಸಿದರು. ಅವರಲ್ಲಿ ಬಹುತೇಕ ಅಪರಾಧಿಗಳು; ಶಿಕ್ಷೆಯ ರೂಪದಲ್ಲಿ ಅವರನ್ನು ಈ ಖಂಡಕ್ಕೆ ಅಟ್ಟಲಾಗಿತ್ತು. ವರುಷಕಳೆದಂತೆ ಆ ಸಂಖ್ಯೆ ಇನ್ನೂ ಹೆಚ್ಚುತ್ತ ಹೋಯಿತು. ಇದು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯ ಮೇಲೆ ಹೆಚ್ಚು ಪರಿಣಾಮ ಬೀರುವಂತಾಯ್ತು. ಬ್ರಿಟನ್ ಮತ್ತು ಐರ್ಲಂಡ್ ದೇಶಗಳ ಸಂಸ್ಕೃತಿ ವಿಶೇಷವಾಗಿ ಈ ಹೊಸ ರಾಷ್ಟ್ರಕ್ಕೆ ತಳಹದಿಯಾಗಿ ಪರಿಣಮಿಸಿತು.

**ವಲಸೆಗಾರರ ನಾಡು**

ಎರಡನೆಯ ಜಾಗತಿಕ ಯುದ್ಧದಿಂದ ಲಕ್ಷಾವಧಿ ಜನರು ನಿರಾಶ್ರಿತರಾಗಿ ತಮ್ಮ ತಾಯಿನಾಡಿನಿಂದ ಸ್ಥಳಾಂತರಗೊಂಡು ಯೋಗ್ಯವಾದ ನೆಲೆಯನ್ನು ಕಾಣಲು ಹೊರಟಾಗ ಅದೇ ಸಮಯಕ್ಕೆ ಆಸ್ಟ್ರೇಲಿಯಾದಲ್ಲಿ ಕೂಲಿಗಳ ಕೊರತೆ ಅತಿಯಾಗಿದ್ದುದನ್ನು ಗಮನಿಸಿ ಅವರೆಲ್ಲರೂ ಇಲ್ಲಿಗೆ ಬರಲು ಸಾಧ್ಯವಾಯಿತು. ಆಗ

ಇಲ್ಲಿಯ ಜನರು ಕಷ್ಟ ಸಹಿಷ್ಣುಗಳಾದಂತೆ ಶಾಂತಿಪ್ರಿಯರು. (ಈಚೆಗೆ ಹೆಚ್ಚಾಗಿ ವರದಿಯಾಗುತ್ತಿರುವ ಜನಾಂಗೀಯ ದ್ವೇಷದ ಹಿನ್ನೆಲೆಯಲ್ಲಿನ ಹಿಂಸೆ ತೀರಾ ಹೊಸದಾದುದೇನಲ್ಲ.) ಮತ್ತು ಕಲೆಯ ಆರಾಧಕರು. ಎಲ್ಲ ಕಡೆಗೂ ಸೌಂದರ್ಯವನ್ನು ಅಪೇಕ್ಷೆಪಡುವವರು. ತಾವು ವಾಸಿಸುವ ಮನೆ ಅರಮನೆಯಂತಿರಬೇಕು. ಅದಕ್ಕೆ ಸುಂದರವಾದ ನಂದನವಿರಬೇಕು. ಹೆಚ್ಚು ಎತ್ತರದಲ್ಲಿದ್ದರೆ ಇನ್ನೂ ಚೆನ್ನ. ಸಾಗರದ ದಡದಲ್ಲಿದ್ದರೂ ಒಳ್ಳೇ ವೈಭವಪೂರ್ಣ ಜೀವನ ಎಂದು ಹಲುಬುತ್ತಾರೆ. ಪ್ರತಿಯೊಂದು ಬೀದಿಗೂ ಒಂದೆರಡು ಸಾರ್ವಜನಿಕ ಉದ್ಯಾನಗಳಿರುವದು ಸಾಮಾನ್ಯ.



ಆಸ್ಟ್ರೇಲಿಯಾದಲ್ಲಿ ಜನಸಂಖ್ಯೆಯ ಬೆಳವಣಿಗೆಗಾಗಿ ಮತ್ತು ದೇಶದ ಉತ್ತಮ ಭವಿಷ್ಯಕ್ಕಾಗಿ ಅದು ಅಗತ್ಯವೂ ಅನಿಸಿತ್ತು. ಆದ್ದರಿಂದಲೇ ಈ ದೇಶಕ್ಕೆ ೧೯೪೫ ರಿಂದ ೬.೫ ಲಕ್ಷ ಜನರು ಬಂದು ಕುಟುಂಬ ವ್ಯವಸ್ಥೆ ಮಾಡಿಕೊಂಡು ತಮ್ಮ ಹೊಸ ಜೀವನಕ್ಕೆ ನಾಂದಿ ಹಾಡುವಂತಾಯ್ತು. ಇವರೆಲ್ಲಾ ತಮ್ಮ ಸುಖ ಸಂಪತ್ತನ್ನು ಅಭಿವೃದ್ಧಿಗೊಳಿಸಲು ಕಷ್ಟಪಟ್ಟು ದುಡಿದರು.

ಸುಮಾರು ೫೦ ಸಾವಿರ ವರ್ಷಗಳಿಂದಲೂ ಈ ಖಂಡದಲ್ಲಿ ಮೂಲನಿವಾಸಿಗಳಾದ ಆಬೋರಿಜಿನಲ್‌ಗಳು ಅಲೆಮಾರಿಗಳಾಗಿ ಆ ದಟ್ಟವಾದ ಕಾಡುಗಳಲ್ಲಿ ಗುಂಪುಕಟ್ಟಿಕೊಂಡು ವಾಸಿಸುತ್ತ ಬಂದಿರುವ ಕುರುಹುಗಳು ದೊರೆಯುತ್ತವೆ. ಸಾವಿರಾರು ವರ್ಷಗಳ ಹಿಂದೆ ಜೀವಿಸಿದ್ದ ಭಯಾನಕವೆನಿಸಿದ ಪ್ರಾಣಿ ಪಕ್ಷಿಗಳ ಪಳೆಯುಳಿಕೆಗಳು ಇಂದು ಲಭ್ಯವಾಗಿ ನೋಡಲು ಸೋಜಿಗವನ್ನುಂಟುಮಾಡುತ್ತವೆ. ಈ ಅಲೆಮಾರಿ ಮೂಲ ನಿವಾಸಿಗಳು ಬರುಬರುತ್ತ ಸ್ಥಿರವಾಗಿ ಒಂದೆಡೆ ನೆಲೆಸಲು ತಮಗೆ ಬೇಕಾದಷ್ಟು ಕಾಡನ್ನು ಕಡಿದು ಕೃಷಿಮಾಡಿ ಬದುಕಲಾರಂಭಿಸಿದರು.

ಈ ದೇಶದ ದೊಡ್ಡ ದೊಡ್ಡ ನಗರಗಳೆಲ್ಲ ಕರಾವಳಿಯನ್ನಾಧರಿಸಿಯೇ ಬೆಳೆದಿವೆ. ಹಳ್ಳಿಗಳು ಒಳನಾಡಿನ ಹೊಲಗದ್ದೆಗಳಲ್ಲಿ ಸ್ಥಿರವಾದ ನೆಲೆಯನ್ನು ಕಂಡಿವೆ. ರೈತರು ನೂರಾರು ಎಕರೆಗಳಿಂದ ಸಾವಿರಾರು ಎಕರೆಗಳವರೆಗೂ ಭೂಮಿಯನ್ನು ಹೊಂದಿ ಕೃಷಿಯ ಎಲ್ಲ ಕೆಲಸಗಳನ್ನು ಹೊಸ ಹೊಸ ಯಂತ್ರಗಳ ಮೂಲಕವಾಗಿಯೇ ಸಾಗಿಸುತ್ತ ಬಂದಿರುವುದು ಒಂದು ಅದ್ಭುತ ಸಾಧನೆ. ನೂರಾರು ಆಳುಗಳ ಕಾರ್ಯವು ಒಬ್ಬಿಬ್ಬರಿಂದಲೇ ಸಾಗುವದುಂಟು. ಅದು ಅಲ್ಲಿ ಅನಿವಾರ್ಯ. ಏಕೆಂದರೆ, ಆಳುಗಳಿಗೆ ಕೊಡಬೇಕಾದ ಕೂಲಿಯು ತುಂಬ ದುಬಾರಿ. ಅವರು ಬೆಳೆದ ಧಾನ್ಯವಾಗಲಿ, ತರಕಾರಿಯಾಗಲಿ ಅಷ್ಟು ಉತ್ತಮವಲ್ಲದಿದ್ದರೂ ತುಂಬ ಅಗಾಧವಾದ ಫಸಲನ್ನು ಒದಗಿಸುವದು. ಅದನ್ನು ನೋಡುವದೆಂದರೆ ಕಣ್ಣಿಗೊಂದು ಹಬ್ಬ. ಅಷ್ಟು ರಮಣೀಯ. ಅವು ರೈತರಿಗೆ ಹೆಚ್ಚಿನ ಲಾಭ ತರುವಂಥ ಬೆಳೆಗಳು. ಅವುಗಳನ್ನು ಹೊಲಗಳಲ್ಲಿಯೇ ಸಂಗ್ರಹಿಸಿಡಲು ದೊಡ್ಡ 'ಸ್ಟೋರ್‌ಹೌಸ್'ಗಳೂ ಇವೆ. ಅಲ್ಲಿಂದಲೇ ವ್ಯವಹಾರ ನಡೆಯುತ್ತದೆ. ಅಲ್ಲಿ ದನಕರುಗಳನ್ನು ಯಾರೂ ಕೃಷಿ ಕೆಲಸಕ್ಕೆ ಉಪಯೋಗಿಸುವಂತಿಲ್ಲ. ದನಕರುಗಳ ಪೋಷಣೆ ಕೇವಲ ಮಾಂಸ ಉತ್ಪಾದನೆಗಾಗಿ. ಇದಕ್ಕಾಗಿ ದೊಡ್ಡ ಹುಲ್ಲುಗಾವಲುಗಳನ್ನು ಪ್ರತ್ಯೇಕವಾಗಿ ಇರಿಸಿ ದನಗಳನ್ನು ಬೆಳೆಸುವುದುಂಟು. ಅದೊಂದು ದೊಡ್ಡ ಉದ್ದಿಮೆಯೂ ಆಗಿದೆ. ರೈತರು ತಮ್ಮ ವೃತ್ತಿಯಲ್ಲಿ ಸರ್ವ ಸ್ವತಂತ್ರರು. ದನಗಳಿಗೆ ಸಾಂಕ್ರಾಮಿಕ ರೋಗ ತಗುಲಿದಾಗ ಸಾವಿರಾರು ಹಸುಗಳು, ಕರುಗಳು, ಒಂದೇ ದಿನದಲ್ಲಿ ಕೊಲ್ಲಲ್ಪಡುತ್ತವೆ. ಇದು ಕ್ರೌರ್ಯವೋ ಆರೋಗ್ಯದ ಕಾಳಜಿಯೋ ತಿಳಿಯುವುದಿಲ್ಲ.

**ಶಿಕ್ಷಣಕ್ಕೂ - ದುಡಿಮೆಗೂ ಇರುವ ನಂಟು**

ಈ ನಾಡಿನ ಶಿಕ್ಷಣ ವ್ಯವಸ್ಥೆಯೂ ಕೂಡ ಮೆಚ್ಚುವಂಥದು. ಸರಕಾರಿ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ವಿಶೇಷ ವ್ಯತ್ಯಾಸ ಕಾಣದು. ಪ್ರಾಥಮಿಕ ವರ್ಗದಿಂದಲೇ ಟ್ರೈಮಿಸ್ಟರ್ ಪದ್ಧತಿಯನ್ನು ಕಾಣಬಹುದು. ಅದು ಭಾರವಾದ ವಿದ್ಯಾರ್ಜನೆಯಾಗುವಂತಿಲ್ಲ. ಹೆಚ್ಚು ಪ್ರಾಯೋಗಿಕ ಶಿಕ್ಷಣದ ಪದ್ಧತಿಯೇ ಬಳಕೆ. ವೃತ್ತಿ ಶಿಕ್ಷಣಕ್ಕೂ





ಅಷ್ಟೇ ಪ್ರಾಧಾನ್ಯತೆ ಇದೆ. ಮಕ್ಕಳು ಹತ್ತನೆಯ ವರ್ಗ ಮುಗಿಸುವ ಹೊತ್ತಿಗೆ ಎಲ್ಲ ವೃತ್ತಿಗಳ ಬಗ್ಗೆ ಸಾಕಷ್ಟು ಜ್ಞಾನ ಹೊಂದಿರುತ್ತಾರೆ. ಅವರಿಗೆ ತಮ್ಮ ಭವಿಷ್ಯದ ಬಗ್ಗೆ ಚಿಂತನೆಯೂ ಆಗ ಪ್ರಾರಂಭವಾಗುತ್ತದೆ. ಮಗು ಹದಿನೆಂಟು ವಯಸ್ಸಿಗೆ ಬಂದರೆ ಸ್ವಾವಲಂಬಿಯೂ ಆಗುತ್ತದೆ. ಸರಕಾರವು ಅವರಿಗೆ ನೌಕರಿಯನ್ನು ಒದಗಿಸುತ್ತದೆ. ಕೆಲಸ ಲಭಿಸುವವರೆಗೆ ಅವರ ಜೀವನಕ್ಕಾಗುವಷ್ಟು ಧನಸಹಾಯವನ್ನು ನೀಡಲಾಗುತ್ತದೆ. ಹೀಗಾಗಿ ತಂದೆ ತಾಯಿಗಳಿಗೆ ಮಕ್ಕಳ ಭವಿಷ್ಯದ ಬಗ್ಗೆ ಚಿಂತೆಯಿರುವುದಿಲ್ಲ. ವಯಸ್ಸಿಗೆ ಬಂದ ಮಕ್ಕಳನ್ನು ಸ್ವತಂತ್ರವಾಗಿ ಬದುಕಲು ಬಿಡುವುದುಂಟು. ಪ್ರೌಢ ಶಾಲಾ ವ್ಯವಸ್ಥೆಯಲ್ಲಿಯೇ ಹೆಣ್ಣು ಗಂಡು ಪರಸ್ಪರ ಪ್ರೀತಿಗೊಳಗಾಗಿ ಸ್ನೇಹ ಬಲಿತಂತೆ ಮದುವೆಯ ರೂಪದಲ್ಲಿ ಪರಿವರ್ತನೆಗೊಂಡು ಇಬ್ಬರೂ ಒಂದಾಗಿ ದುಡಿದು ಸ್ವತಂತ್ರವಾಗಿ ಜೀವಿಸುವ ಹೊಣೆ ಹೊರುತ್ತಾರೆ. ವಿದ್ಯಾರ್ಥಿಗಳು ಹೆಚ್ಚು ಓದುವ ಮತ್ತು ಅನೇಕ ಪದವಿಗಳನ್ನು ಪಡೆಯುವ ಗುರಿ ಇಟ್ಟುಕೊಳ್ಳುವುದು ಇಲ್ಲಿ ಅಪರೂಪ. ದೊಡ್ಡ ಹುದ್ದೆಯಲ್ಲಿದ್ದರೂ ತೆರಿಗೆಯ ಕಡಿತದಿಂದ ಪಡೆಯುವ ವೇತನಕ್ಕಿಂತ ಸಣ್ಣ ವೃತ್ತಿಗಳಲ್ಲಿ ಪಡೆಯುವ ವೇತನದ ವ್ಯತ್ಯಾಸ ಗಮನಾರ್ಹವಾದುದಲ್ಲ.

ಸಾಮಾನ್ಯ ವೃತ್ತಿಗಳಾದ ಕಾರ್ಪೆಂಟರ್, ಪೇಂಟರ್, ಪ್ಲಂಬರ್, ಗಾರ್ಡನರ್, ಮೆಕ್ಯಾನಿಕ್, ಇಲೆಕ್ಟ್ರೀಶಿಯನ್, ಇತ್ಯಾದಿ ಕೆಲಸ ಕೈಗೊಳ್ಳುವ ಜನರೂ ತುಂಬ ಗಳಿಕೆ ಮಾಡುವದುಂಟು. ಗಂಟೆ ಲೆಕ್ಕದಲ್ಲಿ ವೇತನ ನಿಗದಿಗೊಳ್ಳುವದರಿಂದ ಕನಿಷ್ಠ ದುಡಿಮೆಯಿಂದ ಸಾಕಷ್ಟು ಸಂಪಾದಿಸಿ ಸುಖವಾಗಿ ಜೀವಿಸಬಹುದಾಗಿದೆ. ಇಲ್ಲಿಯ ಜನರು ವಾರದ ಐದು ದಿನ ದುಡಿದುದನ್ನು ಕೊನೆಯ ಎರಡು ದಿನಗಳ ರಜೆಗಳಲ್ಲಿ ಖರ್ಚುಮಾಡಿ ಸುಖಪಡುವದುಂಟು. ಅವರಲ್ಲಿ ಹಣವನ್ನು ಸಂಗ್ರಹಿಸಿಡಬೇಕೆನ್ನುವ ಪ್ರವೃತ್ತಿ ಇಲ್ಲ. ಹೆತ್ತವರನ್ನು ಮಕ್ಕಳಾಗಲಿ, ಮಕ್ಕಳನ್ನು ಹೆತ್ತವರಾಗಲಿ ಅವಲಂಬಿಸುವುದು ಅಪರೂಪ. ವೃದ್ಧಾಪ್ಯದಲ್ಲಿ ಎಲ್ಲ ಬಗೆಯ ಸಹಾಯ ಸಹಕಾರಗಳು ಸರಕಾರದಿಂದ ಲಭ್ಯ. ಹೀಗಾಗಿ ಯಾವ ಕುಟುಂಬವೂ ದುಃಖದಿಂದ ನರಳುವಂತಿಲ್ಲ.

**ಸುಂದರ - ನಿರ್ಮಲ - ಶಾಂತ**

ಇಲ್ಲಿಯ ಜನರು ಕಷ್ಟ ಸಹಿಷ್ಣುಗಳಾದಂತೆ ಶಾಂತಿಪ್ರಿಯರು (ಈಚೆಗೆ ಹೆಚ್ಚಾಗಿ ವರದಿಯಾಗುತ್ತಿರುವ ಜನಾಂಗೀಯ ದ್ವೇಷದ ಹಿನ್ನೆಲೆಯಲ್ಲಿನ ಹಿಂಸೆ ತೀರಾ ಹೊಸದಾದುದೇನಲ್ಲ) ಮತ್ತು ಕಲೆಯ ಆರಾಧಕರು. ಎಲ್ಲ ಕಡೆಗೂ ಸೌಂದರ್ಯವನ್ನು ಅಪೇಕ್ಷೆಪಡುವವರು. ತಾವು ವಾಸಿಸುವ ಮನೆ ಅರಮನೆಯಂತಿರಬೇಕು. ಅದಕ್ಕೆ ಸುಂದರವಾದ ನಂದನವಿರಬೇಕು. ಹೆಚ್ಚು ಎತ್ತರದಲ್ಲಿದ್ದರೆ ಇನ್ನೂ ಚೆನ್ನ. ಸಾಗರದ ದಡದಲ್ಲಿದ್ದರೂ ಒಳ್ಳೇ ವೈಭವಪೂರ್ಣ ಜೀವನ. ಪ್ರತಿಯೊಂದು ಬೀದಿಗೂ ಒಂದೆರೆಡು ಸಾರ್ವಜನಿಕ ಉದ್ಯಾನಗಳಿರುವದು ಸಾಮಾನ್ಯ. ಅಲ್ಲಿ ಅಡ್ಡಾಡಲು ಒಳ್ಳೇ ಬೀದಿಗಳಿವೆ. ಸುಂದರವಾದ ಆಸನಗಳು. ವ್ಯವಸ್ಥಿತವಾದ ಅಡುಗೆ ಮಾಡಿಕೊಳ್ಳುವ ಪರಿಕರಗಳು. ವ್ಯಾಯಾಮ ಮಾಡಲು ಹಲವಾರು ಬಗೆಯ ಸಾಧನಗಳು. ಎಲ್ಲವೂ ಶಿಸ್ತಿನಿಂದ ಕೂಡಿವೆ. ಎಲ್ಲಿ ನೋಡಿದರೂ ಹಚ್ಚ ಹಸಿರಿನ ಹುಲ್ಲು ಹಾಸು. ಅಲ್ಲಲ್ಲಿ ಬಣ್ಣ ಬಣ್ಣದ ಹೂ ಬಳ್ಳಿಗಳು, ಎತ್ತರವಾಗಿ ಬೆಳೆದ ಗಿಡಮರಗಳು. ಇವೆಲ್ಲವೂ ಒಳ್ಳೆಯ ವಾತಾವರಣವನ್ನು ಕಲ್ಪಿಸಿಕೊಡುತ್ತವೆ. ಆ ನಿಸರ್ಗವನ್ನು ಪರಿಶುದ್ಧವಾಗಿ ಕಾಯ್ದುಕೊಂಡುಬರುವ ಹೊಣೆ ಎಲ್ಲ ನಾಗರಿಕರದ್ದು.

ಪ್ರತಿಯೊಂದು ಬೀದಿಯೂ ವಿಶಾಲವಾಗಿದ್ದು, ನುಣ್ಣಗೆ ಹೊಳೆಯುತ್ತಿರುತ್ತದೆ. ಅಕ್ಕಪಕ್ಕದಲ್ಲಿ ಹುಲ್ಲಿನ ಲಾನ್ ಕೂಡ ಇರುವದರಿಂದ ಧೂಳಿನ ಪ್ರಶ್ನೆಯೇ ಇಲ್ಲ. ಅಲ್ಲಿ ಯಾವ ಮಾಲಿನ್ಯತೆಗೂ ಅವಕಾಶವೇ ಇಲ್ಲ. ವಾಯುಮಾಲಿನ್ಯ, ಜಲಮಾಲಿನ್ಯ, ಶಬ್ದಮಾಲಿನ್ಯಗಳಂಥ ಪರಿಸರ ಮಾಲಿನ್ಯ ಕಂಡು ಬರುವಂತಿಲ್ಲ. ಒಳ್ಳೇ ಆರೋಗ್ಯಪೂರ್ಣ ವಾತಾವರಣ. ಗಡಿಬಿಡಿಯೆನ್ನುವ ಜೀವನವಿಲ್ಲ. ಎಲ್ಲ ಕಾಲಗಳಲ್ಲೂ ಮಳೆ ಬೀಳುತ್ತದೆ. ಸೀಮಿತವಾದ ಮಳೆಗಾಲ ವೆಂಬುದಿಲ್ಲ. ಅಂತೆಯೇ ಶುಭ್ರವಾದ ಮತ್ತು ಪರಿಶುದ್ಧವಾದ ನಿಸರ್ಗವುಳ್ಳ ಪ್ರಕೃತಿ ಸಹಜವಾಗಿ ನಿರ್ಮಾಣಗೊಂಡಿದೆ. ಅದರ ಸ್ವಚ್ಛತೆ ಎಂಥವರನ್ನೂ ಮುಗ್ಧಗೊಳಿಸುವಂಥವು. ಅವರಿಗೆ ತಮ್ಮ ನಾಡಿನ ಬಗ್ಗೆ ಇರುವ 'ಅಭಿಮಾನ, ಪ್ರೀತಿ' ತುಂಬ ವಿಶಿಷ್ಟವಾದುವು.

ದೇಶದ ಅಭಿವೃದ್ಧಿಗಾಗಿ ಎಲ್ಲ ನಾಗರಿಕರೂ ತಮ್ಮ ಪಾಲಿನ ಸೇವೆಯನ್ನು ತುಂಬು ಉತ್ಸಾಹದಿಂದ ಹಾಗೂ ನಿಷ್ಠೆಯಿಂದ ಮಾಡಬಲ್ಲರು. ಅಲ್ಲಿಯ ನಾಗರಿಕತೆಯನ್ನು ಹೊಂದಲು ಕೆಲವು ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಲೇಬೇಕು. ಪ್ರಜಾರಾಜ್ಯದ ನಂಬಿಕೆಗಳಲ್ಲಿ ಸರ್ವರದೂ ಸಮಪಾಲು. ಎಲ್ಲ ಹಕ್ಕು ಮತ್ತು ಸ್ವಾತಂತ್ರ್ಯವನ್ನು ತುಂಬ ಗೌರವದಿಂದ ಕಾಣುವದುಂಟು.

ತಾನು ಹೇಗೆ ಜೀವಿಸಬೇಕೋ ಹಾಗೆಯೇ ಅನ್ಯರೂ ಜೀವಿಸಲು ಅವಕಾಶವಿದೆ. ತಾನು ಬೇರೆಯವರಿಗಿಂತ ಹೆಚ್ಚು ಎಂಬ ಭಾವನೆ ತೋರುವಂತಿಲ್ಲ. ದೇಶದ ನಾಗರಿಕರು ಯಾರೇ ಇರಲಿ, ಎಲ್ಲಿಯೇ ಹುಟ್ಟಿರಲಿ, ಅವರೊಡನೆ ಸ್ನೇಹ ಮಾಡುವದಾಗಲಿ, ಸಹಾಯ ಸಲ್ಲಿಸುವದಾಗಲಿ, ಅಲ್ಲದೆ ಅವರಿಂದ ಸಹಾಯ ಪಡೆಯುವದಾಗಲಿ ತಮ್ಮ ಕರ್ತವ್ಯವೆಂದು ಭಾವಿಸುತ್ತಾರೆ. ಒಗ್ಗೂಡಿ ಸೇವೆ ಸಲ್ಲಿಸುವದೇ ಅವರ ಮುಖ್ಯ ಧ್ಯೇಯವಾಗಿರುತ್ತದೆ. ಸಾರ್ವಜನಿಕರ ರಕ್ಷಣೆಗೆ ಸರಕಾರವೂ ಬೆಂಬಲಿಸುತ್ತದೆ.

**ಎಲ್ಲರೊಂದೆ ಎಂಬುದೊಂದೆ ಅವರ ಮಂತ್ರ**

ಕಾನೂನು ಪಾಲನೆಯಲ್ಲಿ ಆ ದೇಶದಲ್ಲಿರುವ ವ್ಯವಸ್ಥೆ ತುಂಬ ಮೆಚ್ಚಬೇಕಾದ್ದು. ಸರ್ವರಿಗೂ ಒಂದೇ ಕಾನೂನು. ಸಾಮಾನ್ಯ ವ್ಯಕ್ತಿಯೇ ಆಗಿರಲಿ, ದೊಡ್ಡ ಅಧಿಕಾರಿಯಾಗಿರಲಿ ಅಥವಾ ಮಂತ್ರಿ ಮಹೋದಯರೇ ಆಗಿರಲಿ, ಎಲ್ಲರೂ ಕಾನೂನನ್ನು ಎತ್ತಿ ಹಿಡಿಯಲೇಬೇಕು. ತಪ್ಪಿದರೆ ದಂಡ - ಶಿಕ್ಷೆ ಎದುರಿಸುವುದು ಅನಿವಾರ್ಯ. ಚುನಾವಣೆಗೆ ಮತದಾನ ಮಾಡದೇ ಹೋದರೆ ದಂಡ ತೆರಲೇಬೇಕು. ಅದು ಅಲ್ಲಿ ಅಷ್ಟು ಕಡ್ಡಾಯ!

ಒಂದು ಸಲ ಪ್ರಧಾನ ಮಂತ್ರಿಯವರ ಹೆಂಡತಿಯೇ ಕುಡಿದು ಕಾರನ್ನೋಡಿಸುವ ಸಂದರ್ಭದಲ್ಲಿ ಸಿಕ್ಕುಬಿದ್ದು ನ್ಯಾಯಾಲಯಕ್ಕೆ ಹಾಜರಾಗಿ ದಂಡ-ಶಿಕ್ಷೆ ಎರಡನ್ನೂ ಅನುಭವಿಸಬೇಕಾಗಿ ಬಂದದ್ದುಂಟು. ವ್ಯಕ್ತಿಯೂ ಮಿತಿಗಿಂತ ಹೆಚ್ಚಿನ ಕುಡಿತಕ್ಕೆ ಒಳಗಾದರೆ ಅದೊಂದು ದೊಡ್ಡ ಅಪರಾಧ ಮಾಡಿದಂತೆಯೆ. ರಾಜಕೀಯ ನಾಯಕರಾಗಿರುವಂಥ ಒಬ್ಬ ವ್ಯಕ್ತಿ ಇಂಥ ಶಿಕ್ಷೆಗೊಳಗಾದ ಪ್ರಸಂಗವನ್ನು ಮರುದಿನದ ಪೇಪರಿನಲ್ಲಿ ಓದಿ ನನಗೆ ತುಂಬ ಆಶ್ಚರ್ಯವಾಯಿತು. ಇಷ್ಟೇ ಅಲ್ಲದೆ, ಅಲ್ಲಿಯ ನ್ಯಾಯಾಂಗದ ಘನತೆಯ ಬಗ್ಗೆ ತುಂಬ ಗೌರವವೂ ಮೂಡಿಬಂದಿತು. ಆಗ ನಮ್ಮ ಭಾರತದ ಸ್ಥಿತಿಯನ್ನು ಸ್ಮರಿಸಿ ತಲೆ ತಗ್ಗಿಸುವಂತಾಯ್ತು. ಹೀಗೆ ನಿಯಮ ಪಾಲನೆ ಕಡ್ಡಾಯವಾಗಿರುವಾಗ ಪ್ರತಿಯೊಬ್ಬ ನಾಗರಿಕನೂ ಪ್ರಾಮಾಣಿಕವಾಗಿ ವರ್ತಿಸಲೇಬೇಕಾಗುತ್ತದೆ. ಪ್ರತಿಯೊಂದು ಕ್ಷೇತ್ರದಲ್ಲೂ ಪ್ರಾಮಾಣಿಕತೆಗೆ ವಿಶೇಷ ಮಹತ್ವವುಂಟು. (ಆದರೂ ಕಾರ್ಪೊರೇಟ್‌ಗಳು ಬೇರೆ ದೇಶಗಳಲ್ಲಿದ್ದಂತೆ ಇಲ್ಲಿಯೂ ಉನ್ನತ ಹಂತದಲ್ಲಿ ಭ್ರಷ್ಟಮಾರ್ಗ ಅನುಸರಿಸುತ್ತವೆ). ಯಾವುದೇ ಕೆಲಸ ಸರಕಾರದಿಂದಾಗಲಿ, ಖಾಸಗಿಯವರಿಂದಾಗಲಿ ಆಗುವುದಕ್ಕೆ ಯಾರೂ ಅನುಮಾನಿಸುವದಿಲ್ಲ. ಸಕಾಲಕ್ಕೆ ಎಲ್ಲವೂ ಪೂರ್ಣಗೊಂಡು ಕೈ ಸೇರುತ್ತವೆ. ಯಾರ ಪ್ರಭಾವವೂ ಬೇಕಿಲ್ಲ. ಚಿಕ್ಕಪುಟ್ಟ ವ್ಯವಹಾರಗಳಲ್ಲಿ ಭ್ರಷ್ಟಾಚಾರ ತಲೆಹಾಕುವುದಿಲ್ಲ.

ಆಸ್ಟ್ರೇಲಿಯನ್ನರ ಕರ್ತವ್ಯದಕ್ಷತೆ, ಪ್ರಾಮಾಣಿಕತೆ ಹಾಗೂ ನಿಯಮಪಾಲನೆಗಳಂಥ ಅಮೂಲ್ಯವಾದ ಸದ್ಗುಣಗಳನ್ನು ಅಳವಡಿಸಿಕೊಂಡುಬಂದರೆ ಯಾವ ದೇಶವಾದರೂ ಪ್ರಗತಿಯನ್ನು ಕಾಣಲು ಯಾಕೆ ಸಾಧ್ಯವಾಗುವುದಿಲ್ಲ? ನಾವು ಒಳ್ಳೇ ಗುಣಗಳನ್ನು ಆಯ್ದುಕೊಳ್ಳೋಣ. ಇದು ಯುವಕರಿಗೆ ಅಪಥ್ಯವಾಗಲು ಸಾಧ್ಯ. ಆದರೆ ಅವರ ಹಾಡು, ಕುಣಿತ, ಅರೆಬೆತ್ತಲು ಪ್ರದರ್ಶನದಂಥ ಆಚರಣೆಗಳು ತುಂಬ ಮೆಚ್ಚುಗೆಯಾಗಬಹುದು. ಆದರೆ ಒಳಿತನ್ನಷ್ಟೇ ಮೈಗೂಡಿಸಿಕೊಳ್ಳೋಣ.

**ಭಾರತೀಯರು ಕಲಿಯಬೇಕಾದದ್ದು**

ವಿದ್ಯಾರ್ಜನೆಗಾಗಿ ಅನೇಕ ವಿದೇಶಿ ವಿದ್ಯಾರ್ಥಿಗಳು ಅಲ್ಲಿಗೆ ಬಹುಸಂಖ್ಯೆಯಲ್ಲಿ ಬರುವದುಂಟು. ಆಗ ಆ ದೇಶದ ವ್ಯವಹಾರವನ್ನೂ ರೂಢಿಸಿಕೊಳ್ಳಬೇಕಾಗುತ್ತದೆ. ಕೆಲವು ಗಂಟೆ ದುಡಿದು ಗಳಿಕೆ ಮಾಡಿಕೊಳ್ಳುವ ಅವಕಾಶವೂ ಇರುತ್ತದೆ. ಆದರೆ ಹೆಚ್ಚು ಸಮಯ ದುಡಿದು ಗಳಿಕೆ ಮಾಡಿಕೊಳ್ಳುವ ಹವ್ಯಾಸವೂ ಕೆಲವರಲ್ಲಿ ಮೂಡುವುದು ಸಹಜ. ಆದರೆ ಕಾನೂನಿಗೆ ವಿರೋಧವಾದುದಲ್ಲವೆ? ಅಲ್ಲದೆ ವೀಸಾ ಅವಧಿ ಮುಗಿದರೂ ಅಲ್ಲಿಯೇ ಉಳಿದು ಗಳಿಕೆ ಮಾಡುವ ಅನೇಕ ವಿದ್ಯಾರ್ಥಿಗಳ ನೀತಿಯೂ ಕಾನೂನುಬಾಹಿರವಾದದ್ದಲ್ಲವೇ? ಎಷ್ಟೋ ಬಾರಿ ಭಾರತದ ವಿದ್ಯಾರ್ಥಿಗಳು ತಿಳಿವಳಿಕೆ ಇಲ್ಲದೆ ಕಳಪೆ ಖಾಸಗಿ ವಿದ್ಯಾಸಂಸ್ಥೆಗಳಿಗೆ ಬಂದು ಸಿಕ್ಕಿಹಾಕಿಕೊಳ್ಳುತ್ತಾರೆ. ಅಂತಹ ಕೆಟ್ಟ ಆಯ್ಕೆಗೆ ಅವರೇ ಹೊಣೆ, ಅವರ ವ್ಯಾಮೋಹವೇ ಕಾರಣ.

ಮಹಾಂತಯ್ಯ ಎಂ. ಹಿರೇಮಠ
ಉಪನಿರ್ದೇಶಕ, ಶಿಕ್ಷಣ ಇಲಾಖೆ (ನಿ), ೧೮೨, 'ಸಂಗಮೇಶ್ವರ ನಿಲಯ' ಋಷ್ಯಶೃಂಗ ಬೀದಿ
ಹಳೆಯ ಬ್ಯಾಂಕ್ ಕಾಲನಿ, ಕೋಣನಕುಂಟೆ, ಬೆಂಗಳೂರು - ೫೬೦ ೦೬೨

**ಸುದ್ದಿ ಚಿತ್ರ**



ಖ್ಯಾತ ವಿಜ್ಞಾನ ಲೇಖಕರಾದ ಶ್ರೀ ಟಿ. ಆರ್. ಅನಂತರಾಮು ಅವರ ಐವತ್ತನೇ ಕೃತಿ 'ದೂರದರ್ಶಕ ಕಂಡ ವಿಶ್ವರೂಪ' ಲೋಕಾರ್ಪಣೆ ಹಾಗೂ ಅಭಿನಂದನಾ ಕಾರ್ಯಕ್ರಮ ೦೯-೦೮-೨೦೦೯ರಂದು ತುಮಕೂರಿನಲ್ಲಿ ಜರುಗಿತು. ನವಕರ್ನಾಟಕ, ಪ್ರಜಾಪ್ರಗತಿ ದಿನಪತ್ರಿಕೆ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ತುಮಕೂರು ವಿಜ್ಞಾನ ಕೇಂದ್ರ ಇವುಗಳ ಸಂಯುಕ್ತ ಆಶ್ರಯದಲ್ಲಿ ಸಮಾರಂಭ ಯಶಸ್ವಿಯಾಗಿ ನಡೆಯಿತು. ಹಲವು ವಿಜ್ಞಾನ ಲೇಖಕರು ಹಾಗೂ ಅನಂತರಾಮು ಅವರ ಕುಟುಂಬದ ಸದಸ್ಯರು ಮತ್ತು ಒಡನಾಡಿಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

ಚಿತ್ರದಲ್ಲಿ: ನವಕರ್ನಾಟಕದ ಪರವಾಗಿ ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್ ಅಭಿನಂದಿಸಿದರು.

# ವಿಚಾರವಾದ - ಕೆಲವು ಟಿಪ್ಪಣಿಗಳು

ವೈಚಾರಿಕತೆ ಎಂಬುದು ಪರಿಷ್ಕೃತ ಜ್ಞಾನದ ಮುಂದುವರಿಕೆ. ಪ್ರಕೃತಿಯ ನಿಗೂಢಗಳನ್ನರಿಯುತ್ತಲೇ ವಾಸ್ತವ ರೀತಿಯಲ್ಲಿ ಬದುಕನ್ನು ಕಟ್ಟಿಕೊಳ್ಳುವ ಕ್ರಿಯೆ. ಸಮಕಾಲೀನ ಸಮುದಾಯಗಳ ಜೀವಪರ ಕಾಳಜಿಗಾಗಿ ಪರಿತಪಿಸುವ ಸತ್ಯದ ಅನ್ವೇಷಣೆ. ಅದು ಭಾವೋದ್ವೇಗ - ಭೌತಿಕತೆಗಳನ್ನು ಮೀರಿ ನಿಲ್ಲುವ ಸಾಧ್ಯತೆಗಳನ್ನು ಕಟ್ಟಿಕೊಡುತ್ತದೆ, ಸಾಂಪ್ರದಾಯಿಕ - ಸಾಂಸ್ಕೃತಿಕ ರೂಪಗಳನ್ನು ಒಡೆಯುವ ಪ್ರಕ್ರಿಯೆ. ಪ್ರಶ್ನೆ - ಉಪಪ್ರಶ್ನೆಗಳ ಮೂಲಕ, ಸಂಶಯ - ಅನುಮಾನಗಳ ಮೂಲಕ ನಡೆಸಬಹುದಾದ ಸತ್ಯದ ಹುಡುಕಾಟ. ಸತ್ಯದ ಬಹುಮುಖೀ ರೂಪಗಳನ್ನು ಕಂಡುಕೊಳ್ಳಬಹುದಾದ ಕುತೂಹಲದ ಕಾರ್ಯ.

ಡಾ|| ಬಸವರಾಜ ಸಬರದ

ಅರಿವಂ ಪೊಸಯಿಸುವುದೆ ಧರ್ಮಂ
ಅದರ ತಡೆವುದೆ ಅಧರ್ಮಂ... - ಪಂಪ

ಹತ್ತನೇ ಶತಮಾನದಲ್ಲಿ ಪಂಪ ಹೇಳಿದ ಈ ಮಾತು ಇಂದಿಗೂ ಪ್ರಸ್ತುತ. ಅರಿವು ಅಥವಾ ಜ್ಞಾನ ಎಂಬುದು ಆಕಾಶದಿಂದ ಬೀಳುವುದಿಲ್ಲ ಅಥವಾ ಅದು ರೆಡಿಮೇಡ್ ವಸ್ತುವೂ ಅಲ್ಲ. ಅನ್ನ - ಆಹಾರ - ಉಡುಪುಗಳನ್ನು ಹೇಗೆ ಕಾಲಕ್ಕೆ ತಕ್ಕಂತೆ ನಾವೇ ತಯಾರಿಸಿಕೊಳ್ಳುತ್ತೇವೆಯೋ, ಹಾಗೆ ಅರಿವನ್ನು ನಿತ್ಯ ಕಸಿಮಾಡಿ ಕಟ್ಟಿಕೊಳ್ಳಬೇಕಾಗುತ್ತದೆ. ನಮ್ಮ ನೆಲದಲ್ಲಿ ಕಚ್ಚಾ ಸಾಮಗ್ರಿಗಳು ಸಿಗುವ ಹಾಗೆ ನಮ್ಮ ಪರಂಪರೆಯಲ್ಲಿ ಅರಿವನ್ನು ಹೆಚ್ಚಿಸುವ ಜ್ಞಾನಶಾಖೆಗಳಿವೆ. ಕಚ್ಚಾ ಸಾಮಗ್ರಿಯನ್ನು ಹೇಗೆ ನೇರವಾಗಿ ಉಪಯೋಗಿಸಲು ಸಾಧ್ಯವಾಗುವುದಿಲ್ಲವೋ ಅದೇ ರೀತಿ ನಮ್ಮಲ್ಲಿ ಜನಸಮುದಾಯದ ಮೂಲಕ ಬೆಳೆದುಬಂದ, ಕೃತಿಗಳ ಮೂಲಕ ಕಂಡುಕೊಂಡ ಜ್ಞಾನವನ್ನು ಯಥಾವತ್ತಾಗಿ ಉಪಯೋಗಿಸಲಾಗುವುದಿಲ್ಲ. ಪಾರಂಪರಿಕ ಜ್ಞಾನವನ್ನು ಸಾಣೆಗೆ ಹಚ್ಚಿದಾಗ, ವರ್ತಮಾನದ ತುರ್ತುಗಳಲ್ಲಿಟ್ಟು ಅದನ್ನು ಕಸಿ ಮಾಡಿದಾಗ, ಸಮಕಾಲೀನ ಸಂದರ್ಭದ ಜ್ಞಾನ ಹುಟ್ಟಿಕೊಳ್ಳುತ್ತದೆ. ಇದನ್ನೇ ಪಂಪ ''ಅರಿವಂ ಪೊಸಯಿಸುವುದು'' ಎಂದಿದ್ದಾನೆ. ಪಾರಂಪರಿಕ ತಿಳುವಳಿಕೆಯನ್ನು ಪುನರ್ ಮೌಲ್ಯೀಕರಣಗೊಳಿಸುವುದು, ಪುನಶ್ಚೇತನಗೊಳಿಸುವುದು ನಿಜವಾದ ಧರ್ಮವೆಂದು ಹೇಳಿರುವ ಪಂಪ, ಇಲ್ಲಿ ಧರ್ಮಕ್ಕೆ ಹೊಸ ವ್ಯಾಖ್ಯೆ ನೀಡಿದ್ದಾನೆ. ಪೊಸಯಿಸುವುದನ್ನು ತಡೆಯುವುದೇ ಅಧರ್ಮವೆಂದು ಸ್ಪಷ್ಟಪಡಿಸಿದ್ದಾನೆ. ಹೀಗೆ ಪೊಸಯಿಸುವ ಪ್ರಕ್ರಿಯೆಯೇ ವಿಮರ್ಶೆ. ಪಾರಂಪರಿಕ ಜ್ಞಾನವನ್ನು ವಿಮರ್ಶೆಯ ಒರೆಗಲ್ಲಿಗೊಡ್ಡಿದಾಗ ವೈಚಾರಿಕತೆ ಹುಟ್ಟಿಕೊಳ್ಳುತ್ತದೆ. ಇಂತಹ ವೈಚಾರಿಕ ಸಾಧ್ಯತೆಗಳನ್ನು ನಾವು ವಿಚಾರವಾದವೆಂದು ಕರೆಯುತ್ತೇವೆ. ಇಂತಹ ವಿಚಾರವಾದದ ಪರಂಪರೆ ಭಾರತದಲ್ಲಿ ಚಾರ್ವಾಕರಿಂದಲೇ ಪ್ರಾರಂಭವಾಗಿದೆ. ಭಾರತದ ಸಂದರ್ಭದಲ್ಲಿ ಬುದ್ಧ ಪ್ರಥಮ ವಿಚಾರವಾದಿಯಾಗಿ ಕಾಣಿಸುತ್ತಾನೆ.

ಹಿಂದಿನ ಕಾಲದಲ್ಲಿಯೇ ಜಾನಶ್ರುತಿ, ಉದ್ದಾಲಕ ಆರುಣಿ ಮತ್ತು ಚರಕರಂತಹ ಋಷಿಗಳು ವೇದಗಳ ಪ್ರಾಮಾಣ್ಯವನ್ನು ಪ್ರಶ್ನಿಸಿದ್ದಾರೆ. ಅಂದಿನ ಕಾಲದಲ್ಲಿ ಧರ್ಮಗ್ರಂಥಗಳ ಪ್ರಾಮಾಣ್ಯವನ್ನು ಅಲ್ಲಗಳೆದವರಿದ್ದಾರೆ. ಗಾರ್ಗಿ, ಮೈತ್ರೇಯಿಯವರಂತಹ ಮಹಿಳೆಯರು ಪ್ರಖರ ವಿಚಾರವಾದಿಗಳಾಗಿ ಬೆಳೆದಿದ್ದಾರೆ. ಹನ್ನೆರಡನೇ ಶತಮಾನದ ವಚನಕಾರರು ವೇದ - ಆಗಮಗಳ ಮಿತಿಗಳನ್ನು ಹೇಳುತ್ತಲೇ ಅನೇಕ ಮೂಢನಂಬಿಕೆಗಳ ವಿರುದ್ಧ ಬಂಡಾಯವೆದ್ದಿದ್ದಾರೆ. ದೇವಾಲಯಗಳು ಶೋಷಣೆಯ ಕೇಂದ್ರಗಳಾದಾಗ, ದೇಹವೇ ದೇಗುಲವೆಂದು ಸ್ಪಷ್ಟಪಡಿಸಿದ್ದಾರೆ. ಸಮಾಜ ವ್ಯವಸ್ಥೆಯಲ್ಲಿ ತುಂಬಿಹೋಗಿದ್ದ ಅನೇಕ ಅಂಧ ಸಂಪ್ರದಾಯಗಳನ್ನು ಅಪಶಕುನಗಳನ್ನು ಅಲ್ಲಗಳೆದಿದ್ದಾರೆ. ಶರಣರು, ಕರ್ನಾಟಕ ಕಂಡ ಪ್ರಖರ ವಿಚಾರವಾದಿಗಳಾಗಿದ್ದಾರೆ.

ಆಧುನಿಕ ಸಂದರ್ಭದಲ್ಲಿ ವೈಚಾರಿಕತೆಯ ಬೆಳವಣಿಗೆಗೆ ಅನೇಕ ಚಿಂತಕರು ಕಾರಣವಾಗಿದ್ದಾರೆ. ಡಾರ್ವಿನ್, ಸಾಕ್ರೆಟಿಸ್, ಕೊಪರ್ನಿಕಸ್, ಬರ್ಟ್ರಾಂಡ್ ರಸೆಲ್, ರಾಬರ್ಟ್ ಇಂಗರ್‌ಸಾಲ್ ಮೊದಲಾದವರು ವೈಚಾರಿಕತೆಯ ಪರಂಪರೆಯನ್ನು ಕಟ್ಟಿ ನಿಲ್ಲಿಸಿದ್ದಾರೆ. ಡಾ|| ಬಾಬಾಸಾಹೇಬ ಅಂಬೇಡ್ಕರ್ ಅವರು ಪ್ರಮುಖ ವಿಚಾರವಾದಿಗಳಾಗಿದ್ದರೆಂಬುದು ಗಮನಿಸುವ ಸಂಗತಿಯಾಗಿದೆ. ಹಿಂದುತ್ವ ಹಾಗೂ ಮನುಸ್ಮೃತಿ ಬಗೆಗೆ ಡಾ|| ಅಂಬೇಡ್ಕರ್ ಅತ್ಯಂತ ವಸ್ತುನಿಷ್ಠ ಚಿಂತನೆ ನಡೆಸಿದವರಾಗಿದ್ದಾರೆ. ಜಾಗತಿಕ ವೈಚಾರಿಕ ಪರಂಪರೆಯಲ್ಲಿ ಕಾರ್ಲ್ ಮಾರ್ಕ್ಸ್, ಮಾವೋ ಪ್ರಸಿದ್ಧರಾಗಿದ್ದಾರೆ. ಭಾರತದ ಆಧುನಿಕ ಸಂದರ್ಭದಲ್ಲಿ ಡಾ|| ಅಂಬೇಡ್ಕರ್ - ಪೆರಿಯಾರ್ - ಲೋಹಿಯಾ - ಗಾಂಧೀಜಿಯವರ ಚಿಂತನೆಗಳು ಹೊಸ ಸಾಧ್ಯತೆಗಳನ್ನುಂಟುಮಾಡಿವೆ. ಧರ್ಮ - ದೇವರುಗಳನ್ನು ನಿರಾಕರಿಸಿ ವಿಚಾರವಾದವನ್ನು ಹುಟ್ಟುಹಾಕಿದವರಿದ್ದಾರೆ. ಧರ್ಮ - ದೇವರುಗಳ ಬಗೆಗಿದ್ದ ಮೌಢ್ಯತೆಗಳನ್ನು ಅಲ್ಲಗಳೆದು ಆಸ್ತಿಕರಾಗಿದ್ದುಕೊಂಡೇ ವೈಚಾರಿಕತೆಯನ್ನು ಬೆಳೆಸಿದವರಿದ್ದಾರೆ.

ಈ ಮೊದಲೇ ಚರ್ಚಿಸಿದಂತೆ ವೈಚಾರಿಕತೆ ಎಂಬುದು ಮುಂದುವರಿದ ಪರಿಷ್ಕೃತ ಜ್ಞಾನ. ಪ್ರಕೃತಿಯ ನಿಗೂಢಗಳನ್ನರಿಯುತ್ತಲೇ ವಾಸ್ತವ ರೀತಿಯಲ್ಲಿ ಬದುಕನ್ನು ಕಟ್ಟಿಕೊಳ್ಳುವ ಕ್ರಿಯೆ. ಸಮಕಾಲೀನ ಸಮುದಾಯಗಳ ಜೀವಪರ ಕಾಳಜಿಗಾಗಿ ಪರಿತಪಿಸುವ ಸತ್ಯದ ಅನ್ವೇಷಣೆ. ಅದು ಭಾವೋದ್ವೇಗ - ಭೌತಿಕತೆಗಳನ್ನು ಮೀರಿ ನಿಲ್ಲುವ ಸಾಧ್ಯತೆಗಳನ್ನು ಕಟ್ಟಿಕೊಡುತ್ತದೆ, ಸಾಂಪ್ರದಾಯಿಕ - ಸಾಂಸ್ಕೃತಿಕ ರೂಪಗಳನ್ನು ಒಡೆಯುವ ಪ್ರಕ್ರಿಯೆ. ಪ್ರಶ್ನೆ - ಉಪಪ್ರಶ್ನೆಗಳ ಮೂಲಕ, ಸಂಶಯ-ಅನುಮಾನಗಳ ಮೂಲಕ ನಡೆಸಬಹುದಾದ ಸತ್ಯದ ಹುಡುಕಾಟ. ಸತ್ಯದ ಬಹುಮುಖೀ ರೂಪಗಳನ್ನು ಕಂಡುಕೊಳ್ಳಬಹುದಾದ ಕುತೂಹಲದ ಕಾರ್ಯ. ವಿಚಾರವಾದವೆಂಬುದು ಕೇವಲ ಬೌದ್ಧಿಕ ಕಸರತ್ತಲ್ಲ, ಅದು ವಾಸ್ತವತೆಯ ಕನ್ನಡಿ. ಅದು ಒಣ ತರ್ಕವಲ್ಲ, ಅಂತರಂಗದ ಧ್ವನಿ. ಶುಷ್ಕ ಪಾಂಡಿತ್ಯವಲ್ಲ, ಮನಃಪರಿವರ್ತನೆಯ ಹರಿಕಾರ. ನೀತಿಬೋಧನೆಯಲ್ಲ, ನಿರಂತರ ಹರಿಯುವ ತೀವ್ರತೆ. ಭಾವನೆಗಳನ್ನು ಹತ್ತಿಕ್ಕುವುದು ಅದರ ಕಾರ್ಯವಲ್ಲ, ಉತ್ಸಾಹವನ್ನು ಸ್ಫುರಿಸುವುದು ಅದರ ಕಾರ್ಯ. ಅಂತಃಕರಣದ ಚಿಲುಮೆಯಾಗಿ, ಶೋಷಿತರ

ದನಿಯಾಗಿ, ಸಮಾನತೆಯ ಹರಿಕಾರನಾಗಿ ವೈಚಾರಿಕತೆಯು ಮೈದಾಳಬೇಕು. ಅಂತಹ ಮಹತ್ವದ ಪರಂಪರೆ ಕನ್ನಡದಲ್ಲೂ ಇದೆ.

ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಂಡು ತಮ್ಮ ವಸಾಹತುವನ್ನು ಪ್ರಾರಂಭಿಸಿದ ನಂತರ ಭಾರತದಲ್ಲಿ ಬ್ರಿಟಿಷರು ಕೈಗೊಂಡ ಸುಲಿಗೆಯ ಜತೆಗೆ ಅನೇಕ ಸಕಾರಾತ್ಮಕ ಬದಲಾವಣೆಗಳೂ ಜರುಗಿದವು. ಅದುವರೆಗಿದ್ದ ಗುರುಕುಲ ಶಿಕ್ಷಣ ಪದ್ಧತಿ, ಕೇವಲ ಉಚ್ಚವರ್ಗದವರಿಗೆ ಮಾತ್ರ ಮೀಸಲಾಗಿದ್ದ ಶಿಕ್ಷಣದ ಅವಕಾಶಗಳು ಬದಲಾಗಿ ಶೂದ್ರ – ದಲಿತವರ್ಗಗಳಿಗೂ ಶಿಕ್ಷಣ ಪಡೆಯುವ ಅವಕಾಶ ದೊರಕಿತು. ಸಂಸ್ಕೃತ ಮಂತ್ರವನ್ನು ಕೇಳಿದ ದಲಿತರ ಕಿವಿಗೆ ಕಾಯ್ದ ಸೀಸ ಹೊಯ್ದು ಹಿಂಸೆಯನ್ನುಂಟು ಮಾಡುತ್ತಿದ್ದ ಭಾರತ ದೇಶದಲ್ಲಿ ಶೂದ್ರರು - ದಲಿತರು ಶಿಕ್ಷಣ ಪಡೆದು ಇಂಗ್ಲಿಷ್‌ನಲ್ಲಿ ಮಾತನಾಡಲು ಪ್ರಾರಂಭಿಸಿದ್ದು ಕ್ರಾಂತಿಕಾರಕ ವಿಚಾರವೇ ಆಗಿದೆ.

''ಬ್ರಿಟಿಷರು ಈ ದೇಶಕ್ಕೆ ಬಾರದೇ ಹೋಗಿದ್ದರೆ, ಈ ದೇಶದ ಶೂದ್ರರು ಇನ್ನೂ ಮಲ ಹೊರಬೇಕಾಗುತ್ತಿತ್ತು'' ಎನ್ನುವ ಕುವೆಂಪು ಅವರ ಮಾತುಗಳಲ್ಲಿ ಸತ್ಯವಡಗಿದೆ. ಬ್ರಿಟಿಷ್ ವಸಾಹತುಶಾಹಿ ಅನೇಕ ರೀತಿಯ ಶೋಷಣೆಯನ್ನುಂಟುಮಾಡಿದ್ದರೂ, ಈ ದೇಶದ ಕೆಳವರ್ಗದ ಜನರಿಗೆ ಶಿಕ್ಷಣ ನೀಡುವ ಮೂಲಕ ಕ್ರಾಂತಿಕಾರಿ ಹೆಜ್ಜೆಯನ್ನಿಟ್ಟಿದೆ. ಅಂತೆಯೇ ಡಾ॥ ಅಂಬೇಡ್ಕರ್‌ರಂಥವರು ಭಾರತದ ಸಂವಿಧಾನ ಬರೆಯಲು ಸಾಧ್ಯವಾಯಿತು. ಮನುಸ್ಮೃತಿಯನ್ನು ಸುಡಲು ಸಾಧ್ಯವಾಯಿತು. ಪ್ರಾಣಿಗಳಂತೆ ಬದುಕುತ್ತಿದ್ದ ಜನರನ್ನು ಮನುಷ್ಯರನ್ನಾಗಿ ಪರಿವರ್ತಿಸಲು ಸಾಧ್ಯವಾಯಿತು. ಮಾರ್ಕ್ಸ್‌ವಾದ, ಲೋಹಿಯಾವಾದ ಎಂದೂ ವೈಚಾರಿಕತೆಯ ಬೆಳವಣಿಗೆಗೆ ಮುಖ್ಯ ಪ್ರೇರಣೆಯಾದವು.

ಕರ್ನಾಟಕದ ಆಧುನಿಕ ಸಂದರ್ಭದಲ್ಲಿ ವೈಚಾರಿಕತೆಯ ಹುಟ್ಟಿಗೆ ಕೆಲವು ಮುಖ್ಯ ಕಾರಣಗಳಿವೆ. ಶ್ರೀಲಂಕಾದ ಪ್ರಖರ ವಿಚಾರವಾದಿ ಡಾ॥ ಕೋವೂರ್ ಅವರು ಪುಟ್ಟಪರ್ತಿ ಸಾಯಿಬಾಬಾನಿಗೆ ಸಾರ್ವಜನಿಕ ವೇದಿಕೆಯಲ್ಲಿ ಚಾಲೆಂಜ್ ಮಾಡಿದರು. ಪವಾಡಗಳನ್ನು ಮಾಡುವುದಾದರೆ ಜನಸಮುದಾಯದ ನಡುವೆ ತಾವು ತಿಳಿಸಿದ ಪವಾಡ ಮಾಡಿತೋರಿಸಿ ಎಂದು ಡಾ॥ ಕೋವೂರ್ ಸವಾಲು ಹಾಕಿದರು. ಅಂತಹ ಪವಾಡ ಮಾಡಿದರೆ ಲಕ್ಷ ರೂಪಾಯಿ ಮೊತ್ತದ ಬಹುಮಾನ ನೀಡುವುದಾಗಿ ಹೇಳಿದರು. ಆದರೆ ಸಾಯಿಬಾಬಾ ಮುಂದೆ ಬರಲಿಲ್ಲ. ಅಂದಿನಿಂದ ಪವಾಡಗಳನ್ನು ಬಯಲುಮಾಡುವ ಕಾರ್ಯಕ್ರಮಗಳು ವಿಜ್ಞಾನ ಪರಿಷತ್ತಿನಿಂದ ಪ್ರಾರಂಭವಾದುವು. ಎಂಬತ್ತರ ದಶಕದಲ್ಲಿ ಡಾ॥ ಎಚ್. ನರಸಿಂಹಯ್ಯ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾಗ, ಬೀದರ್ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬಂದ ಬಾನಾಮತಿ ಪ್ರಸಂಗಗಳನ್ನು ಪರಿಶೀಲಿಸಲು ಸರಕಾರ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿತು. ಆ ಸಮಿತಿಯಲ್ಲಿದ್ದ ಅನೇಕ ವಿಜ್ಞಾನಿಗಳು, ಮನೋವೈದ್ಯರು ಬಾನಾಮತಿಯ ಕಾರಣಗಳನ್ನು ಬಯಲುಮಾಡಿದರು.

ಈ ಸಂದರ್ಭದಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ಪ್ರಕಟಿಸಿದ 'ವಿಚಾರ ಸಾಹಿತ್ಯ' ಸಂಕಲನಗಳು, ನಂತರದ ವರ್ಷಗಳಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಪ್ರತಿ ವರ್ಷ ಪ್ರಕಟಿಸಲು ಪ್ರಾರಂಭಿಸಿದ ವಿಚಾರ ಸಾಹಿತ್ಯದ ವಾರ್ಷಿಕ ಸಂಕಲನಗಳು ಯುವಕರ ಮೇಲೆ ಗಾಢ ಪರಿಣಾಮವನ್ನುಂಟುಮಾಡಿದವು. ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಹುಟ್ಟಿಕೊಂಡ ಜಿಲ್ಲಾ ವಿಜ್ಞಾನ ಕೇಂದ್ರಗಳು, ಬೇರೆ ಬೇರೆ ಪ್ರದೇಶಗಳಲ್ಲಿ ಹುಟ್ಟಿಕೊಂಡ ವಿಶ್ವವಿದ್ಯಾಲಯಗಳು, ಕಾಲೇಜುಗಳು ಮೌಢ್ಯತೆ ಮತ್ತು ಅಂಧ ಸಂಪ್ರದಾಯಗಳ ನಿವಾರಣೆಗೆ ಮುಖ್ಯ ಕಾರಣವಾದವು. ನಂತರದ ವರ್ಷಗಳಲ್ಲಿ ವೈಚಾರಿಕತೆಗೆ ಸಂಬಂಧಿಸಿದ ಅನೇಕ ಕೃತಿಗಳು ಕನ್ನಡದಲ್ಲಿ ಪ್ರಕಟವಾದವು. ಸೃಜನಶೀಲ ಕೃತಿಗಳಲ್ಲಿಯೂ ವೈಚಾರಿಕತೆಯನ್ನು ಗುರುತಿಸುವ ಪ್ರಯತ್ನಗಳು ನಡೆದವು. ನಂತರದ ಕಾಲಘಟ್ಟದಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿಯೂ ಹೊಸ ಚಿಂತನೆ ಪ್ರಾರಂಭವಾಯಿತು. ಧಾರ್ಮಿಕ ಚಿಂತನೆಯ ಕೃತಿಗಳು, ಸಾಮಾಜಿಕ ಚಿಂತನೆಯ ಕೃತಿಗಳು, ರಾಜಕೀಯ ಚಿಂತನೆಯ ಕೃತಿಗಳು, ಆರ್ಥಿಕ ಚಿಂತನೆಯ ಕೃತಿಗಳು ಪ್ರಕಾಶನಗೊಂಡವು. ಹೀಗಾಗಿ ಇಂದು ಕನ್ನಡದಲ್ಲಿ ವೈಚಾರಿಕ ಸಾಹಿತ್ಯ ಒಂದು ಪ್ರಕಾರವಾಗಿ, ಬಹುಮುಖೀ ಚಿಂತನೆಗಳ ಒಂದು ಶಿಸ್ತಾಗಿ ಬೆಳೆದು ನಿಂತಿದೆ.

ಕನ್ನಡದಲ್ಲಿ ವಿಚಾರವಾದದ ಬೆಳವಣಿಗೆಗೆ ವೈಚಾರಿಕ ಪತ್ರಿಕೆಗಳ ಪಾತ್ರವೂ ಗಮನಾರ್ಹವಾಗಿದೆ. ಪ್ರಾರಂಭದಲ್ಲಿ ಗೋಪಾಲಕೃಷ್ಣ ಅಡಿಗರ ಸಂಪಾದಕತ್ವದಲ್ಲಿ ಪ್ರಕಟವಾದ 'ಸಾಕ್ಷಿ', ಚಂಪಾ - ಗಿರಡ್ಡಿ - ಪಟ್ಟಣಶೆಟ್ಟಿಯವರ ಸಂಪಾದಕತ್ವದಲ್ಲಿ ಹುಟ್ಟಿಕೊಂಡ 'ಸಂಕ್ರಮಣ' ಯುವ ಜನತೆಯಲ್ಲಿ ವೈಚಾರಿಕತೆ ಬೆಳೆಯಲು ಕಾರಣವಾದವು. ನಂತರದ ಸಂದರ್ಭದಲ್ಲಿ ಬಂದ 'ಶೂದ್ರ', 'ಅನ್ವೇಷಣೆ', 'ಲಂಕೇಶ್ ಪತ್ರಿಕೆ', 'ಹೊಸತು', 'ಸಂವಾದ', 'ಅಗ್ನಿ' ಇವೇ ಮುಂತಾದ ಪತ್ರಿಕೆಗಳು ಅನೇಕ ವೈಚಾರಿಕ ಲೇಖನಗಳನ್ನು ಪ್ರಕಟಿಸುತ್ತ ಬಂದಿವೆ.

ಕರ್ನಾಟಕದಲ್ಲಿ ವೈಚಾರಿಕ ಪರಂಪರೆಯನ್ನು ಹುಟ್ಟುಹಾಕುವಲ್ಲಿ ಪ್ರಗತಿಪರ ಚಳುವಳಿಗಳ ಪಾತ್ರವೂ ಗಮನಾರ್ಹವಾದುದಾಗಿದೆ. ತುರ್ತು ಪರಿಸ್ಥಿತಿಯ ಸಂದರ್ಭವು ವೈಚಾರಿಕ ನೆಲೆಗಳನ್ನು ಕಂಡುಕೊಳ್ಳುವ ದಿಶೆಯಲ್ಲಿ ಒಂದು ಮಹತ್ವದ ಘಟನೆಯಾಯಿತು. ಸಮಾಜವಾದಿ ಚಿಂತಕರು ಜೈಲುಗಳ ಮೂಲಕವೇ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. ಸಮುದಾಯ ಸಂಘಟನೆ ನಾಡಿನಾದ್ಯಂತ ತನ್ನ ಶಾಖೆಗಳನ್ನು ಪ್ರಾರಂಭಿಸಿ ಯುವಕರಲ್ಲಿ ಸಾಂಸ್ಕೃತಿಕ ಜಾಗೃತಿಯನ್ನುಂಟುಮಾಡಿತು. ಅದೇ ರೀತಿ ಕರ್ನಾಟಕ ರಾಜ್ಯ ದಲಿತ ಸಂಘಟನೆ, ಕರ್ನಾಟಕ ರಾಜ್ಯ ಬಂಡಾಯ ಸಾಹಿತ್ಯ ಸಂಘಟನೆ, ಅಖಿಲ ಭಾರತ ಮಹಿಳಾ ಸಂಘಟನೆ, ಕರ್ನಾಟಕ ರಾಜ್ಯ ರೈತ ಸಂಘಟನೆ – ಮೊದಲಾದ ರಾಷ್ಟ್ರ ಹಾಗೂ ರಾಜ್ಯಮಟ್ಟದ ಸಂಘಟನೆಗಳು ಕ್ರಮಬದ್ಧವಾದ ಕಾರ್ಯಕ್ರಮಗಳನ್ನು ಸಂಘಟಿಸಿ ಕರ್ನಾಟಕದಲ್ಲಿ ವೈಚಾರಿಕತೆಯ ಅಲೆಯನ್ನೇ ಹುಟ್ಟುಹಾಕಿದವು. ಕ್ರಾಂತಿಗೀತೆಗಳ ಮೂಲಕ, ಬೀದಿ ನಾಟಕಗಳ ಮೂಲಕ ವರ್ತಮಾನದ ತುರ್ತುಗಳಿಗೆ ಸ್ಪಂದಿಸಿದವು. ದಲಿತವರ್ಗದಿಂದ, ಹಿಂದುಳಿದ ವರ್ಗಗಳಿಂದ, ಗ್ರಾಮೀಣ ಪ್ರದೇಶದಿಂದ ಬಂದ ಯುವಕರು ಶಿಕ್ಷಣ ಪಡೆದು, ಸಂಘಟನೆ ಕಟ್ಟಿ ಅನ್ಯಾಯದ ವಿರುದ್ಧ, ಶತಮಾನಗಳ ಶೋಷಣೆಯ ವಿರುದ್ಧ ಹೋರಾಟಗಳನ್ನು ಹುಟ್ಟುಹಾಕಿದರು. ಅನೇಕ ಚಳುವಳಿಗಳು – ಜಾಥಾಗಳು ಯುವಕರ ಮೇಲೆ ಪರಿಣಾಮ ಬೀರಿದವು. ಧರ್ಮವನ್ನು ಕುರಿತು, ಶಿಕ್ಷಣವನ್ನು ಕುರಿತು, ಸಮಾಜವನ್ನು ಕುರಿತು ಹೊಸ ಚಿಂತನೆಗಳು ಪ್ರಾರಂಭವಾದವು. ನರಗುಂದ ರೈತರ ಬಂಡಾಯ, ಬೆಂಡಿಗೇರಿ ಪ್ರಕರಣ, ಕುದರಿಮೋತಿ ಪ್ರಕರಣಗಳು ಹೋರಾಟಗಾರರಿಗೆ ಹುಮ್ಮಸ್ಸು ನೀಡಿದವು. ಎಂಬತ್ತು – ತೊಂಬತ್ತರ ದಶಕಗಳಲ್ಲಿ ಜನಪರ ಚಳುವಳಿಗಳು ತೀವ್ರಗೊಂಡವು. ಈ ಎಲ್ಲ ಸಂಗತಿಗಳು ವೈಚಾರಿಕ ಸಾಹಿತ್ಯದ ಹುಟ್ಟಿಗೆ ಕಾರಣವಾದವು.

ಡಾ॥ ಬಸವರಾಜ ಸಬರದ
ಚೇರ್‌ಮನ್, ಕನ್ನಡ ಅಧ್ಯಯನ ಸಂಸ್ಥೆ ಹಾಗೂ ಡೀನ್, ಕಲಾ ನಿಕಾಯ
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ



## ಮದುವೆ

ಆಕಾಶ ಹಂದರದಲ್ಲಿ
ಚುಕ್ಕೆಗಳ ನಿಬ್ಬಣದಲ್ಲಿ
ಚಂದಿರ ಮದುಮಗನಾಗಿ
ಮೆರೆದ –
ಮದುವೆಯೂಟವಾಗಿ ಧರೆಗೆಲ್ಲ
ಬೆಳದಿಂಗಳನ್ನೇ ಬಡಿಸಿದನಲ್ಲ!

ಕುಸುಮ ನಕೋಸಾ ಕರಾಳೆ



# ರಂಗ ಗಾರುಡಿಗ ಹಬೀಬ್ ತನ್ವೀರ್

**ಎಸ್. ಮಾಲತಿ**

ಫ್ಯಾಕ್ಟರಿಯೊಂದರಲ್ಲಿ ಸೂಪರ್‌ವೈಸರ್ ಆಗಿದ್ದ ಹಬೀಬ್ ತನ್ವೀರ್ ತಮ್ಮ ರಂಗಭೂಮಿಯ ಕೆಲಸಗಳಿಂದ ಇಡೀ ಪ್ರಪಂಚದಲ್ಲೇ ಖ್ಯಾತರಾಗಿದ್ದರು. ಇವರು ದೆಹಲಿಯಲ್ಲಿ ನೆಲೆಸಿದ್ದರು. ಇವರ ಹೆಂಡತಿ ಮೋನಿಕಾ ತನ್ವೀರ್, ತನ್ವೀರ್‌ರ ವಸ್ತ್ರವಿನ್ಯಾಸ, ರಂಗ ಸಜ್ಜಿಕೆ, ಪರಿಕರಗಳನ್ನು ಮಾಡುವುದು ಹೀಗೆ ಹಲವಾರು ಬಗೆಯಲ್ಲಿ ಎಲ್ಲ ನಾಟಕಗಳಲ್ಲೂ ನೆರವಾಗುತ್ತಿದ್ದರು. ಅಚ್ಚ ಭಾರತೀಯತೆಯನ್ನು ತಮ್ಮ ರಂಗಶೈಲಿಯಲ್ಲಿ ಅಳವಡಿಸಿಕೊಂಡ ಹಬೀಬ್ ತನ್ವೀರ್, ಅದರಿಂದಲೇ ಭಾರತೀಯ ರಂಗಭೂಮಿಯಲ್ಲಿ ಪ್ರಸಿದ್ಧರಾದರು. ಇವರ ಖ್ಯಾತ ನಾಟಕಗಳಲ್ಲಿ 'ಚರಣ್‌ದಾಸ್ ಚೋರ್' ಕೂಡ ಒಂದು. ಇದು ಎಲ್ಲ ಭಾರತೀಯ ಭಾಷೆಗಳಿಗೆ ಅನುವಾದವಾಗಿದೆ. ಮೂಲ ಹಿಂದಿಯಲ್ಲಿರುವ ಈ ನಾಟಕವನ್ನು ಪ್ರಸ್ತುತ ಲೇಖಕಿ ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟಿ ಇಬ್ಬರೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಎಸ್. ಮಾಲತಿಯವರು 'ಚೋರ ಚರಣದಾಸ' ಎಂಬ ಹೆಸರಿನಲ್ಲಿ ಮಾಡಿರುವ ಅನುವಾದಿತ ನಾಟಕವನ್ನು ಬಿ. ವಿ. ಕಾರಂತರು, ಕೆ. ಜಿ. ಕೃಷ್ಣಮೂರ್ತಿ, ಪ್ರಕಾಶ ಗರೂಡ, ಸಿ. ಟಿ. ಬ್ರಹ್ಮಾಚಾರ್, ಕಿರಣ್ ಭಟ್ ಮುಂತಾದವರು ನಿರ್ದೇಶಿಸಿದ್ದಾರೆ. ಈ ನಾಟಕದ ನೂರಾರು ಪ್ರದರ್ಶನಗಳು ಕರ್ನಾಟಕದಲ್ಲಿ ಜರುಗಿವೆ. 'ಚರಣ್‌ದಾಸ್ ಚೋರ್' ನಾಟಕ ರಾಜಸ್ಥಾನಿ ಜನಪದ ಕಥೆಯೊಂದನ್ನು ಆಧರಿಸಿದೆ.

ಈಗ, ಹಬೀಬ್ ತನ್ವೀರ್ ಅವರ ರಂಗಭೂಮಿಯ ಹಿನ್ನೆಲೆಯನ್ನೊಂದಿಷ್ಟು ನೋಡೋಣ.

ಆಧುನಿಕ ಭಾರತೀಯ ರಂಗಭೂಮಿಯು ಪಾಶ್ಚಾತ್ಯ ರಂಗಭೂಮಿಯ ಪ್ರಭಾವಕ್ಕೆ ಒಳಗಾಗಿರುವುದು ಸುಳ್ಳಲ್ಲ. ನಮ್ಮ ದೇಶ ೧೫೦ ವರ್ಷಗಳಷ್ಟು ಕಾಲ ಇಂಗ್ಲಿಷರ ಆಳ್ವಿಕೆಯಲ್ಲಿದ್ದುದೂ ಅದಕ್ಕೊಂದು ಕಾರಣವೆನ್ನಬೇಕು. ಆದರೆ ೧೯೬೦ರಲ್ಲಿ ನಮ್ಮ ಮಣ್ಣಿನ ಸಂಸ್ಕೃತಿ, ನಮ್ಮ ಬೇರುಗಳಿಗೆ ನಾವು ಮರಳಬೇಕೆನ್ನುವ ಹಂಬಲ ಸಾಂಸ್ಕೃತಿಕ ಲೋಕದಲ್ಲಿ ಮೂಡಿತು. ಆದರೆ, ಇದಕ್ಕಿಂತ ಮೊದಲೇ ಹಬೀಬ್ ತನ್ವೀರ್ ರಂಗಭೂಮಿಯ ಮೂಲಕ ತಮ್ಮ ಜಾನಪದದ ಬಗೆಗಿನ ಪ್ರೀತಿಯನ್ನು ಹೊರಹೊಮ್ಮಿಸಿದ್ದರು.

೧೯೪೦ರ ಆಸುಪಾಸಿನಲ್ಲಿ, ಅಂದರೆ ಸ್ವಾತಂತ್ರ್ಯ ಲಭಿಸುವುದಕ್ಕಿಂತ ಮೊದಲೇ ಹಬೀಬ್ ತನ್ವೀರ್ ಅವರು ಬೊಂಬಾಯಿನಲ್ಲಿದ್ದಾಗ, ಅಲ್ಲಿನ ಎಡಪಂಥೀಯ ಧೋರಣೆಯ ಇಪ್ಟಾ ಸಾಂಸ್ಕೃತಿಕ ತಂಡದೊಂದಿಗೆ ಕ್ರಿಯಾಶೀಲರಾಗಿದ್ದರು. ಈ ತಂಡ ಹಲವು ಭಾಷೆಗಳಲ್ಲಿ ಸಂಗೀತ ಪ್ರಧಾನವಾದ ಕ್ರಾಂತಿಕಾರಿ ನಾಟಕಗಳನ್ನಾಡುತ್ತಿತ್ತು. ಇವರು ಜನಸಾಮಾನ್ಯರ ಹತ್ತಿರ ಹೋಗಲು ಆಂಧ್ರದ ಬುರ್ರಕಥಾ, ಬಂಗಾಲದ ಜಾತ್ರಾ ಮುಂತಾದ ಜಾನಪದ ಪ್ರಕಾರಗಳಲ್ಲಿ ನಾಟಕಗಳನ್ನಾಡಿಸುತ್ತಿದ್ದರು. ಇವುಗಳಿಂದ ಸ್ಫೂರ್ತಿಗೊಂಡ ಹಬೀಬ್ ತನ್ವೀರರು ಛತ್ತೀಸ್‌ಗಢ ಭಾಷೆಯಲ್ಲಿ, ಛತ್ತೀಸ್‌ಗಢದ ಜನಪದ ಪ್ರಕಾರಗಳನ್ನು ಬಳಸಿ ತಮ್ಮ ನಾಟಕಗಳನ್ನು ನಿರ್ದೇಶಿಸಿದರು. ಬಾಲ್ಯದಲ್ಲೇ ಛತ್ತೀಸ್‌ಗಢದ ಜನಪದ ಹಾಡುಗಳಿಗೆ ಮಾರುಹೋಗಿದ್ದ ಹಬೀಬ್ ತನ್ವೀರ್ ಮುಂದೆ ತಮ್ಮ ನಾಟಕದ ಹಾಡುಗಳಿಗೆ ಈ ಜಾನಪದ ಧಾಟಿಯನ್ನು ಬಳಸಿದ್ದಲ್ಲದೆ ಕೆಲವೊಮ್ಮೆ ಆ ಹಾಡುಗಳನ್ನು ಇದ್ದದ್ದು ಇದ್ದ ಹಾಗೆ ತಮ್ಮ ನಾಟಕಗಳಲ್ಲಿ ಬಳಸಿದರು.

ಹಬೀಬ್ ತನ್ವೀರ್, ಛತ್ತೀಸ್‌ಗಢದಿಂದ ೧೯೫೪ರಲ್ಲಿ ದೆಹಲಿಗೆ ಬಂದು ನೆಲಸಿದರು. ಇಲ್ಲಿ ಅವರು 'ಆಗ್ರಾ ಬಜ಼ಾರ್' ಎಂಬ ನಾಟಕವನ್ನು ಬರೆದು ನಿರ್ದೇಶಿಸಿದರು. ೧೮ನೇ ಶತಮಾನದ ವಿಶಿಷ್ಟ ಉರ್ದು ಕವಿ ನಜ಼ೀರ್ ಅಕ್ಬರಾಬಾದಿಯ ಜೀವನ ಮತ್ತು ಕಾವ್ಯವನ್ನು ಆಧರಿಸಿದ ನಾಟಕವಿದು. ಈ ನಾಟಕದಲ್ಲಿ ನಗರ ಪ್ರದೇಶದ ಮಧ್ಯಮ ವರ್ಗದ ಕೆಲವು ನಟರನ್ನು ಹಾಗೂ ಕೆಲವು ಅನಕ್ಷರಸ್ಥ ಓಬ್ಲಾ ಗ್ರಾಮಸ್ಥ ನಟರನ್ನೂ ಬಳಸಲಾಗಿತ್ತು. 'ಬಜ಼ಾರ್' ಎಂದರೆ ಸಂತೆ ಎಂದರ್ಥ. ನಾಟಕದಲ್ಲಿ ಸಂತೆಯ ಇಡೀ ದೃಶ್ಯವನ್ನು, ಅದರ ಗಲಾಟೆ - ಜನರ ಸಹಕಾರ - ದ್ವಂದ್ವ - ಅದರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಆಯಾಮಗಳೊಂದಿಗೆ ವಿಶಿಷ್ಟವಾಗಿ ಕಟ್ಟಿಕೊಡಲಾಯಿತು. ಸಂಪ್ರದಾಯಸ್ಥರಿಗೆ ಸವಾಲೆಸೆಯಲು, ನಾಜೂಕಿನ ಸೌಂದರ್ಯ ಮೀಮಾಂಸೆಗೆ ಸವಾಲೆಸೆಯುವಂತೆ ಈ ನಾಟಕದಲ್ಲಿ ನಜ಼ೀರ್ ಅಕ್ಬರಾಬಾದಿಯ ಕಾವ್ಯವನ್ನು ಬಳಸಲಾಯಿತು.

ಹಬೀಬ್ ತನ್ವೀರ್ 'ಆಗ್ರಾ ಬಜ಼ಾರ್' ನಾಟಕವನ್ನು ದೆಹಲಿಯಲ್ಲಿ ಆಡಿಸಿದಾಗ, ದೆಹಲಿಯ ರಂಗಭೂಮಿ ಯಾವ ಸ್ಥಿತಿಯಲ್ಲಿತ್ತು ಎಂಬುದನ್ನು ನೋಡೋಣ. ಆಗ ದೆಹಲಿಯಲ್ಲಿ ಹೆಚ್ಚಾಗಿ ಇಂಗ್ಲಿಷ್ ನಾಟಕಗಳನ್ನು ಇಂಗ್ಲಿಷಿನಲ್ಲೇ ಕಾಲೇಜುಗಳಲ್ಲಿ ಹಾಗೂ ಹವ್ಯಾಸಿ ತಂಡಗಳು ಬೇರೆ ಬೇರೆ ವೇದಿಕೆಗಳಲ್ಲಿ ಆಡುತ್ತಿದ್ದರು. ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯೂ ತನ್ನೆಲ್ಲ ನಾಟಕ ಚಟುವಟಿಕೆಗಳಿಗೆ ೧೯ ಮತ್ತು ೨೦ನೇ ಶತಮಾನದ ಇಂಗ್ಲೆಂಡಿನ ರಂಗಭೂಮಿಯನ್ನು ತನ್ನ ಮಾದರಿಯನ್ನಾಗಿಸಿಕೊಂಡಿತ್ತು. ಭಾರತೀಯ ಭಾಷೆಗಳು, ಸಂಸ್ಕೃತಿ ಮತ್ತು ಜನಪದ ಕಲೆಗಳ ಬಗ್ಗೆ ಯಾರಿಗೂ ಗಮನವಿರಲಿಲ್ಲ. ಆದ್ದರಿಂದಲೇ, ಹಬೀಬ್ ತನ್ವೀರ್ ಜನಪದ ಕಲೆಗಳನ್ನು ಬಳಸಿಕೊಂಡು ರೂಪಿಸಿದ ಆಗ್ರಾ ಬಜ಼ಾರ್ ಮಿಂಚಿನ ಸಂಚಲನ ಉಂಟುಮಾಡಿತ್ತು.

'ಆಗ್ರಾ ಬಜ಼ಾರ್' ನಾಟಕದ ಪ್ರಯೋಗದ ನಂತರ ಹಬೀಬ್ ತನ್ವೀರ್, ರಂಗಭೂಮಿಯಲ್ಲಿ ಉನ್ನತ ವ್ಯಾಸಂಗ ಮಾಡಲೋಸುಗ ಇಂಗ್ಲೆಂಡಿನಲ್ಲಿ ನಾಟಕ ಕಲೆಯ ರಾಯಲ್ ಅಕಾಡೆಮಿಗೆ ಹೋದರು. ಇಂಗ್ಲೆಂಡಿನಲ್ಲಿ ಮೂರು ವರ್ಷ ಕಳೆದರು. ಇಂಗ್ಲೆಂಡಿನಲ್ಲಿ ಹಲವಾರು ನಾಟಕಗಳನ್ನು ನೋಡಿದರು. ಆದರೆ, ಅಲ್ಲಿಂದ ಮರಳಿದ ಮೇಲೆ, ರಾಡಾದಲ್ಲಿ ಕಲಿತದ್ದನ್ನು ಈ ನೆಲದಲ್ಲಿ ಪ್ರಯೋಗಿಸಲಾಗುವುದಿಲ್ಲ, ಭಾರತದಲ್ಲಿ



ಜನಪದ ಸಂಪ್ರದಾಯದಿಂದ ಹಬೀಬ್ ತನ್ವೀರ್ ತಮ್ಮ ಸ್ಫೂರ್ತಿಯನ್ನೂ ಕಲಾವಿದರನ್ನೂ ರಂಗತಂತ್ರಗಳನ್ನೂ ಕೆಲವೊಮ್ಮೆ ಕಥಾವಸ್ತುಗಳನ್ನೂ ಪಡೆಯುತ್ತಾರೆ. ಆದರೆ ಇವರ ರಂಗಭೂಮಿಯನ್ನು ಜನಪದ ರಂಗಭೂಮಿ ಎಂದು ಕರೆಯಲಾಗುವುದಿಲ್ಲ. ಹಬೀಬ್ ತನ್ವೀರ್ ಇತಿಹಾಸ ಮತ್ತು ರಾಜಕೀಯ ಪ್ರಜ್ಞೆಯಿರುವ, ಸೂಕ್ಷ್ಮಜ್ಞತೆಯಿರುವ, ಆಧುನಿಕ ಮನೋಭಾವದ ಪ್ರಜ್ಞಾವಂತ ಕಲಾವಿದ. ಜನಪದ ಪ್ರಕಾರಗಳೊಂದಿಗೆ ಹೆಚ್ಚು ಕೆಲಸ ಮಾಡಿದ ಇವರ ನಿರ್ಧಾರ ಅತ್ಯಂತ ಪ್ರಜ್ಞಾಪೂರ್ವಕವಾಗಿದ್ದು, ಇದು ಸೌಂದರ್ಯ ಮೀಮಾಂಸೆಗಿಂತ ಸೈದ್ಧಾಂತಿಕವಾದ ಆಯ್ಕೆಯಾಗಿದೆ. ಇವರಿಗೆ ಜನಪ್ರಿಯ ರಂಗಪ್ರಕಾರಗಳ ಬಗೆಗಿರುವ ಪ್ರೀತಿಗೂ, ಇವರ ಎಡಪಂಥೀಯ ಧೋರಣೆಗಳಿಗೂ ನಿಕಟವಾದ ಸಂಬಂಧವಿದೆ.

# ಅನುಭಾವ



ಅನುಭಾವ

ಅನುಭವಿಯ ಒಳಗಣ್ಣು
ಅದು
ಭೂಮಿ ಬೆಳಗುವ ಸೂರ್ಯನಂತೆ.
ಅದರ
ಕಣ್ಣಿಗೆ ಕಾಣುವುದೆಲ್ಲವೂ ದೇವರು.
ಹುಡುಕಾಡಿದರೂ
ಕಬೀರನಿಗೆ ಕಾಣಿಸಲಿಲ್ಲ ಕೆಟ್ಟವನು.
ಕಳ್ಳ
ಬಸವಣ್ಣನಿಗೆ ಕೂಡಲ ಸಂಗಮನಾಗಿ ಕಂಡ.
ಸೂಳೆ
ಮಹಾಶರಣೆಯಾಗಿ ಕಾಣಿಸಿದಳು
ಅಕ್ಕಮಹಾದೇವಿಗೆ
ನೆಲವೆಲ್ಲಾ ಅವಿಮುಕ್ತ ಕ್ಷೇತ್ರ
ನೆಲದ ಮೇಲಿನ ಹರಳು ಚಿಂತಾಮಣಿ
ವನವೆಲ್ಲ ಕಲ್ಪತರು ಮೃಗಗಳೆಲ್ಲ ಪರುಷ !

ಡಾ|| ಗುರುಲಿಂಗಪ್ಪ ಧಬಾಲೆ
ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕ, ಸಿ. ಬಿ. ಖೇಡಗಿ ಬಸವೇಶ್ವರ ಮಹಾವಿದ್ಯಾಲಯ, ಅಕ್ಕಲಕೋಟ, ಜಿಲ್ಲೆ: ಸೊಲ್ಲಾಪುರ (ಮಹಾರಾಷ್ಟ್ರ)

ರಂಗಭೂಮಿಯ ಕೆಲಸ ಮಾಡಬೇಕಾದರೆ ಇಲ್ಲಿನ ಸಂಸ್ಕೃತಿ, ಸಂಪ್ರದಾಯ, ಪರಿಸರಗಳ ಹಿನ್ನೆಲೆಯಲ್ಲಿಯೇ ಮಾಡಬೇಕು ಎಂಬುದನ್ನು ಮನಗಂಡರು.

ವಸಾಹತುಶಾಹಿಯ ನೆರಳಿನಲ್ಲಿ ನರಳುತ್ತಿದ್ದ ಭಾರತೀಯ ರಂಗಭೂಮಿಯಲ್ಲಿ, ಸ್ವಂತದ ಮಣ್ಣಿನ ವಾಸನೆಗಾಗಿ ಹುಡುಕಾಟ ಆರಂಭಿಸಿದರು ಹಬೀಬ್ ತನ್ವೀರ್. ಇದೇ ಕಾಲದಲ್ಲಿ ಅವರು ಛತ್ತೀಸ್‌ಗಢದ ೬ ಜನಪದ ಕಲಾವಿದರನ್ನು ಸೇರಿಸಿಕೊಂಡು ಶೂದ್ರಕನ 'ಮೃಚ್ಛಕಟಿಕ'ದ ಹಿಂದಿ ಅನುವಾದ 'ಮಿಟ್ಟೀ ಕೀ ಗಾಡಿ' (ಮಣ್ಣಿನ ಬಂಡಿ) ನಾಟಕವನ್ನು ಜನಪದ ಶೈಲಿಯಲ್ಲಿಯೇ ಪ್ರಸ್ತುತಪಡಿಸಿದರು. ಇವತ್ತಿಗೂ ಮತ್ತೆ ಮತ್ತೆ ಪ್ರದರ್ಶನಗಳನ್ನು ಕಾಣುತ್ತಿರುವ ಈ ಪ್ರಯೋಗ ಪ್ರಾಚೀನ ನಾಟಕವೊಂದರ ಅತ್ಯಂತ ಆಧುನಿಕ ಪ್ರಸ್ತುತಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

೧೯೫೯ರಲ್ಲಿ ಹಬೀಬ್ ತನ್ವೀರ್ ಮತ್ತು ಅವರ ಹೆಂಡತಿ ಮೋನಿಕಾ ಮಿಶ್ರಾ ಒಂದುಗೂಡಿ ತಮ್ಮದೇ ಆದ ನಾಟಕ ಕಂಪೆನಿ 'ನಯಾ ಥಿಯೇಟರ್'ಅನ್ನು ಕಟ್ಟಿದರು. ವಿವಿಧ ಆಧುನಿಕ ಮತ್ತು ಪ್ರಾಚೀನ ನಾಟಕಗಳನ್ನು ಕಾಲೇಜು ವಿದ್ಯಾರ್ಥಿಗಳಿಂದ, ಶಿಕ್ಷಕರಿಂದ ಮತ್ತು ಬೇರೆ ಹವ್ಯಾಸಿಗಳಿಂದ ಆಡಿಸಿದರು. ಇದು ೧೯೭೦ರವರೆಗೂ ಮುಂದುವರೆಯಿತು.

ಹಬೀಬ್ ತನ್ವೀರರ ಜನಪದ ಸಂಪ್ರದಾಯಗಳಲ್ಲಿನ ಆಸಕ್ತಿ ಬೆಳೆಯುತ್ತಲೇ ಹೋಯಿತು. ಜನಪದ ಕಲಾವಿದರಿಗೆ ತಾವು ನಾಟಕ ನಿರ್ದೇಶನ ಮಾಡುವಾಗ ಕಟ್ಟುನಿಟ್ಟಿನ ಚಲನೆಯನ್ನು ನೀಡುವುದು ಮತ್ತು ಆ ಅನಕ್ಷರಸ್ಥ ಕಲಾವಿದರಿಗೆ ಹಿಂದಿ ಭಾಷೆಯಲ್ಲಿ ನಾಟಕ ಮಾಡಿಸುವುದು ತಪ್ಪು ಎಂದು ಹಬೀಬ್ ತನ್ವೀರ್ ಅರ್ಥ ಮಾಡಿಕೊಂಡರು. ಆದ್ದರಿಂದ ೧೯೭೦ರಿಂದ ೭೩ರತನಕ, ಜನಪದ ಕಲಾವಿದರಿಗೆ ಅವರದೇ ರೀತಿಯಲ್ಲಿ ನಾಟಕದಲ್ಲಿ ಚಲಿಸಲು ಮತ್ತು ಅವರದೇ ಮಾತೃಭಾಷೆಯಾದ ಛತ್ತೀಸ್‌ಗಢಿಯಲ್ಲಿ ಮಾತನಾಡಲು ಅವಕಾಶ ಮಾಡಿಕೊಟ್ಟರು. ಈ ಘಟ್ಟದಲ್ಲಿ ದೇವಸ್ಥಾನಗಳಲ್ಲಿ ನಡೆಯುವ ರಿಚುಯಲ್‌ಗಳಿಂದ ಹಿಡಿದು ಪಂಡವಾನಿ ಎಂಬ ಜನಪದ ಪ್ರಕಾರವನ್ನು ನಾಟಕದಲ್ಲಿ ಬಳಸಿದರು.

೧೯೭೩ರಲ್ಲಿ ರಾಯಪುರದಲ್ಲಿ 'ನಾಚಾ' ಎಂಬ ಪ್ರಕಾರದ ತರಬೇತಿ ಶಿಬಿರವೊಂದನ್ನು ನಡೆಸಿದರು. ಈ ಶಿಬಿರದಲ್ಲಿ ನೂರಕ್ಕಿಂತ ಹೆಚ್ಚು ಜನಪದ ಕಲಾವಿದರು, ಕಾಲೇಜಿನ ಪ್ರೊಫೆಸರ್‌ಗಳು, ಮಾನವ ಶಾಸ್ತ್ರಜ್ಞರು ಭಾಗವಹಿಸಿದ್ದರು. 'ನಾಚಾ'ಪ್ರಕಾರದಲ್ಲಿ ಜನಪ್ರಿಯವಾಗಿದ್ದ ಮೂರು ಕಾಮೆಡಿಗಳನ್ನು ಒಟ್ಟಿಗೆ ಸೇರಿಸಿ ಒಂದು ನಾಟಕವನ್ನು ಹೆಣೆಯಲಾಯಿತು. ಈ ನಾಟಕಕ್ಕೆ 'ಗಾಂವ್ಪೋಂಕಾ ನಾಮ್ ಸಸುರಾಲ್, ಮೋರ್ ನಾಮ್ ದಾಮಾದ್' ಎಂದು ಹೆಸರಿಡಲಾಯಿತು. ಈ ನಾಟಕದಲ್ಲಿ ಮದುವೆ ಹಾಡುಗಳು, ದೇವಸ್ಥಾನದ ಹಾಡುಗಳು ಮತ್ತು ಸುಗ್ಗಿ ಹಾಡುಗಳನ್ನು ಮೊದಲಬಾರಿಗೆ ರಂಗದ ಮೇಲೆ ತರಲಾಯಿತು. ಈ ನಾಟಕದಿಂದ ತಾನು ಹೊಸ ದಾಖಲೆ ಸೃಷ್ಟಿಸಿದೆನೆಂದು ಹಬೀಬ್ ತನ್ವೀರ್ ಅವರಿಗೆ ಅನಿಸಿತು. ಛತ್ತೀಸ್‌ಗಢದಲ್ಲಿ ಮತ್ತು ಭೋಪಾಲ್‌ನಲ್ಲಿ ಹಲವು ಪ್ರದರ್ಶನಗಳಾದ ಮೇಲೆ, ಈ ನಾಟಕವನ್ನು ದೆಹಲಿಯಲ್ಲಿ ಪ್ರಯೋಗಿಸಲಾಯಿತು. ನಾಟಕದ ಭಾಷೆಯು ಛತ್ತೀಸ್‌ಗಢದ ಉಪಭಾಷೆಯಾಗಿದ್ದರೂ, ದೆಹಲಿಯ ಪ್ರೇಕ್ಷಕರು ನಾಟಕದ ಪ್ರತಿಯೊಂದು ಜೋಕ್‌ಅನ್ನೂ ಸವಿದರು. ತುಂಬಿದ ಗೃಹಗಳ ಹಲವು ಪ್ರದರ್ಶನಗಳು ನಡೆದವು. ಈ ನಾಟಕದಲ್ಲಿ ತಾನು ಭಾಷೆಯ ಮಿತಿಯನ್ನು ಮೀರಿದ್ದೆ ಎಂದು ಹಬೀಬ್ ತನ್ವೀರ್ ಹೇಳುತ್ತಾರೆ. ಎಲ್ಲ ನಟರೂ ಜನಪದ ಕಲಾವಿದರಾಗಿದ್ದು, ಅವರ ಅಭಿನಯ ಅದ್ಭುತವಾಗಿತ್ತು.

೧೯೫೦ರಿಂದ ರಂಗಭೂಮಿಯಲ್ಲಿ ತೊಡಗಿಕೊಂಡ ಹಬೀಬ್ ತನ್ವೀರ್ ಅವರಿಗೆ ೧೯೭೩ರಲ್ಲಿ ತಮ್ಮದೇ ಆದ ನಾಟಕ ಶೈಲಿಯೊಂದು ಈ ನಾಟಕದ ಮೂಲಕ ದೊರೆತಿತ್ತು. ಇಂಪ್ರೊವೈಸೇಷನ್ – ಅಂದರೆ ಆಶು ದೃಶ್ಯಗಳನ್ನು ಕಟ್ಟುವ ಈ ಶೈಲಿಯನ್ನು, ಅವರು ಕೊನೆಯವರೆಗೂ ಅನುಸರಿಸಿದರು.

ಜನಪದ ಸಂಪ್ರದಾಯದಿಂದ ಹಬೀಬ್ ತನ್ವೀರ್ ತಮ್ಮ ಸ್ಫೂರ್ತಿಯನ್ನೂ, ಕಲಾವಿದರನ್ನೂ, ರಂಗತಂತ್ರಗಳನ್ನೂ ಕೆಲವೊಮ್ಮೆ ಕಥಾವಸ್ತುಗಳನ್ನೂ ಪಡೆಯುತ್ತಾರೆ. ಆದರೆ ಇವರ ರಂಗಭೂಮಿಯನ್ನು ಜನಪದ ರಂಗಭೂಮಿ ಎಂದು ಕರೆಯಲಾಗುವುದಿಲ್ಲ. ಹಬೀಬ್ ತನ್ವೀರ್ ಇತಿಹಾಸ ಮತ್ತು ರಾಜಕೀಯ ಪ್ರಜ್ಞೆಯಿರುವ, ಸೂಕ್ಷ್ಮಜ್ಞತೆಯಿರುವ, ಆಧುನಿಕ ಮನೋಭಾವದ ಪ್ರಜ್ಞಾವಂತ ಕಲಾವಿದ. ಜನಪದ ಪ್ರಕಾರಗಳೊಂದಿಗೆ ಹೆಚ್ಚು ಕೆಲಸ ಮಾಡಿದ ಇವರ ನಿರ್ಧಾರ ಅತ್ಯಂತ ಪ್ರಜ್ಞಾಪೂರ್ವಕವಾಗಿದ್ದು, ಇದು ಸೌಂದರ್ಯ ಮೀಮಾಂಸೆಗಿಂತ ಸೈದ್ಧಾಂತಿಕವಾದ ಆಯ್ಕೆಯಾಗಿದೆ. ಇವರಿಗೆ ಜನಪ್ರಿಯ ರಂಗಪ್ರಕಾರಗಳ ಬಗೆಗಿರುವ ಪ್ರೀತಿಗೂ, ಇವರ ಎಡಪಂಥೀಯ ಧೋರಣೆಗಳಿಗೂ ನಿಕಟವಾದ ಸಂಬಂಧವಿದೆ. ೧೯೪೦ರ ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಇಪ್ಟಾ



ಹಬೀಬ್ ತನ್ವೀರ್ ಬರೆದಿರದ, ಆದರೆ ಬಹುವಾಗಿ ಪ್ರದರ್ಶಿಸಿದ ಒಂದು ನಾಟಕ 'ಪೋಂಗಾ ಪಂಡಿತ್'. ಅದು ನಾಚಾ ಪರಂಪರೆಯ ಜಾನಪದ ನಾಟಕ. ಚುನಾವಣೆಗಳ ಸಂದರ್ಭದಲ್ಲಿ ಇದು ಛತ್ತೀಸ್‌ಗಢದಲ್ಲಿ ಬಹಳ ಜನಪ್ರಿಯವಾಗಿತ್ತು. ಅದನ್ನೇ ಮಧ್ಯಪ್ರದೇಶದಲ್ಲಿ ಪ್ರದರ್ಶಿಸಿದಾಗ ಹಿಂದು ಮತೀಯವಾದಿಗಳು ಅಡ್ಡಿಯುಂಟುಮಾಡಿದರು. ಅಂಥದೇನಿತ್ತು ನಾಟಕದಲ್ಲಿ? ಅದು ಅಸ್ಪೃಶ್ಯತೆಯನ್ನು ಕಟುವಾಗಿ ವಿರೋಧಿಸಿತ್ತು, ಅಷ್ಟೆ. ಅಂದರೆ, ಅಸ್ಪೃಶ್ಯತೆಯನ್ನು ಸದಾ ಮುಂದುವರಿಸಬೇಕೆಂದು ಅರ್ಥವೆ? ಭೋಪಾಲ್‌ನಲ್ಲಿ ಹಲ್ಲೆಯನ್ನು ತಪ್ಪಿಸಲು ಹಬೀಬ್ 'ಪೋಂಗಾ ಪಂಡಿತ್' ಬದಲು 'ಚರಣ್‌ದಾಸ್ ಚೋರ್' ನಾಟಕವನ್ನು ಪ್ರದರ್ಶಿಸಿದರು. ನಾಟಕ ಮುಗಿದ ನಂತರ ಕಲಾವಿದರನ್ನು ಪರಿಚಯಿಸಿರೆಂದು ಜನ ಕೇಳಿದಾಗ ಹಬೀಬ್ ಹೇಳಿದರು: ''ನಮ್ಮ ಕಲೆ ಮಾತನಾಡಿಯಾಗಿದೆ. ಇನ್ನು ವ್ಯಕ್ತಿಗಳ ಪರಿಚಯ ಏಕೆ? ಬದಲಿಗೆ ನಾಲ್ಕು ಹಾಡುಗಳನ್ನು ಹಾಡೋಣವೆ ?'' ಜನ ಸಮ್ಮತಿಸಿದರು. ಹಾಡುತ್ತಾ ಹಾಡುತ್ತಾ 'ಪೋಂಗಾ ಪಂಡಿತ್' ನಾಟಕದ ಹಾಡುಗಳಿಗೆ ಬಂದುಬಿಟ್ಟರು. ಹಿಂದುತ್ವವಾದಿಗಳಿಗೆ ಭಾರಿ ಕಿರಿಕಿರಿ, ಏನು ಮಾಡಬೇಕೆಂದು ತಿಳಿಯದು. ಜನ ಹಾಡುಗಳನ್ನು ಮೆಚ್ಚಿ ಸ್ವಾಗತಿಸುತ್ತಿದ್ದಾರೆ. ಕಡೆಗೆ ನಾಟಕದ ಪ್ರದರ್ಶನವೂ ಆಗಿಬಿಟ್ಟಿತು. ಇನ್ನೊಂದು ಹಳ್ಳಿಯಲ್ಲಿ 'ಪೋಂಗಾ ಪಂಡಿತ್'ಗೆ ಭಾರಿ ಪ್ರತಿಕ್ರಿಯೆ ಸಿಕ್ಕಿತು. ಜನ ಕೂಗಿದರು : ''(ಅಸ್ಪೃಶ್ಯತೆಯನ್ನು ಬೆಂಬಲಿಸುವವರಿಗೆ) ಚಪ್ಪಲಿ ಏಟು; ಜೈ ಶ್ರೀರಾಮ್.'' ಹಬೀಬ್ ಹೇಳಿದರು : ''ನನ್ನನ್ನು ಬೇಕಾದರೆ ಬಯ್ಯಿರಿ. ಯಾರನ್ನೋ ಬೈಯ್ಯುವಾಗ 'ಜೈ ಶ್ರೀರಾಮ' ಎಂದು ಆ ಮಹಾನುಭಾವನ ಹೆಸರನ್ನು ತರಬೇಡಿ.'' ಮತೀಯವಾದಿಗಳ ತಿಳಿಗೇಡಿತನವನ್ನು ಕೋಪದಿಂದ ಅವಹೇಳನ ಮಾಡದೆ, ಅವರೂ ತಲೆದೂಗುವಂತೆ ಭಾರತದ ಇಂದಿನ ಕೋಮು-ಪರಿಸ್ಥಿತಿಯನ್ನು ಸರಳವಾಗಿ ಮತ್ತು ಭಾವನೆಗಳ ಆರ್ದ್ರತೆಯೊಂದಿಗೆ ವಿವರಿಸುವುದು ಹಬೀಬ್‌ರ ಪದ್ಧತಿ. ಪೊಲೀಸರು ಹಿಂದುತ್ವವಾದಿಗಳ ರಂಪಾಟವನ್ನು ಬೆಂಬಲಿಸಿ ಒಮ್ಮೆ ಇಡೀ ರಂಗಮಂದಿರವನ್ನು ಖಾಲಿ ಮಾಡಿಸಿಬಿಟ್ಟರು. ಹಬೀಬ್ ಹೇಳಿದರು: ''ನಾವು ನಾಟಕ ಮಾಡಲು ಬಂದಿದ್ದೇವೆ, ಮಾಡಿಯೇ ತೀರುತ್ತೇವೆ.'' ಪ್ರೇಕ್ಷಕರೇ ಇಲ್ಲದ ರಂಗಮಂದಿರದಲ್ಲಿ ಅವರ ನಾಟಕ ಪೂರ್ತಿಯಾಗಿ ನಡೆಯಿತು. ಹತ್ತಿಪ್ಪತ್ತು ಪೊಲೀಸರಷ್ಟೇ ನಾಟಕ ನೋಡಿದರು. ಧೃತಿಗೆಡದ ಮಹಾನ್ ಚೇತನ ಹಬೀಬ್ ತನ್ವೀರ್ ಎಂಬುದಕ್ಕೆ ಇದೊಂದು ನಿದರ್ಶನ.

ಇದೀಗ ಇನ್ನೊಂದು ಸುದ್ದಿ ಬಂದಿದೆ. ಹಿಂದುತ್ವದ ಹುಚ್ಚು ನೆತ್ತಿಗೇರಿದಾಗ ಭಾರತದ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಕಲೆಯ ಸ್ವಾಯತ್ತತೆ, ಎಲ್ಲದರ ಮೇಲೂ ಹೀನ ಹಲ್ಲೆ ನಡೆಯುತ್ತದೆಂಬುದಕ್ಕೆ ಇದೊಂದು ನಿದರ್ಶನ. ಹಬೀಬ್ ತನ್ವೀರರ ನಾಟಕಗಳನ್ನು ಕಲಾವಿದರು ಒಟ್ಟಾಗಿ ಕೂತು ಓದುವುದು ಒಂದು ಪದ್ಧತಿ. ಉತ್ತರಾಂಚಲದಲ್ಲಿ ಕೆಲವರು ಇದನ್ನು ಮಾಡುತ್ತಿದ್ದುದಕ್ಕೆ ಆಕ್ಷೇಪವೆತ್ತಿರುವ ಭಾರತೀಯ ಜನತಾ ಪಕ್ಷದ ಸರ್ಕಾರ ಅಂತಹ ಸಾಮೂಹಿಕ ಓದನ್ನು ಬಹಿಷ್ಕರಿಸಿದೆ ! ಇದು ದುರಹಂಕಾರವೋ ಅಥವಾ ಭೀತಿಯೋ ಎಂಬುದನ್ನು ಓದುಗರು ತೀರ್ಮಾನಿಸಬೇಕು.

– 'ತೆಹೆಲ್ಕಾ'

ಹಾಗೂ ಪ್ರಗತಿಪರ ಲೇಖಕರ ಸಂಘ (ಪಿ. ಡಬ್ಲ್ಯು. ಎ.) ಗಳೊಂದಿಗೆ ಇವರಿಗಿದ್ದ ಸಂಬಂಧ, ಇವರ ರಂಗಭೂಮಿಯ ಧೋರಣೆಗಳಿಗೆ ಕಾರಣವಾಗಿದೆ. ೧೯೪೦ರಲ್ಲಿ ಆರಂಭವಾದ ಇವರ ಜನಪರ ನಿಲುವುಗಳು, ಬದ್ಧತೆ ಕೊನೆಯವರೆಗೂ ಅವರಲ್ಲಿ ಜೀವಂತವಾಗಿದ್ದವು.

ತಮ್ಮ ಅರ್ಧ ಶತಮಾನದ ರಂಗಜೀವನದಲ್ಲಿ ಹಬೀಬ್ ತನ್ವೀರ್, ಹಲವು ಸ್ವಂತ ನಾಟಕಗಳನ್ನು ಬರೆದು ನಿರ್ದೇಶಿಸಿದ್ದಾರೆ. ಜನಪದ ಪ್ರಕಾರಗಳಲ್ಲಿ ಪ್ರಚಲಿತವಿರುವ ನಾಟಕಗಳ ಸ್ಫೂರ್ತ ವಿಸ್ತರಣೆ (ಆಶು ಕಲ್ಪನೆ) ಮಾಡಿದ್ದಾರೆ. ಸಂಸ್ಕೃತದ ಕ್ಲಾಸಿಕ್‌ಗಳನ್ನು ನಿರ್ದೇಶಿಸಿದ್ದಾರೆ ಹಾಗೂ ಶೇಕ್ಸ್‌ಪಿಯರ್, ಮೋಲಿಯೇರ್, ಬ್ರೆಕ್ಟನ ನಾಟಕಗಳ ರೂಪಾಂತರ, ಅನುವಾದಗಳನ್ನು ನಿರ್ದೇಶಿಸಿದ್ದಾರೆ. ಅವರ 'ಆಗ್ರಾ ಬಜ಼ಾರ್' ನಾಟಕದಿಂದ ಹಿಡಿದು ಇವತ್ತಿನವರೆಗೂ ನಿರ್ದೇಶಿಸಿದ ನಾಟಕಗಳಲ್ಲಿ ಅವರದೇ ರಂಗಶೈಲಿ, ಜನಪ್ರಿಯ - ಜನಪದ ಪ್ರಕಾರ ಮತ್ತು ದೇಸೀ ಪ್ರಕಾರಗಳನ್ನು ಹುಡುಕುವುದಲ್ಲದೇ, ಜ್ವಲಂತ ಸಾಮಾಜಿಕ - ರಾಜಕೀಯ ಸಮಸ್ಯೆಗಳ ವಿಶ್ಲೇಷಣೆ ಮಾಡುವಲ್ಲಿ ಅವರ ನಾಟಕಗಳು ಅತ್ಯಂತ ಆಧುನಿಕವೂ ಆಗಿವೆ. ಇವರ ಕಾಳಜಿಗಳು ಏಕಕಾಲದಲ್ಲಿ ಸಾಂಸ್ಕೃತಿಕ, ಮನೋವೈಜ್ಞಾನಿಕ, ತಾತ್ವಿಕ ಹಾಗೂ ರಾಜಕೀಯ ನೆಲೆಗಳಲ್ಲಿ ಗಟ್ಟಿಗೊಂಡಿದ್ದವು.

ಹಬೀಬ್ ತನ್ವೀರರಿಗೆ ಜನಪದ ರಂಗಪ್ರಕಾರಗಳಲ್ಲಿರುವ ಆಸಕ್ತಿ ಬೇರೆಯವರಿಗೆ ಜನಪದ ಪ್ರಕಾರಗಳಲ್ಲಿರುವ ಆಸಕ್ತಿಗಿಂತ ಎರಡು ರೀತಿಗಳಲ್ಲಿ ಭಿನ್ನ. ಅದೆಂದರೆ, ತನ್ವೀರ್‌ರ ರಾಜಕೀಯ ಪ್ರಜ್ಞೆ ಮತ್ತು ಜನಪದ ಪ್ರಕಾರಗಳ ಬಗ್ಗೆ ಅವರಿಗಿದ್ದ ಆರೋಗ್ಯಕರ ಧೋರಣೆಗಳು. ಜನಪದ ಪ್ರಕಾರಗಳ ಬಗ್ಗೆ ತನ್ವೀರ್ ಅವರಿಗಿದ್ದ ಮೋಹ ಪ್ರತಿಗಾಮಿ ಅಥವಾ ಸಂಪ್ರದಾಯವಾದಿ ಅಲ್ಲ. ಬದಲಿಗೆ,




ದೂರದರ್ಶನ ಮತ್ತು ಚಲನಚಿತ್ರಗಳ ಪ್ರಭಾವದಿಂದ ಜನಪದ ಪ್ರಕಾರಗಳಲ್ಲಿ ಗಂಭೀರವಾದ ಕಲಸು ಮೇಲೋಗರ ಹಾಗೂ ಪತನಗಳಾಗಿದ್ದರೂ ಜನಪದ ಪ್ರಕಾರಗಳಲ್ಲಿರುವ ಸೃಷ್ಟಿಶೀಲ ಸಾಧ್ಯತೆಗಳು ಹಾಗೂ ಕಲಾತ್ಮಕ ಚೈತನ್ಯ ಅವರನ್ನು ಸೆಳೆದಿವೆ. ತನ್ವೀರರು ಜನಪದ ಪ್ರಕಾರಗಳಿಂದ ಕಥಾವಸ್ತುಗಳನ್ನು ತಂತ್ರಗಳನ್ನು ಮತ್ತು ಸಂಗೀತವನ್ನು ಬಳಸಿಕೊಳ್ಳಲು ಹಿಂಜರಿಯಲಿಲ್ಲ; ಆದರೆ ಜನಪದ ಪ್ರಕಾರಗಳನ್ನು ತಮ್ಮ ಮೂಲ ರೂಪದಲ್ಲಿ ಪುನರುಜ್ಜೀವನಗೊಳಿಸಲು ಅಥವಾ ಮ್ಯೂಸಿಯಂ ಪೀಸ್‌ಗಳಂತೆ ಪ್ರದರ್ಶಿಸುವುದರಿಂದ ದೂರ ಉಳಿಯುತ್ತಿದ್ದರು.

'ಚರಣ್‌ದಾಸ್ ಚೋರ್' ಹಬೀಬ್ ತನ್ವೀರರ ಜನಪ್ರಿಯ ನಾಟಕ. ಈ ನಾಟಕ ದೇಶ-ವಿದೇಶಗಳಲ್ಲಿ ಸಾವಿರಾರು ಪ್ರದರ್ಶನಗಳನ್ನು ಕಂಡಿದೆ. ತನ್ವೀರರ ನಾಟಕದ ನಾಯಕರೆಲ್ಲ ಸಾಮಾನ್ಯ ಜನರು. ಇಂತಹ ಸಾಮಾನ್ಯರ ಬದುಕನ್ನು ರಂಗದ ಮೇಲೆ ದೇಸೀ ಶೈಲಿಯಲ್ಲಿ ಚಿತ್ರಿಸುತ್ತಲೇ ಹಬೀಬ್ ತನ್ವೀರ್ ಭಾರತೀಯ ರಂಗಭೂಮಿಯ ಧ್ರುವತಾರೆಯಾಗಿದ್ದಾರೆ. ೮-೬-೨೦೦೯ರಂದು ಹಬೀಬ್ ತನ್ವೀರ್ ಭೋಪಾಲ್‌ನಲ್ಲಿ ತಮ್ಮ ೮೫ನೇ ವಯಸ್ಸಿನಲ್ಲಿ ಕೊನೆಯುಸಿರೆಳೆದರು.

ಎಸ್. ಮಾಲತಿ
ಮಹಾಲಸ, ಜೋಗ್‌ರಸ್ತೆ, ಸಾಗರ- ೫೭೭ ೪೦೧
ಶಿವಮೊಗ್ಗ ಜಿಲ್ಲೆ

# ಭಯ! ಭಯ!!

**ಕೆ. ವಿ. ಚಂದ್ರಜ್ಯೋತಿ**



ಆ ಭವ್ಯ ಬಂಗಲೆಯ ಹಾಲ್‌ನಲ್ಲಿ ಕಸ ಧೂಳು ಬಂದು ಬೀಳುವುದು ಅಪ್ಪರಲ್ಲೆ ಇದೆ. ಅಶಕ್ತರಿಗೆ ತಳ್ಳಲೂ ಪ್ರಯಾಸವಾಗುವಂಥ ಕುಸುರಿ ಕೆಲಸದ ಮರದ ಬಾಗಿಲು ಸಾಮಾನ್ಯವಾಗಿ ಮುಚ್ಚಿಕೊಂಡೇ ಇರುತ್ತದೆ. ಅಗಲವಾದ ಕಿಟಕಿಗಳ ಗಾಜಿನ ಬಾಗಿಲುಗಳು ಸ್ವಲ್ಪ ತೆರೆದುಕೊಂಡೇ ಇರುತ್ತವಾದರೂ, ಸುಂದರ ಚಿತ್ತಾರದ ಪರದೆಗಳು ಜೋರುಗಾಳಿಗೆ ತುಸು ಏರಿಳಿಯುತ್ತವಾದರೂ ಮನೆಯ ಸುತ್ತಲೆಲ್ಲೂ ಇಲ್ಲದ ಕಸ, ಏಳದ ಧೂಳು ಒಳಗೆ ಬಂದೀತಾದರೂ ಹೇಗೆ? ಮನೆ ಯಜಮಾನ ತನ್ನ ವ್ಯಾಪಾರ ವ್ಯವಹಾರಗಳಲ್ಲಿ ಮುಳುಗಿ ಮನೆಗೆ ಬರುವುದೇ ಅಪರೂಪ. ಮನೆಯೊಡತಿ ತಾನು ಮಾಡಿದ ಅಥವಾ ಹಾಗೆ ಪ್ರಚಾರ ಮಾಡಿಕೊಂಡ ಸಮಾಜಸೇವೆಯನ್ನು ಏಣಿಯಾಗಿ ಮಾಡಿಕೊಂಡು ಈಗಷ್ಟೇ ರಾಜಕೀಯದ ಗರಡಿಗೆ ಇಳಿದಿದ್ದಾಳೆ. ಆ ಪಟ್ಟುಗಳ ಪ್ರಯೋಗಕ್ಕೆ ಮನೆ ತಕ್ಕುದಲ್ಲವಾದುದರಿಂದ ಹೊರಗಡೆಯೆ ಹೆಚ್ಚಾಗಿ ಇರಬೇಕಾಗುತ್ತದೆ. ಹದಿಹರಯದ ಇಬ್ಬರು ಮಕ್ಕಳಿಗಂತೂ ಮನೆ, ಹೋಟೆಲು, ರೆಸಾರ್ಟುಗಳ ನಡುವಣ ವ್ಯತ್ಯಾಸವೇ ಗೊತ್ತಿಲ್ಲ. ಬಂಗಲೆಯಲ್ಲಿ ಪಾರ್ಟಿಗೀರ್ಟಿ ನಡೆಯುತ್ತದೊ ಅಥವಾ ಹೊರಗಡೆಯೆ ಏರ್ಪಾಡುಮಾಡುತ್ತಾರೋ ಎಂಬುದು ಕೆಲಸದಾಕೆ ಲಕ್ಷ್ಮಮ್ಮನಿಗಿನ್ನೂ ತಿಳಿದಿಲ್ಲ. ಅವಳು ಈ ಮನೆಯಲ್ಲಿ ಕಸ ಮುಸುರೆಯವಳಾಗಿ ನೌಕರಿಗೆ ಬಂದು ಎರಡು ತಿಂಗಳಾಗಿವೆಯಷ್ಟೆ. ಈ ಅವಧಿಯಲ್ಲಿ ಆ ಕುಟುಂಬವೇ ತಮ್ಮ ಮನೆಗೆ ನೆಂಟರಂತೆ ಬಂದು ಇದ್ದು ಹೋಗುತ್ತಿದೆಯೇ ಹೊರತು ಬೇರೆ ನೆಂಟರುಗಿಂಟರು ಬಂದಿಲ್ಲ. ಕಸ ಗುಡಿಸಿ, ಕಾಲಿಟ್ಟರೆ ಜಾರುವಂಥ ಮೊಸಾಯಿಕ್ ನೆಲವನ್ನು ಒರೆಸಿ, ಪಾತ್ರೆಗಳನ್ನು ತೊಳೆದಿಟ್ಟು ಹೋಗುವುದಷ್ಟೇ ಲಕ್ಷ್ಮಮ್ಮನ ಕೆಲಸ. ಅಡಿಗೆಯಾಕೆ ಮನೆ ಮಂದಿಯ ಸೀರೆ, ಉಡುಪುಗಳನ್ನು ದೋಬಿಗೆ ಕೊಟ್ಟು ಹಿಂದಕ್ಕೆ ಪಡೆದು ಅವನ ಲೆಕ್ಕಾಚಾರ ತೀರಿಸುವಳು. ತೋಟದ ಉಸ್ತುವಾರಿಗೆ ಆಳಿದ್ದಾನೆ. ಮನೆಗೆ ಬೇಕಾದ ಸಾಮಾನುಗಳನ್ನು ಅಡಿಗೆಯಾಕೆ ಕಾರಿನಲ್ಲಿ ಹೋಗಿ ತರುವಳು. ಕಾರು ಇಲ್ಲದ ಸಂದರ್ಭದಲ್ಲಿ ಲಕ್ಷ್ಮಮ್ಮನೂ ಜೊತೆಯಲ್ಲಿ ಹೋಗಿ ಆಟೋ ಖರ್ಚಿಲ್ಲದೆ ಅರ್ಧಭಾರ ಹೊತ್ತು ತರಬೇಕಾಗುತ್ತದೆ. ತೋಟದ ಮಾಲಿಯೂ ಲಕ್ಷ್ಮಮ್ಮನಿಗೆ ತೋಟಕ್ಕೆ ನೀರು ಬಿಡುವ, ಹೊಸದಾಗಿ ಪಾತಿ ಮಾಡಿ ಗಿಡಗಳನ್ನು ನೆಡುವ, ಪ್ರೂನ್ ಮಾಡುವ ಕೆಲಸಗಳನ್ನು ಆಗಾಗ ಹಚ್ಚುವುದುಂಟು. ಐವತ್ತೈದು ವರ್ಷದ ಲಕ್ಷ್ಮಮ್ಮನಿಗಿಂತ ಅವರಿಬ್ಬರೂ ಕಿರಿಯರು, ಬಲಶಾಲಿಗಳು. ಲಕ್ಷ್ಮಮ್ಮ ಇದ್ದುದರಲ್ಲಿ ನೀಟಾಗಿದ್ದಾಳೆಂದು ಅಡಿಗೆಯಾಕೆ ಅವಳಿಗೆ ತರಕಾರಿ, ಮಾಂಸ ಕೊಚ್ಚುವ ಕೆಲಸಗಳನ್ನಷ್ಟೇ ಹೇಳುತ್ತಾಳೆ. ಮನೆಯೊಡತಿ ಇಲ್ಲದ ಸಮಯದಲ್ಲಿ ಪೂರಾ ಅಡಿಗೆಯನ್ನೇ ಇವಳ ಕೈಲಿ ಮಾಡಿಸಲು ಆಕೆ ಹೇಸುವಂಥವಳಲ್ಲ. ಯಜಮಾನಿಗೆ ರುಚಿಯಲ್ಲಿ ವ್ಯತ್ಯಾಸ ತಿಳಿಯುತ್ತದೆ ಎಂಬ ಹಿಂಜರಿಕೆಯಷ್ಟೆ. ಅವರು ಏನೇ ಹೇಳಲಿ ಲಕ್ಷ್ಮಮ್ಮ 'ಮಾಡುವುದಿಲ್ಲ' ಎನ್ನುವ ಸ್ಥಿತಿಯಲ್ಲಿಲ್ಲ.

ಅರೆಮಲೆನಾಡಿನ ಹಳ್ಳಿಯೊಂದರಲ್ಲಿ ಕಿತ್ತುತಿನ್ನುವ ಬರಗಾಲದ ಬೇಗೆಯ ಜೊತೆ ತನ್ನ ಮಗಳು-ಅಳಿಯ ಇಬ್ಬರೂ ಎಂತಹುದೊ ಜ್ವರಕ್ಕೆ ಆಹುತಿಯಾದ ದುಃಖದಿಂದಲೂ, ವಯಸ್ಸಾದ ತನಗೂ ಆ ಜ್ವರ ಬಂದು ಹೇಗೊ ಬದುಕುಳಿದು ಹನ್ನೊಂದು ವರ್ಷದ ಮೊಮ್ಮಗ ಗಿರಿಯೊಂದಿಗೆ ಎಲ್ಲ ಕಷ್ಟಗಳನ್ನು ಸಹಿಸಿಕೊಂಡವಳು ಈ ಲಕ್ಷ್ಮಮ್ಮ. ಪಟ್ಟಣ ಬದುಕುವ ದಾರಿ ತೋರಬಹುದು ಎಂದು ಆಸೆ ಹೊತ್ತು ತನ್ನಂತೆಯೇ ಕೃಷಿ ಕಾರ್ಮಿಕರಾಗಿದ್ದ ಕೆಲವರೊಂದಿಗೆ ಈ 'ಮೆಗಾಸಿಟಿ'ಗೆ ಬಂದಳು. ನೋಡಲು ಅರವತ್ತೈದು ಹೇಳುವಂತೆ ಕಾಣಿಸುವ ಲಕ್ಷ್ಮಮ್ಮ ಕಟ್ಟಡ ಕಾಮಗಾರಿಯಲ್ಲಿ ದುಡಿಯಲು ಶಕ್ತಳಲ್ಲ. ಅಂಥ ಕೆಲಸಗಳಿಗೆ ಅವಳನ್ನು ಯಾರೂ ಸೇರಿಸಲೂ ಇಲ್ಲ. ಅಜ್ಜಿ, ಮೊಮ್ಮಗ ಇತರರೊಂದಿಗೆ ಖಾಲಿ ಸೈಟೊಂದರಲ್ಲಿ ಗೂಡು ಹಾಕಿಕೊಂಡು ತಾವು ಗೋಣಿ ಚೀಲಗಳಲ್ಲಿ ತಂದಿದ್ದ ಪಾತ್ರೆ ಪರಡಿ ಮತ್ತು ಹಳೆಗಾಲದ ಪೆಟ್ಟಿಗೆಯೊಂದನ್ನು ಇಟ್ಟುಕೊಂಡು ಸಂಸಾರ ಹೂಡಿದರು.

"ಅಂಗೆಲ್ಲಾ ಅಂದ್ಕಾಬಾರ್ದು. ಆಗೋದಾಗ್ಲಿ ಅಂತ ಸಿವನ ಎಸರೇಳ್ತಾ ಮನಿಕ್ಕಾ. ಮಳೆ ನಿಲ್ಲಾತನ್ಕ ಭಯವೇ." ಅಜ್ಜಿ ಮೊಮ್ಮಗ ಭ್ರೂಣದ ಶಿಶುವಿನಂತೆ ಕೈಕಾಲು ಮಡಿಚಿಕೊಂಡು ಮಲಗಿದರು. "ಬರ ಬಂದ್ರೂ ನಮ್ಗೆ ಭಯ! ಮಳೆ ಬಂದ್ರೂ ಭಯ! ಈ ಭಯ ಇಲ್ದೆ ನಾವು ಇರಾಅಂಗೆ ಮಾಡ್ಕಬೇಕಜ್ಜೀ ಅದಾಗಕ್ಕಿಲ್ವಾ?" ಮೊಮ್ಮಗನ ಯಕ್ಷಪ್ರಶ್ನೆಗೆ ಉತ್ತರಿಸಲಾಗದೆ ಲಕ್ಷ್ಮಮ್ಮ 'ಶಿವ ಶಿವ' ಎಂದು ಜಪಿಸತೊಡಗಿದಳು.

ಮೇಸ್ತ್ರಿಯೊಬ್ಬನ ನೆರವಿನಿಂದ ಈ ಬಂಗಲೆಯಲ್ಲಿ ಕೆಲಸ ಸಿಕ್ಕಿತು.

ಬಾಲ ಕಾರ್ಮಿಕರ ಪಟ್ಟಿಗೆ ಬರುವ ಮೊಮ್ಮಗ ಗಿರಿ ''ನೀನ್ ಸುಮ್ಕಿರು ಅಜ್ಜೀ ನಾನೆಲ್ಲಾದ್ರೂ ಕೂಲಿ ಕೆಲ್ಸಕ್ಕೋಯ್ತಿನಿ'' ಅನ್ನುತ್ತಾನೆ. ಈ ನಡುಗಾಲದಲ್ಲಿ ಅವನನ್ನು ಯಾವ ಶಾಲೆಗೆ ಹಾಕಿಯಾಳು ? ಯಾವ ಕೆಲಸಕ್ಕೆ ಅಟ್ಟಬಲ್ಲಳು ? ಕೊನೆಗೆ ಮೊಬೈಲ್ ಕ್ಯಾಂಟೀನಿನ ಮಾಲೀಕನೊಬ್ಬ ಕೋಲಿನಂತೆ ಉದ್ದಕ್ಕೆ ಬೆಳೆದಿದ್ದ ಗಿರಿಯನ್ನು ''ಯಾರಾದ್ರೂ ಬಂದ್ ಕೇಳುದ್ರೆ ನನ್ ವಯಸ್ಸು ಹದಿನಾರಾಗೈತೆ ಅಂತ ಯೋಳ್‌ಬೇಕು'' ಎಂಬ ಕರಾರಿನೊಂದಿಗೆ ಸಹಾಯಕನನ್ನಾಗಿ ನೇಮಿಸಿಕೊಂಡ. ಅಜ್ಜಿ-ಮೊಮ್ಮಗ ಹೇಗೊ ಬದುಕಬೇಕಲ್ಲಾ ಎಂದು ಅಳುತ್ತಾ ಬದುಕದೆ, ಬದುಕಲೇಬೇಕು ಎಂಬ ಛಲದಿಂದ ಹೋರಾಡುತ್ತಿದ್ದಾರೆ.

* * *

ಕಸ ಇರಲಿ ಬಿಡಲಿ ನೆಲದ ಮೇಲೆ ಟಿವಿ ಸ್ಟಾಂಡ್, ಸೋಫಾಗಳು ಟೀಪಾಯಿಗಳ ಹಿಂದೂ ಮುಂದೂ ಪೊರಕೆಯಾಡಿಸುತ್ತಿದ್ದಾಳೆ ಲಕ್ಷ್ಮಮ್ಮ. ಆಗ ಬಾನಿನಲ್ಲಿ ಗುಡುಗುಡು ಸದ್ದು! ಅವಳು ಲಗುಬಗೆಯಿಂದ ಚೂರುಪಾರು ಕಸವನ್ನು ಒಟ್ಟುಗೂಡಿಸಿ ಬುಟ್ಟಿಗೆ ಹಾಕಿ ಬಾಗಿಲು ತೆರೆದು ನೋಡುತ್ತಾಳೆ ! ಸ್ವಲ್ಪ ಸಮಯದ ಹಿಂದೆ ಬೆಳ್ಳಿ ಜರತಾರಿ ವಸ್ತ್ರದಂತೆ ಫಳಫಳ ಹೊಳೆಯುತ್ತಿದ್ದ ಆಕಾಶ ಕಪ್ಪಿಟ್ಟು ಹೋಗಿದೆ. ಸೂರ್ಯ ಮಾಯವಾಗಿದ್ದಾನೆ. ಗಾಳಿ ಭರ್ರೋ ಎಂದು ಬೀಸಿ ಬರಲಿರುವ ಮಳೆಯನ್ನು ತಡೆಯುವ ಪ್ರಯತ್ನದಲ್ಲಿ ಕಾರ್ಮೋಡಗಳಿಂದ ತಳ್ಳಿಸಿಕೊಳ್ಳುತ್ತಿದೆ. ''ಓ ಆಕಾಶವೇ ಕಳಚ್ಕಂಡು ಉದುರೋ ಹಂಗಾಗೈತೆ. ಬಿರ್‍ನೆ ಒಂಟುಬಿಡ್ಬೇಕು. ಗಿರಿ ಬಂದ್‌ಬುಟ್ಟಿರ್ತನೆ'' ಎಂದು ಕೊಳ್ಳುತ್ತಾಳೆ. ಗಿರಿ ದುಡಿಯುತ್ತಿರುವ ಕ್ಯಾಂಟೀನ್‌ನಲ್ಲಿ ತಿಂಡಿ ಮಾತ್ರ ಲಭ್ಯ. ಮಧ್ಯಾಹ್ನ ಕ್ಯಾಂಟೀನ್ ಮುಚ್ಚಿ ಬೇರೆ ವ್ಯಾಪಾರಕ್ಕೆ ಹೋಗುತ್ತಾನೆ ಅದರೊಡೆಯ.

ಕಸಮುಸುರೆ ಮುಗಿಸಿದ ಲಕ್ಷ್ಮಮ್ಮ ಅಡಿಗೆಯಾಕೆ ಕಟ್ಟಿಕೊಟ್ಟ ತಿಂಡಿಯೊಂದಿಗೆ ಸಾಧ್ಯವಾದಷ್ಟು ವೇಗವಾಗಿ ಹೆಜ್ಜೆ ಹಾಕಿದಳು. ಬಂಗ್ಲೆಗೂ ಝೋಪಡಿಗೂ ಅಂತರ ಹೆಚ್ಚೇನಿಲ್ಲ, ಎರಡು ಕಿ. ಮೀ. ಆಗುತ್ತದೆ, ಅಷ್ಟೆ. 'ಬೇಗ ಬೇಗ ಹೋಗು' ಎಂದು ಗುಡುಗು ಗದರಿಸುತ್ತಲೇ ಇದೆ. ಮಧ್ಯಾಹ್ನ ಕ್ಯಾಂಟೀನ್ ಕೆಲಸ ಮುಗಿಸುವ ಗಿರಿ ಸಂಜೆ ಒಂದು 'ಸೇವಾಸಂಘ'ದಲ್ಲಿ ಓದು ಬರಹ ಇಂಗ್ಲಿಷು, ಗಣಿತ ಕಲಿಯುತ್ತಿದ್ದಾನೆ. ''ಇವತ್ತು ಅಲ್ಲಿಗೂ ಕಳಿಸ್‌ಬಾರ್ದು'' ಎಂದುಕೊಳ್ಳುತ್ತಾ ಲಕ್ಷ್ಮಮ್ಮ ಝೋಪಡಿ ತಲುಪಲು ನಾಲ್ಕು ಮಾರು ಇರುವಾಗಲೇ ಮಳೆ ಶುರುವಾಗಿ ಧಾರಾಕಾರವಾಗಿ ಸುರಿಯತೊಡಗಿತು. ಗಿರಿಯ ಮುಖ ಅರಳಿತ್ತು.

''ನೋಡ್ದಾ ಅಜ್ಜೀ ಮಳೆ ಬಂದ್ರೆ ಸಾಕು ಅಂತ ಅಳ್ಳಿನಾಗೆ ಎಷ್ಟೆಲ್ಲಾ ಅರಕೆ ಒತ್ಕೊಂತಾ ಇದ್ವಿ. ಇಲ್ಲಿ ಎಂತಾ ಮಳೆ.'' ಲಕ್ಷ್ಮಮ್ಮ ಮಾತನಾಡದೆ ಚಪ್ಪರದಂತೆ ಸೋರುವ ಗುಡ್ಲನ್ನು ವಿಷಾದದಿಂದ ನೋಡಿದಳು. ಸೋರುವ ಸ್ಥಳಗಳಲ್ಲೆಲ್ಲಾ ಪಾತ್ರೆಗಳನ್ನು ಇಟ್ಟರು. ''ಬಾ ಮೊಗಾ, ಅವರ ಮನೇಲಿ ಒಂದಿಷ್ಟು ಚಪಾತಿಪಲ್ಯ ಕೊಟ್ಟವರೆ ತಿನ್ನು''. ''ನಿಂ ಸಾವ್ಕಾರ ಊಟ ಕೊಟ್ನೊ ?'' ''ಕೊಡದೀರ ಮತ್ತೆ ?'' ಅಜ್ಜಿ-ಮೊಮ್ಮಗ ತಿಂಡಿ ತಿಂದು, ನೀರು ಕುಡಿದು ಸೋರದೆ ಉಳಿದಿದ್ದ ಚೂರು ಜಾಗದಲ್ಲಿ ಮುದುಡಿಕೊಂಡರು. 'ಖಿಡಿ ಖಿಡಿಲ್' ಎಂದು ಸಿಡಿಲು ಅಪ್ಪಳಿಸಿತು. ಮಳೆಯ ರಭಸ ನಿಮಿಷ ನಿಮಿಷಕ್ಕೂ ಹೆಚ್ಚುತ್ತಲೇ ಇದೆ. ''ದ್ಯಾವ್ರೇ ಯಾವ್ ಕೇಡುಗಾಲಕ್ಕಪ್ಪಾ ಈಪಾಟಿ ಮಳೆ ? ಇದು ಯಾವಾಗ ನಿಲ್ತೈತೊ ? ಅಲ್ಲೀಗಂಟಾ ಈ ಝೋಪಡಿ ಉಳಿದಾತೇ ?'' ಗಿರಿಗೆ ಸಿಟ್ಟು ಬಂದಿತು.

''ಇದೇನಜ್ಜೀ ಅಳ್ಳಿನಾಗೆ ನೀನೂ ಅಪ್ಪಾ ಅವ್ವಾ ಎಲ್ಲಾ ರೈತ್ರುಗೋಳು ಮಳೆ ಬಿದ್ರೆ ಸಾಕಪ್ಪಾ ಸಿವ್ನೆ ಅಂತ ಆಕಾಸ ನೋಡ್ತಿದ್ರಿ, ಪೂಜೆ ಆಕುಸ್ತಿದ್ರಿ ನಾವಿಲ್ಲಿಗೆ ಬರಾವಾಗ ದಾರಿಗುಂಟಾ ಏಳ್ದೆ ನೀನು 'ಮೊಗಾ, ಮಳೆ ಬಂದ್ರೆ ನಮ್ಗೆ ಬದ್ಕು. ಉಳಾದು ಬಿತ್ತಾದು ಬೆಳೆಯಾದು, ಸುಗ್ಗಿ ಅಬ್ಬಾ ಮಾಡಿ ತಿಂಬಾದು. ನಂ ಜಾನುವಾರುಗೋಳ್ಗೆಲ್ಲಾ ಉಲ್ಲು ನೀರು ಇಕ್ಕಾದೂ' ಅಂತಾವ. ಈಗ್ಯೋಡಿದ್ರೆ ಬಯಪಡ್ತೀ.''

''ನನ್ ರಾಜಾ'' ಲಕ್ಷ್ಮಮ್ಮ ಮೊಮ್ಮಗನನ್ನು ಅಪ್ಪಿ ಹಿಡಿದಳು. ''ಅಳ್ಳಿನಾಗೆ ನಂ ಮಾವುನ್ ಕಾಲದ್ದು ಚಿಕ್ದೊ ಪಕ್ದೊ ಒಂದ್ ಮನೇಲಿ ಇದ್ವಿ. ವಯಸ್ಸಾದ್ರೂ ಗಟ್‌ಯಾಗಿತ್ತು ಮನೆ. ಎಂಥಾ ಮಳಿಗೂ ಬೀಳ್ತಿರ್‍ಲಿಲ್ಲಾ. ನಮ್ದೂ ಅಂತ ಒಂದ್ ತುಂಡು ನೆಲವೂ ಇತ್ತು ಕನಪ್ಪಾ. ಮಳೆ ಬಂದ್ರೆ ಅಲ್ಲಿ ನಂ ಜೀವಕ್ಕೆ ಅದ್ಯಾನೋ ದೇವಲೋಕ್ದಾಗೆ ಕುಡೀತರಲ್ಲಾ ಅದೇ ಸುರಿದಂಗಾಯಿತ್ತು.'' ಲಕ್ಷ್ಮಮ್ಮನ ದನಿ ಕಂಪಿಸಿತು. ''ಎಲ್ಲಾ ಒದ್ವು. ನಿಂ ತಾತುನ್ ಕಾಯ್ಲೆಗೆ ಆ ಬಡ್ಡೆತ್ತೋನು ಕಾಳಪ್ಪ ಅಷ್ಟೆಲ್ಲಾ ಅವುನ್ತಾವ ತೋಟತುಡ್ಕೆ ಇದ್ರೂ ಸಾಲ ಕೊಟ್ಟುದ್ಕೆ ನಂ ಮನೆ ನುಂಗ್ಬುಟ್ಟಾ. ತಾತನೂ ಉಳೀಲಿಲ್ಲ. ನಿಂ ಅಪ್ಪಾ ಅಮ್ಮಂಗೆ ಪ್ರಾಯ್ದಾಗೆ ರ್‍ವಾಗ ಬಂತೂ...'' ಲಕ್ಷ್ಮಮ್ಮನಿಗೆ ದುಃಖ ಒತ್ತರಿಸಿಬಂತು. ಗಿರಿಗೂ ಅಷ್ಟೆ. ''ಅಳ್ಬ್ಯಾಡಜ್ಜಿ'' ಎಂದು ಹೇಳಲೂ ದನಿ ಹೊರಬರಲಿಲ್ಲ. ''ಆ ಗೌರ್ಮೆಂಟ್ ಆಸ್ಪತ್ರೆ ಡಾಕ್ಟ್ರುಗಳೂ ನರ್ಸುಗಳೂ ಕಸಗುಡ್ಸೋರೂ ಸೇರ್ಕಂಡು ಜಿಗಣೆ ಈರ್‍ದಂಗೆ ನಂ ರಕ್ತ ಈರ್‌ಬುಟ್ರು. ತುಂಡು ಭೂಮಿಯೂ ಹೋಯ್ತು. ನೀನೂ ತಬ್ಲಿಯಾಗ್ಬುಟ್ಟೆ. ಎತ್‌ಗೋಳು ಕಟುಕರ ಬಾಯಿಗೆ ಒದ್ವು. ಪರದೇಸಿಗಳಾಗಿ ಇಲ್ ಬಂದು ಬಿದ್ವಿ ಕನಪ್ಪಾ''. ಮಳೆ ಕಿಂಚಿತ್ ಕರುಣೆಯೂ ಇಲ್ಲದೆ 'ಹೋ' ಎಂದು ನಗುತ್ತಿರುವಂತಿತ್ತು. ನೆಲದ ಮೇಲೆಲ್ಲಾ ನೀರು ಹರಿಯತೊಡಗಿತು. ''ನಂ ಎತ್ತುಗೋಳ್ನ ಕೊಂದ್‌ಬುಟ್ರಾ ಅಜ್ಜಿ ಆ ರಾಕಸರೂ ?''

''ಊಂ ಅವ್ರ ಕಸ್ಬೇ ಅದು. ಅವ್ರನ್ ಅಂದು ಏನ್ ಲಾಬ ! ಬರ್ಗಾಲದಾಗೆ ನನ್ನಂಥ ಬಡವಿ ಎಂಗ್ಸನ್ನ ಕಾಯ್ಲೆ ಕಸಾಲೆ ಬಂದೋರ್‍ನ ಇಂಡಿ ಈರ್ತಾರಲ್ಲಾ ಈ ಜಮೀನ್ದಾರ್‍ರು, ಲೇವಾದೇವಿಯೋರು, ಆಫೀಸರ್‍ಗಳು, ದಾಗುಟ್ರುಗಳು - ಇವ್ರು ಕನಪ್ಪಾ ರಾಕ್ಸಸರು.''

ಅಜ್ಜಿ-ಮೊಮ್ಮಗ ಮುರುಕಲು ಬಕೆಟ್ಟಿನಲ್ಲಿ ನೀರು ತುಂಬಿತುಂಬಿ ಹೊರಚೆಲ್ಲತೊಡಗಿದರು. ಆಗ ಇವರ ಝೋಪಡಿಗೆ ಹತ್ತಿರದಲ್ಲೇ ಪುನಃ ಕಿವಿಗಡಚಿಕ್ಕುವಂತೆ ಸಿಡಿಲು ಬಡಿಯಿತು. ಲಕ್ಷ್ಮಮ್ಮ ಭಯದಿಂದ ನಡುಗುತ್ತಾ ಮೊಮ್ಮಗನನ್ನು ಹತ್ತಿರ ಸೆಳೆದುಕೊಂಡು ಬಾಗಿಲ ಹೊರಗೆ ಇಣುಕಿದಳು. ಸಿಡಿಲು ಎಲ್ಲಿಗೆ ಬಡಿಯಿತೊ ಏನೊ ''ಸಿವಾ ಅವ್ನೆ ಬಾ ಮೊಗ'' ಎಂದು ಅಜ್ಜಿ ಮೊಮ್ಮಗನೊಂದಿಗೆ ಮೂಲೆ ಸೇರಿದಳು. ''ಸಿಡ್ಲು ಈ ಗುಡಿಸ್ಲಿಗೆ ಬಡೀತದಾ ? ಗುಡಿಸ್ಲು ಬಿದ್ದೋಯ್ತದಾ ?'' ಗಿರಿ ಗೊಣಗಿದನು. ''ಅಂಗೆಲ್ಲಾ ಅಂದ್ಕಾಬಾರ್ದು. ಆಗೋದಾಗ್ಲಿ ಅಂತ ಸಿವನ ಎಸರೇಳ್ತಾ ಮನಿಕ್ಕಾ. ಮಳೆ ನಿಲ್ಲಾತನ್ಕ ಭಯವೇ.'' ಅಜ್ಜಿ ಮೊಮ್ಮಗ ಭ್ರೂಣದ ಶಿಶುವಿನಂತೆ ಕೈಕಾಲು ಮಡಿಚಿಕೊಂಡು ಮಲಗಿದರು. ''ಬರ ಬಂದ್ರೂ ನಮ್ಗೆ ಭಯ ! ಮಳೆ ಬಂದ್ರೂ ಭಯ ! ಈ ಭಯ ಇಲ್ದೆ ನಾವು ಇರಾಅಂಗೆ ಮಾಡ್ಕಬೇಕಜ್ಜೀ ಅದಾಗಕ್ಕಿಲ್ಲಾ ?'' ಮೊಮ್ಮಗನ ಯಕ್ಷಪ್ರಶ್ನೆಗೆ ಉತ್ತರಿಸಲಾಗದೆ ಲಕ್ಷ್ಮಮ್ಮ 'ಶಿವ ಶಿವ' ಎಂದು ಜಪಿಸತೊಡಗಿದಳು.



ಕೆ. ವಿ. ಚಂದ್ರಜ್ಯೋತಿ
ನಂ.೨/೯೪೬, ಎಸ್.ಟಿ.ಡಿ. ಹಿಂಭಾಗ, ಶ್ರೀ ಬಲಮುರಿ ಗಣಪತಿ ದೇವಸ್ಥಾನ ರಸ್ತೆ
ಕೆ. ಆರ್. ಬಡಾವಣೆ, ತುಮಕೂರು - ೫೭೨ ೧೦೧

ಪ್ರತಿ



# 'ಮನುಷ್ಯಜಾತಿ ತಾನೊಂದೇ ವಲಂ'

'ಮನುಷ್ಯಜಾತಿ ತಾನೊಂದೇ ವಲಂ' ಎನ್ನುವ ಪಂಪನ ಮಾತನ್ನು ಶೀರ್ಷಿಕೆಯಾಗಿಟ್ಟುಕೊಂಡು ಗುಣಾಢ್ಯನಿಂದ ಮೊದಲುಗೊಂಡು ಕುವೆಂಪುವರೆಗಿನ ಅಸ್ಪೃಶ್ಯತೆಯ ಎಳೆಗಳನ್ನು ಬಿಚ್ಚಿಡುತ್ತಾ ಅದರ ಕರಾಳತೆಯನ್ನು ಸಾರುವ ಧ್ವನಿ, ಬೆಳಕು, ದೃಶ್ಯವೈಭವ ಕಾರ್ಯಕ್ರಮವನ್ನು ವಾರ್ತಾ ಇಲಾಖೆ ಇತ್ತೀಚಿಗೆ ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ಆಯೋಜಿಸಿತು. ಅಸ್ಪೃಶ್ಯತೆ ಕುರಿತಂತೆ ರಾಜ್ಯಾದ್ಯಂತ ಜಾಗೃತಿ ಮೂಡಿಸುವುದು ಇದರ ಮುಖ್ಯ ಉದ್ದೇಶ. ನಾಡಿನ ಖ್ಯಾತ ಸಂಸ್ಕೃತಿ ಚಿಂತಕರು, ಕವಿಗಳು ಮತ್ತು ನಾಟಕಕಾರರಾದ ಶ್ರೀ ಕೋಟಿಗಾನಹಳ್ಳಿ ರಾಮಯ್ಯ, ಶ್ರೀ ಲಕ್ಷ್ಮೀಪತಿ ಕೋಲಾರ ಹಾಗೂ ಡಾ|| ಕೆ.ವೈ. ನಾರಾಯಣಸ್ವಾಮಿಯವರು ರಚಿಸಿದ ಈ ನೃತ್ಯರೂಪಕವನ್ನು ಪ್ರಸಿದ್ಧ ರಂಗ ನಿರ್ದೇಶಕರಾದ ಸಿ. ಬಸವಲಿಂಗಯ್ಯನವರು ನಿರ್ದೇಶಿಸಿದರು.

ಅಸ್ಪೃಶ್ಯತೆ ಈ ದೇಶಕ್ಕಂಟಿದ ಲಜ್ಜಾಸ್ಪದ ಕಳಂಕ. ಇದರಿಂದ ಎಲ್ಲೆಡೆ ಕೊಲೆ, ಸುಲಿಗೆ, ಹಿಂಸೆ, ದೌರ್ಜನ್ಯಗಳು ನಿರಂತರವಾಗಿ ನಡೆಯುತ್ತಲೇ ಇವೆ. ಮಾನವ ಹಕ್ಕುಗಳ ದಮನಕ್ಕೆ ತಾಯಿಬೇರಾಗಿರುವ ಈ ಅಸ್ಪೃಶ್ಯತೆ ಪ್ರತಿಯೊಬ್ಬ ಭಾರತೀಯನ ಸಾಕ್ಷೀಪ್ರಜ್ಞೆಯನ್ನು ಅಲ್ಲಾಡಿಸದಿರುವುದು ಈ ದೇಶದ ದುರಂತ. ಭಾರತದ ಸಂದರ್ಭದಲ್ಲಿ ಅಸ್ಪೃಶ್ಯತೆ ಪ್ರತಿಯೊಬ್ಬರ ರಕ್ತದಲ್ಲಿ ಸೇರಿ ಬದುಕಿನ ಒಂದು ಭಾಗವಾಗಿಬಿಟ್ಟಿದೆ. ಪ್ರತಿಯೊಬ್ಬ ಭಾರತೀಯನೂ ಈ ತಾರತಮ್ಯವನ್ನು ಸಾರ್ವಜನಿಕವಾಗಿ 'ತಪ್ಪು' ಎನ್ನುತ್ತಾನೆ. ಆದರೆ ವೈಯಕ್ತಿಕ ನೆಲೆಯಲ್ಲಿ ಅದನ್ನು ಯಾವ ದ್ವಂದ್ವವೂ ಇಲ್ಲದೆ 'ಸರಿ' ಎನ್ನುವಂತೆ ಆಚರಿಸುತ್ತಾನೆ. ಇಂತಹ ಅಪ್ಪಟ ಆತ್ಮವಂಚನೆಯ ಮನಸ್ಸನ್ನು ಪರಿಶುದ್ಧಗೊಳಿಸಿ ಮಾನವೀಯಗೊಳಿಸುವುದು ಸುಲಭದ ಮಾತಲ್ಲ. ಹೀಗೆ ಅಸ್ಪೃಶ್ಯತೆಯ ಬೇರುಗಳು ಆಳ ಮತ್ತು ವಿಶಾಲವಾಗುತ್ತಲೇ ಇವೆ ಅನ್ನುವುದನ್ನು ಚರಿತ್ರೆಯ ಅನೇಕ ಘಟನೆಗಳ ಮೂಲಕ ಈ ದೃಶ್ಯರೂಪಕ ಬಿಚ್ಚಿಡುತ್ತದೆ.

ಭೂಮಿ ಸೃಷ್ಟಿಯಾದಾಗ ಕೃಷಿಯು ಮನುಷ್ಯನ ಮೊದಲ ಚಟುವಟಿಕೆಯಾಗಿ ರೂಪುಗೊಂಡಿತು. ಸಂಪತ್ತಿನ ಕ್ರೋಢೀಕರಣವಾದಾಗ ಅಧಿಕಾರ ಎನ್ನುವುದು ಹೆಪ್ಪುಗಟ್ಟಲು ಶುರುವಾಯಿತು. ಅಸ್ಪೃಶ್ಯತೆ ಪ್ರಾರಂಭವಾದುದು ಈ ಘಟ್ಟದಿಂದಲೇ ಎನ್ನುವುದನ್ನು ಈ ಕಾರ್ಯಕ್ರಮ ಸ್ಪಷ್ಟವಾಗಿ ಮಂಡಿಸುತ್ತದೆ. ಅಂದರೆ ಜ್ಞಾನ ಮತ್ತು ಅಧಿಕಾರ ಎರಡೂ ಆಯುಧಗಳ ರೂಪ ಪಡೆದು ನಿರಂತರವಾಗಿ ತಳಸಮುದಾಯಗಳ ಮೇಲೆ ಹಲ್ಲೆ ನಡೆಸುತ್ತಲೇ ಬಂದಿವೆ. ಹಾಗೆಯೇ ಮಾನವಹಕ್ಕುಗಳ ಬಗೆಗಿನ ಹೋರಾಟವೂ ಅಂದಿನಿಂದಲೂ ನಡೆಯುತ್ತಿದೆ ಎನ್ನುವುದಕ್ಕೆ ಗುಣಾಢ್ಯನ ಪಾತ್ರ ಸ್ಪಷ್ಟವಾಗಿ ನಿಲ್ಲುತ್ತದೆ. ಅಸ್ಪೃಶ್ಯನಾದ ಗುಣಾಢ್ಯ ಮೊಟ್ಟಮೊದಲಿಗೆ ವಿದ್ಯೆ ಕಲಿತು ಕಥೆಗಾರನಾಗುವುದರ ಮೂಲಕ ಸವಾಲುಹಾಕುತ್ತಾನೆ. ಹಾಗೂ ಶೆಟ್ಟರ ಮಗಳಾದ ಸುಮಂಗಳೆ ಮಾತಂಗನನ್ನು ನೋಡಿ ತನ್ನ ಕಣ್ಣುಗಳು ಮಲಿನವಾದವು ಎಂದು ಪನ್ನೀರಿನಿಂದ ತೊಳೆದುಕೊಳ್ಳುತ್ತಾಳೆ. ಇದರಿಂದ ಮಾತಂಗನಿಗೆ ಬಹಳ ಅವಮಾನವಾಗುತ್ತದೆ. ಕೊಲೆಗಿಂತಲೂ ಕ್ರೂರವಾದ ಜಾತಿ ಆಧಾರಿತ ಅವಮಾನ ತನ್ನ ಸ್ವಾಭಿಮಾನವನ್ನು ಕೆಣಕಿದಂತಾಗಿ ಮಾತಂಗನು ಮಂಗಳೆಯನ್ನು ಮದುವೆಯಾಗುವವರೆಗೂ ಬಿಡುವುದಿಲ್ಲ. ನಮ್ಮ ಜಾತಿ ಆಧಾರಿತ ಕಳಂಕಪೂರಿತ ಇತಿಹಾಸದಲ್ಲಿ ಜರುಗಿದ ಅಪರೂಪದ ಈ ಘಟನೆ ಜಾತ್ಯತೀತ ಮನಸ್ಸುಗಳಲ್ಲಿ ಆತ್ಮಸ್ಥೈರ್ಯವನ್ನು ಇಮ್ಮಡಿಸುತ್ತದೆ. ನೃತ್ಯರೂಪದಲ್ಲಿ ಬರುವ ಜ್ಯೋತಿಗಳೇ ಹೇಳುವಂತೆ ''ಜಾತಿ ಅನ್ನೋದು ಹತ್‌ಮನೆ ಬಾಗ್ಲು ಇದ್ದಂಗೆ, ಒಂದು ಬಾಗ್ಲು ತೆಗೆದ್ರೆ ಒಂಬತ್ತು ಬಾಗ್ಲು ಮುಚ್ಕಂತವೆ. ಒಂದೊಂದ್ ಕಾಲ್ದಾಗಲೂ ಒಬ್ಬೊಬ್ಬ ಮಹಾತ್ಮನು ಒಂದೊಂದು ಬಾಗ್ಲು ತೆಗ್ಯಾಕೆ ಎಷ್ಟು ಕಷ್ಟಪಟ್ಟೋನೆ'' ಅನ್ನೋದೇ ಅಸ್ಪೃಶ್ಯತೆಯ ಜಟಿಲತೆಯನ್ನು ಮನವರಿಕೆ ಮಾಡಿಕೊಡುತ್ತದೆ.

ಚರಿತ್ರೆ ಮತ್ತು ಪುರಾಣಗಳೆರಡರಲ್ಲೂ ಅಸ್ಪೃಶ್ಯತೆಯ ಪ್ರಮಾಣ ಅಗಾಧವಾಗಿದೆ. ಶ್ರೀರಾಮಚಂದ್ರನು ಶೂದ್ರ ವಿದ್ಯೆ ಕಲಿಯಬಾರದು, ಅದು ಅಧರ್ಮ ಎಂದು ಕುತಂತ್ರದಿಂದ ಶಂಬೂಕನನ್ನು ಕೊಲೆಮಾಡುತ್ತಾನೆ. ದ್ರೋಣಾಚಾರ್ಯನು ಏಕಲವ್ಯ ಕಾಡುಹುಡುಗ ಎನ್ನುವ ಕಾರಣಕ್ಕೆ ಅವನಿಗೆ ವಿದ್ಯೆ ಕಲಿಸದಿದ್ದರೂ ಆತನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆಯುತ್ತಾನೆ. ಕರ್ಣ ಸಮರ್ಥ ಶೂರನಾಗಿದ್ದರೂ ಸೂತಕುಲದವನೆಂದು ಜರಿದು ಹೀಯಾಳಿಸುತ್ತಾರೆ. ಆದರೆ ''ಕುಲಮಿರ್ದುದೆ ಕುಲದೋಳ್ ? ಕುಲಮಿರ್ದುದೇ ಶಿರಸ್ತಂಭದೋಳ್ ?'' ಎಂದು ಕುಲದ ನೆಪದಲ್ಲಿ ಸೂತಪುತ್ರನಿಗೆ ಅರ್ಹತೆ ಇಲ್ಲವೆಂದಿರಿ, ಈ ಕುಲವೆನ್ನುವುದು ಎಂದೋ ಕಳಂಕಿತವಾಗಿದೆ, ಎನ್ನುವ ದುರ್ಯೋಧನನ ಮಾತುಗಳಿಗೆ ಇಂದಿಗೂ ಉತ್ತರ ಸಿಕ್ಕಿಲ್ಲ.

ಹರಿಶ್ಚಂದ್ರ ಇಂದಿಗೂ ಜನಸಾಮಾನ್ಯರ ಸ್ಮೃತಿಯಲ್ಲಿ ಸತ್ಯದ ಪ್ರತೀಕವಾಗಿಯೆ ಉಳಿದಿದ್ದಾನೆ. ಆದರೆ ಆತ ಕೇವಲ ಹೊರಮುಖೀ ಸತ್ಯವಂತ ಎನ್ನುವುದನ್ನು ಮುಚ್ಚಿಡಲಾಗಿದೆ. ನಿಜದ ಅರ್ಥದಲ್ಲಿ ಹೊಲತಿಯರಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗದೆ, ಜಾತಿ ಪ್ರತಿಪಾದಕನಾಗಿದ್ದಾನೆ. ಮಾತಿಗೆ ತಪ್ಪಿದ ಜಾತಿವಂತ ಹರಿಶ್ಚಂದ್ರ ಸತ್ಯವಂತನಾದ. ಆದರೆ ಹೊಲತಿಯರ ಪ್ರಶ್ನೆ ಲೋಕದಲ್ಲಿ ಉತ್ತರ ಕಾಣದೆ ಇನ್ನೂ ಅಲೆಯುತ್ತಿದೆ ಎನ್ನುವ ಮಾತು ಪ್ರತಿಯೊಬ್ಬ ಪ್ರೇಕ್ಷಕನನ್ನು ಸತ್ಯದ ಕಡೆಗೆ ಅವಲೋಕಿಸುವಂತೆ ಮಾಡುತ್ತದೆ. ಅದರಲ್ಲೂ ಕಲ್ಯಾಣದ 'ಸಾಲು'ನಲ್ಲಿ ಮಂಟೇಸ್ವಾಮಿಯ ಮಾತುಗಳು ಜಾತಿವಂತ ಡಾಂಭಿಕ ಸ್ವಾಮಿಗಳಿಗೆ ಕೊಳ್ಳಿಯಿಟ್ಟಂತಾಗುತ್ತದೆ. ಧರೆಗೆ ದೊಡ್ಡವರೇ ಹೇಳುವಂತೆ ''ಬಸವಣ್ಣ ಜಾತಿ ಗೋಡೆಯನ್ನು ಕೆಡವಿ ಮಹಾಮನೆ ಕಟ್ಟಿದೆಯಲ್ಲೋ, ಆ ಮಹಾಮನೆಯ ತುಂಬಾ ಜಾತಿ ಗಿಡಗಳು ಬೇರು ಬಿಟ್ಟು ಬೆಳೆದು ನಿಂತವಲ್ಲೋ'' ಎನ್ನುವಾಗ ಈಗಿನ ಲಂಡಪುಂಡ ಜಂಗಮರು, ಸ್ವಾಮೀಜಿಗಳು ಕಣ್ಮುಂದೆ ಬರುತ್ತಾರೆ.

ನಾವು, ಎಂದರೆ ಈ ದೇಶದ ಮೂಲ ನಿವಾಸಿಗಳು, ನೀರು, ಗಾಳಿ, ಬೆಳಕು ಎಲ್ಲಕ್ಕೂ ಹಕ್ಕುದಾರರು. ಈ ದೇಶದ ಸರ್ವಸಂಪತ್ತಿನಲ್ಲಿ ನಮ್ಮ ಶ್ರಮದ ಪಾಲಿದೆ. ಬಾವಿ, ಕೆರೆ, ಗುಡಿ, ಗೋಪುರ ಕಟ್ಟಿದವರು ನಾವು. ''ನಾವು ಕಟ್ಟಿದ ಗುಡಿಗೆ ನಮ್ಮ ಪ್ರವೇಶವಿಲ್ಲ, ದನಗಳನ್ನು ತೊಳೆಯುವ ಕೆರೆಯ ನೀರನ್ನು ನಾವು ಬಳಸುವಂತಿಲ್ಲ. ಇದು ಮಾನವೀಯತೆಗೆ ಬಗೆದಿರುವ ದ್ರೋಹ'' – ಎನ್ನುವ ಅಂಬೇಡ್ಕರರ ಮಾತುಗಳು ಈ ದೇಶದ ದಲಿತರ ಪಾಲಿಗೆ ಉತ್ತರ ಕಾಣದೆ ಹಾಗೇ ಕುಳಿತಿವೆ. ಇಷ್ಟೆಲ್ಲಾ ದುರಂತ ಸಂಗತಿಗಳು ನಮ್ಮ ಅಂಗೈ ಹುಣ್ಣಿನಂತೆ ಕಣ್ಣಿಗೆ ರಾಚುತ್ತಿದ್ದರೂ, ಜನರು ಏನೂ ಆಗಿಯೇ ಇಲ್ಲ ಎನ್ನುವಂತೆ ನಿರಾಳವಾಗಿರುವುದನ್ನು ನೋಡಿದರೆ ಈ ನೆಲದಲ್ಲಿ ಜಾತಿಯ ಹೆಸರಿನಲ್ಲಿ, ಶೋಷಣೆಯ ಹೆಸರಿನಲ್ಲಿ ಇನ್ನೆಷ್ಟು ರಕ್ತ ಹರಿಯಬೇಕೋ ಎನ್ನುವ ಆತಂಕ ಹುಟ್ಟುತ್ತದೆ. ಹೀಗಾಗಿ ಅಸ್ಪೃಶ್ಯತೆಯ ಸ್ಪಷ್ಟ ಚಿತ್ರಣವನ್ನು, ಅದರ ಹುಟ್ಟಿನಿಂದ ಇಲ್ಲಿಯವರೆಗೆ, ಅಂದರೆ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಗುಣಾಢ್ಯ, ಮಾತಂಗ, ರಾಮ, ಶಂಬೂಕ, ಏಕಲವ್ಯ, ಕರ್ಣ, ಹರಿಶ್ಚಂದ್ರ, ಬಸವಣ್ಣ, ಮಂಟೇಸ್ವಾಮಿ, ಅಲ್ಲಮ, ಕನಕ, ಪುರಂದರ, ಸರ್ವಜ್ಞ, ಶರೀಫ, ಕುವೆಂಪು, ಕುಸುಮ ಬಾಲೆ ಇವರುಗಳು ಕಂಡುಂಡದನ್ನು ಸಮಗ್ರವಾಗಿ ಕಣ್ಣಿಗೆ ಕಟ್ಟಿಕೊಡುತ್ತದೆ. ಈ ಅನಿಷ್ಟ ಜಾತಿ ಕಳಂಕವನ್ನು ತೊಳೆಯಲು ಈ ಮಹನೀಯರು ಇನ್ನೆಷ್ಟು ಹಳ್ಳಗಳಾಗಿ, ತೊರೆಗಳಾಗಿ, ನದಿಗಳಾಗಿ ಹರಿಯಬೇಕೋ ತಿಳಿಯದು. ಇಂತಹ ಕಾರ್ಯಕ್ರಮವನ್ನು ರೂಪಿಸಿದ ಎಲ್ಲರೂ, ವಾರ್ತಾ ಇಲಾಖೆಯೂ ನಿಜಕ್ಕೂ ಅಭಿನಂದನಾರ್ಹರು.

**ರವಿಕುಮಾರ್ ಬಾಗಿ**

ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು - ೫೬೦ ೦೫೬

# ಮೂರ್ತ ಸ್ವರೂಪದಲ್ಲಿ ಅಮೂರ್ತ ಭಾವನೆಗಳು



ಮಂಜುನಾಥ ಹೆಚ್. ಪಿ

**ಹಾ**ಸನದ ಮಂಜುನಾಥ ಹೆಚ್.ಪಿ.ಯವರ ಸರಣಿ ಕಲಾಕೃತಿಗಳಲ್ಲಿ ಮೇಲ್ನೋಟಕ್ಕೆ ಒಂದು ಮೂರ್ತ ಆಕೃತಿ ಇದೆ. ಆದರೆ ಅದರ ಹಿನ್ನೆಲೆಯಲ್ಲಿ ವಿಶೇಷ ಅರ್ಥವನ್ನು ಹೇಳುವ ಅಮೂರ್ತ ಭಾವನೆಗಳಿವೆ. ಒಬ್ಬ ಸಾಮಾನ್ಯ ನೋಡುಗನನ್ನು ಆಕರ್ಷಿಸುವ ಸರಳತೆ ಇದೆ, ವಿಮರ್ಶಕರನ್ನು ಚಿಂತನೆಗೆ ದೂಡುವ ಸೂಕ್ಷ್ಮತೆಯೂ ಅದರೊಳಗಿದೆ.

ಮೈಸೂರಿನ 'ಕಾವಾ'ದಲ್ಲಿ ಚಿತ್ರಕಲಾ ಪದವಿಯನ್ನು, ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿಯನ್ನು, ಪಡೆದಿದ್ದಾರೆ. ಹತ್ತಾರು ಪ್ರಮುಖ ಚಿತ್ರಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿರುವ ಮಂಜುನಾಥ್ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ.

**ಚಿತ್ರ ಬರಹ : ಜಿ. ಎಂ. ಬೊಮ್ನಳ್ಳಿ, ಬೊಮ್ನಳ್ಳಿ, ತಾ. ಶಿರಸಿ (ಉತ್ತರ ಕನ್ನಡ) - ೫೮೧ ೪೦೨**



'ಕರಗುತ್ತಿರುವ ಭೂಮಿ' – ತೈಲವರ್ಣ ಕಲಾಕೃತಿ



'ಅಪಾಯದಲ್ಲಿ ಭೂಮಿ' – ತೈಲವರ್ಣ ಕಲಾಕೃತಿ



'ರಕ್ಷಣೆಯಿಲ್ಲದ ಸಾರಿಗೆ' – ತೈಲವರ್ಣ ಕಲಾಕೃತಿ



'ಪರಿಸರ'– ತೈಲವರ್ಣ ಕಲಾಕೃತಿ



'ಬೇಯುತ್ತಿರುವ ನೆಲ' – ತೈಲವರ್ಣ ಕಲಾಕೃತಿ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /SEPTEMBER 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.